# ಶ್ರೀ ಲಿಂಗಮಹಾಪುರಾಣಂ

ಉತ್ತರಭಾಗ—ಸಂಪುಟ ೬

ಅಧ್ಯಾಯಗಳು ೨೨-೫೫



॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯಾ—೧೯

# ಶ್ರೀ ಲಿಂಗಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದಲ್ಲಿ ಅರ್ಥಾನುವಾದ, ವಿವರಣೆಗಳೊಡನೆ)

ಉತ್ತರಭಾಗ—ಸಂಪುಟ ೬

ಅಧ್ಯಾಯಗಳು ೨೨–೫೫

ಅನುವಾದಕ:

ಆಸ್ಥಾನ ಮಹಾವಿದ್ವಾನ್

**ಎಡತೊರೆ ಚಂದ್ರಶೇಖರ ಶಾಸ್ತ್ರೀ, ಎಂ.ಎ.**

ಸಾಹಿತ್ಯ ವಿದ್ವಾನ್



ಮೈಸೂರು :

ಬೆಂಗಳೂರು ಪ್ರೆಸ್ ಬ್ರಾಂಚ್

೧೯೪೬

# ಮುನ್ನುಡಿ

॥ ಶ್ರೀ ಗಣೇಶ ಶಾರದಾಗುರುಭ್ಯೋ ನಮಃ ॥

ಶ್ರೀಲಿಂಗಮಹಾಪುರಾಣವು ಅದರ ಕೊನೆಯದಾದ ಈ ಆರನೆಯ ಸಂಪುಟದಲ್ಲಿ ಮುಗಿದಿದೆ. ಪುರಾಣಗಳು ಹಿಂದಿನಕಾಲದಲ್ಲಿ ಈ ಭಾರತ ಭೂಮಿಯಲ್ಲಿದ್ದ ನಮ್ಮ ಪೂರ್ವಿಕರಾದ ಆರ್ಯರ ಚರಿತ್ರೆಗಳನ್ನು ತಿಳಿಸುತ್ತವೆ. ಪ್ರಾಚೀನಕಾಲದಲ್ಲಿ ಆ ಮಹಾನುಭಾವರು ತಮ್ಮ ಜೀವನದಲ್ಲಿ ಸಾಧಾರಣವಾಗಿಯೂ, ವಿಶೇಷಸಂದರ್ಭಗಳಲ್ಲೂ ನೆರವೇರಿಸಿದ ದೊಡ್ಡಕೆಲಸಗಳನ್ನೂ, ಹೇಳಿದ ಮಾತುಗಳನ್ನೂ, ಯೋಚಿಸಿದ ಭಾವಗಳನ್ನೂ, ತಿಳಿಯಹೇಳುತ್ತವೆ. ಈ ನಡೆ, ನುಡಿ, ಭಾವಗಳ ಒಟ್ಟಿಗೆ (Culture) ಸಂಸ್ಕೃತಿ ಎಂದು ಹೆಸರು. ಭಾರತಾರ್ಯರ ಸಂಸ್ಕೃತಿಯು ಧಾರ್ಮಿಕವಾದುದು ಎಂದರೆ ಅವರ ದಿನಗಟ್ಟಲೆಯ ಜೀವನಕ್ರಮದಲ್ಲಿ ಧರ್ಮಾಚರಣೆಯು ಹಾಸುಹೊಕ್ಕಿನಂತೆ ಸೇರಿ ಹೊಂದಿಕೊಂಡಿದೆ. ಎಂದು ಗೊತ್ತಾಗುತ್ತದೆ. ಧರ್ಮ ವೆಂದರೆ ಎಲ್ಲ ಜನರನ್ನೂ, ಪ್ರಾಣಿಗಳನ್ನೂ, ಇಡಿಯ ಪ್ರಪಂಚವನ್ನೂ ಒಕ್ಕಟ್ಟಿನಿಂದ ಹಿಡಿದುನಿಲ್ಲಿಸಿ, ಉಳಿದು ಊರ್ಜಿತವಾಗಿ ಮುಂದುವರಿಯಲು ಸಹಕರಿಸುತ್ತಿರುವಂತೆ ಮಾಡುತ್ತಿರುವ ನೀತಿ ತತ್ವವು. ಈ ಅಭಿಪ್ರಾಯವನ್ನೇ "ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ" ಮಹಾನಾರಾಯಣೋಪನಿಷತ್ ೧೭.೬., "ಸತ್ಯಂ ವದ, ಧರ್ಮಂ ಚರ." ತೈ.ಉ. ೧.೧೧.೧., ಎಂಬ ಶ್ರುತಿವಾಕ್ಯಗಳು ಸಾರುತ್ತವೆ. "ಧರ್ಮ ಏವ ಹತೋ ಹಂತಿ ಧರ್ಮೋ ರಕ್ಷತಿ ರಕ್ಷಿತಃ।" ೮.೧೫., ವಿದ್ವದ್ಭಿಸ್ಸೇವಿತಸ್ಸದ್ಭಿಃ ನಿತ್ಯಮದ್ವೇಷ ರಾಗಿಭಿಃ । ಹೃದಯೇನಾಭ್ಯನುಜ್ಞಾತಃ ಯೋ ಧರ್ಮಸ್ತಂ ನಿಬೋಧತ ॥" ಮನುಸ್ಮೃತಿ ೨.೧. ಎಂಬ ಸ್ಮೃತಿವಾಕ್ಯಗಳೂ ವಿಧಿಸುತ್ತಿವೆ. ಸರ್ವಸಾಮಾನ್ಯವಾದ ಈ ವಿಶ್ವಧರ್ಮವನ್ನೂ, ವಿಶೇಷರೂಪದ ವರ್ಣಾಶ್ರಮಧರ್ಮಗಳನ್ನೂ ಈ ಲಿಂಗಮಹಾಪುರಾಣವೂ, ಇತರವಾದ ಎಲ್ಲ ಪುರಾಣಗಳಂತೆ, ಉದಾಹರಣೆಗಳಿಂದ ವಿಸ್ತರಿಸಿ ವಿವರಿಸುತ್ತದೆ. "ಇತಿಹಾಸಪುರಾಣಾಭ್ಯಾಂ ವೇದಾರ್ಥಮುಪಬೃಂಹಯೇತ್ ।" ಎಂಬಂತೆ

ಪುರಾಣಗಳು ವೇದಾರ್ಥವನ್ನು ದೃಷ್ಟಾಂತರಗಳಿಂದ ವಿಸ್ತರಿಸಿ, ಆಚರಣೆ ಅನುಭವಗಳಿಂದ ದೃಢಪಡಿಸುತ್ತವೆ.

ಮಾನವನು ಮೊದಲು ತನ್ನ ಯೋಗಕ್ಷೇಮಗಳ ಸಾಧನೆಗಾಗಿಯೂ ಆಮೇಲೆ ತನ್ನವರ ಸುಖ ಸಂಪಾದನೆ ದುಃಖನಿವಾರಣೆಗೋಸ್ಕರವೂ ದುಡಿಯುತ್ತಿರುತ್ತಾನೆ. ಹಾಗೆಯೇ ಅವನು ಐಹಿಕಾನುಭವಗಳಿಂದ ಪ್ರಯತ್ನಕ್ಕೆ ಫಲವಾಗುವುದನ್ನೂ, ಪ್ರಯತ್ನವಿಲ್ಲದಿದ್ದರೆ ಫಲವು ದೊರೆಯದಿರುವುದನ್ನೂ, ಸಾಮಾನ್ಯವಾಗಿ ಎಲ್ಲಸಂದರ್ಭಗಳಲ್ಲೂ ಮನಗಾಣುತ್ತಾನೆ. ಅದರಿಂದ ಪ್ರಯತ್ನಕ್ಕೆ ಮುಂದೆ ಫಲವು ಲಭಿಸುತ್ತದೆಂದೂ, ಫಲಕ್ಕೆ ಹಿಂದೆ ಪ್ರಯತ್ನವು ಇದ್ದೇ ಇರಬೇಕೆಂದೂ ತಿಳಿಯುತ್ತಾನೆ. ಇದೇ ಕರ್ಮವಾದದ (Law of Karma) ಸಿದ್ಧಾಂತವು. ಆದರೆ ಕೆಲವು ಸಂದರ್ಭಗಳಲ್ಲಿ ಪ್ರಯತ್ನವನ್ನು ಮಾಡಿದ್ದರೂ ಫಲವಾಗಲು ಅಡ್ಡಿಯಾಗಿರುವುದುಂಟು. ತಕ್ಕ ಪ್ರಯತ್ನವನ್ನು ಮಾಡಿದಮೇಲೆ ಫಲವನ್ನು ಅನುಭವಿಸುವುದಕ್ಕಿಂತ ಮುಂಚೆಯೇ ಮರಣವೂ ಸಂಭವಿಸುವುದುಂಟು. ಹಾಗೆಯೇ ಈಗ ಯಾವ ಪ್ರಯತ್ನವನ್ನೂ ಮಾಡದೆ ಫಲವನ್ನು ಪಡೆದಿರುವುದೂ ಉಂಟು. ಇದರಿಂದ ಕರ್ಮವಾದವು ವ್ಯವಸ್ಥೆ ಇಲ್ಲದ ಸುಳ್ಳೆಂದು ತಿಳಿಯುವುದು ಸರಿಯಲ್ಲವು. ಏಕೆಂದರೆ ಮಾನವನಿಗೆ ತಿಳಿಯದೆ ಇರಬಹುದಾದ, ಅವನ ಪ್ರಯತ್ನಕ್ಕೆ ಮೀರಿರಬಹುದಾದ, ಅಂಶವೂ ಇರುತ್ತದೆ. ಕರ್ಮಾಚರಣೆಯೂ ಅದರ ಫಲಾನುಭವವೂ ಮಾನವನ ಅತ್ಯಲ್ಪವಾದ ಈ ಒಂದು ಜನ್ಮಕಾಲದಿಂದಲೇ ಪರಿಮಿತವಾಗಿದೆ ಎಂದು ತಿಳಿಯಬಾರದು. ಅಲ್ಲದೆ ಜನರ ಪರಿಸ್ಥಿತಿಗಳಲ್ಲಿ ವೈವಿಧ್ಯವಿದೆ. ಹೇಗೆಂದರೆ ದೊರೆ, ಆಳು, ಸಂಪತ್ತು, ಬಡತನ, ರೋಗ, ಆರೋಗ್ಯ, ಬೇಗ ಬೇಗನೆ ತಿಳಿಯುವಶಕ್ತಿ, ದಡ್ಡತನ, ಇವು ಕೆಲಕೆಲವರಲ್ಲಿ ಹುಟ್ಟಿದಾಗಿನಿಂದಲೇ ಕಾಣಬರುತ್ತವೆ. ಇವೆಲ್ಲವೂ ಮಾನವನು ಆಚರಿಸಿಯೂ, ಆಚರಿಸುತ್ತಲೂ, ಇರುವ ಧರ್ಮ ಅಧರ್ಮಗಳ ಫಲವೆಂದೇ ಹೇಳಬೇಕು. ಏಕೆಂದರೆ ಕಾರಣವಿಲ್ಲದೆ ಯಾವ ಫಲವೂ ಉಂಟಾಗದೆಂಬುದು ಗೊತ್ತಾಗಿದೆ. ಆದುದರಿಂದ ಈ ಫಲಗಳಿಗೆ ಕಾರಣಗಳು ಈ ಜನ್ಮದಲ್ಲಿ ಕಾಣಬರದಿದ್ದರೆ ಹಿಂದಿನ ಜನ್ಮದಲ್ಲಿಯಾದರೂ ಇದ್ದಿರಬೇಕೆಂದೂ, ಈಗ ಮಾಡಿದ ಪ್ರಯತ್ನಕ್ಕೆ ಈ ಜನ್ಮದಲ್ಲಿ ಫಲವಾಗದಿದ್ದರೆ ಮುಂದಿನ ಜನ್ಮದಲ್ಲಿಯಾದರೂ ತಪ್ಪದೆ ಫಲವು ದೊರೆಯುವುದೆಂದೂ ಒಪ್ಪುವುದು ಯುಕ್ತಿ ಯುಕ್ತವಾಗಿರುತ್ತದೆ. ಏಕಜನ್ಮವಾದಿಗಳಾದ ಮುಸಲ್ಮಾನರೂ ಕ್ರಿಶ್ಚಿಯನ್ನರೂ ಈ ಜನ್ಮದಲ್ಲಿ ಮಾಡಿದ ಧರ್ಮಕ್ಕೆ ಸ್ವರ್ಗವು ಫಲವೆಂದೂ, ಅಧರ್ಮಕ್ಕೆ ನರಕವು ಫಲವೆಂದೂ ನಂಬಿ ಒಪ್ಪುತ್ತಾರೆ. ಆದರೂ ಈ

ಜನ್ಮದ ಅಲ್ಪಕಾಲದಲ್ಲಿ ಮಾಡಿರುವ ಸ್ವಲ್ಪವಾದ ಧರ್ಮಾಧರ್ಮಗಳಿಗೆ ಅನಂತ ವಾದ ಸ್ವರ್ಗ ನರಕಗಳು ಫಲವೆನ್ನುತ್ತಾರೆ. ಇದನ್ನು ಒಪ್ಪುವುದು ಯುಕ್ತ ವಾದುದಲ್ಲವು. ಅಲ್ಲದೆ ಮೇಲಿನ ವೈವಿಧ್ಯಕ್ಕೆ ಆ ಮತಗಳಲ್ಲಿ ವಿವರಣೆಯು ಸಮಾಧಾನವೂ ದೊರೆಯುತ್ತಿಲ್ಲವು. ಮತ್ತು ದೇವರಿಗೆ ವೈಷಮ್ಯ ನೈರ್ಘೃಣ್ಯಗಳೂ ತಪ್ಪುವಹಾಗಿಲ್ಲವು. ಆದುದರಿಂದ ಹಿಂದೂ ಮತ ಮತ್ತು ಅದರಿಂದ ಹುಟ್ಟಿ ಬೇರ್ಪಟ್ಟು ಬೆಳೆದಿರುವ ಜೈನಮತ, ಬೌದ್ಧ ಮತಗಳಲ್ಲಿ ದೊರೆಯುವ ಈ ವಿವರಣೆಯು ಮಾನವನ ಜವಾಬುದಾರಿ ಯನ್ನು ತಿಳಿಸುತ್ತಾ, ಕೃತಹಾನಿ, ಅಕೃತಾಭ್ಯಾಗಮ, ಎಂಬ ದೋಷ ಗಳೂ ಇಲ್ಲದೆ ಹೆಚ್ಚುಯುಕ್ತವಾಗಿದೆ. ಇದಕ್ಕಿಂತಲೂ ಹೆಚ್ಚು ಸಮ ರ್ಪಕವಾದ ಸಮಾಧಾನವು ಮತ್ತೊಂದು ಇನ್ನೂ ದೊರೆತಿಲ್ಲವು. ಈ ಕರ್ಮವು ಪ್ರವೃತ್ತಿಧರ್ಮ ನಿವೃತ್ತಿಧರ್ಮ ಎಂದು ಎರಡು ಬಗೆಯಾಗಿದೆ ಎಂದು ಈ ಪುರಾಣದಲ್ಲೂ ವಿವರಿಸಿದೆ.

ಈ ಪ್ರಪಂಚದಲ್ಲಿರುವ ಸೌಂದರ್ಯ, ಉದ್ದೇಶ, ಕ್ರಮ, ಇವನ್ನು ಮನಗಂಡ ಭಾರತಾರ್ಯರು, ಇವನ್ನು ಒಳಗೊಂಡಿರುವ ಗಡಿಯಾರವನ್ನು ನೋಡಿ ನಾವು ಕೃತಜ್ಞತೆ ಸಂತೋಷಗಳನ್ನು ಅದನ್ನು ನಿರ್ಮಿಸಿದವನ ವಿಷ ಯದಲ್ಲಿ ತೋರಿಸುತ್ತಿರುವಂತೆ, ಭಾರತಾರ್ಯರೂ ತೋರಿಸಿ, ಈ ಜಗತ್ತಿನ ಸೃಷ್ಟಿ, ಸ್ಥಿತಿ, ಉಪಸಂಹಾರಗಳಿಗೂ, ತಮ್ಮ ಇಷ್ಟಾನಿಷ್ಟಗಳ ಪ್ರಾಪ್ತಿ ಪರಿ ಹಾರಗಳಿಗೂ ಕಾರಣವಾಗಿರುವ ಚೈತನ್ಯತತ್ವವು ಒಂದಿರಬೇಕೆಂದು ತಿಳಿದು, ಆ ತತ್ವವನ್ನು ನಾನಾ ಬಗೆಯ ನಾಮರೂಪಗಳಿಂದ ವರ್ಣಿಸುತ್ತಾ, ಆರಾಧಿ ಸುತ್ತಿದ್ದರು. ಹೇಗೆಂದರೆ "ಇಂದ್ರಂ ಮಿತ್ರಂ ವರುಣಮಗ್ನಿಮಾಹುಃ ಅಥೋ ದಿವ್ಯಸ್ಸಸುಪರ್ಣೋ ಗರುತ್ಮಾನ್ । ಏಕಂ ಸದ್ವಿಪ್ರಾ ಬಹುಧಾ ವದಂತಿ ಅಗ್ನಿಂ ಯಮಂ ಮಾತರಿಶ್ವಾನಮಾಹುಃ ॥" ಋಗ್ವೇದ ೨.೩. ೨೨.; ೧.೨೨.೧೬೪., ಮತ್ತು ನಾಸದೀಯಸೂಕ್ತದಲ್ಲಿ ೮.೭.೧೭.: ೧೦.೧೧ ೧೨೯., "ನಾಸದಾಸೀತ್ ನೋಸದಾಸೀತ್" "ತಮಆಸೀತ್ತಮಸಾಗೂಢ ಮಗ್ರೇ" "ಆನೀದವಾತಂ ಸ್ವಧಯಾ ತದೇಕಂ" ಮುಂತಾದ ವೇದಭಾಗ ಗಳಲ್ಲಿ ಈ ಅಂಶವನ್ನು ಕಾಣಬಹುದು. ಅಲ್ಲದೆ ಈ ಜಗತ್ತಿನಲ್ಲಿರುವ ಜನ ರೆಲ್ಲರೂ ಅನೇಕ ಕರ್ತೃ ಭೋಕ್ತೃಗಳಾಗಿದ್ದಾರೆ. ಇವರ ಕರ್ಮಗಳು ತಮ್ಮ ಫಲಗಳನ್ನು ಅವರವರಿಗೆ ಕೊಡುವುದರಲ್ಲಿ ಗೊಂದಲ ತಿಕ್ಕಾಟಗಳಾಗದಂತೆ, ದೇಶ, ಕಾಲ, ಸನ್ನಿವೇಶಗಳನ್ನು ವ್ಯವಸ್ಥೆಗೊಳಿಸುತ್ತಿರುವ, ಸರ್ವಜ್ಞನೂ ಸರ್ವಶಕ್ತನೂ ಆಗಿರಬೇಕಾದ, ಒಂದು ಚೈತನ್ಯಶಕ್ತಿಯು ಇರಬೇಕೆಂಬುದು ನ್ಯಾಯಪ್ರಾಪ್ತವೂ ಆಗಿರುತ್ತದೆ. ಈ ಚೈತನ್ಯವೇ ದೇವರು. ಈ ವ್ಯವ

ಸ್ಥೆಯೇ ಧರ್ಮವು. ಪ್ರಾಣಿಗಳ ಕರ್ಮಾನುಸಾರವಾಗಿ ಉಂಟಾಗುತ್ತಿರುವ ದೇವರ ಇಚ್ಛೆಯಂತೆ ನಡೆಯುವುದು ಧರ್ಮವು. ಅದಕ್ಕೆ ಪ್ರತಿಯಾಗಿ ನಡೆಯ ಹೋಗುವುದು ಅಧರ್ಮವು. ಕಡೆಗೆ ಧರ್ಮಕ್ಕೇ ಜಯವು ಲಭಿಸುವುದು; ಅಧರ್ಮಕ್ಕೇ ಪರಾಜಯವು ಕೊನೆಯಲ್ಲಾದರೂ ಉಂಟಾಗುವುದು ಖಂಡಿತವು. ಎಂಬ ಈ ಅಂಶಗಳನ್ನು ಈ ಲಿಂಗಮಹಾಪುರಾಣವೂ, ಇತರ ಎಲ್ಲ ಪುರಾಣಗಳಂತೆ, ಉದಾಹರಣೆ, ಉಪಮಾನ, ಯುಕ್ತಿ, ಗಳಿಂದ ತಿಳಿಯಹೇಳುತ್ತದೆ.

ಈ ಪುರಾಣಗಳ ವ್ಯಾಸಂಗದಿಂದ ಜನಸಾಮಾನ್ಯಕ್ಕೆ ಆಗಬೇಕಾದ ಪ್ರಯೋಜನಗಳಲ್ಲಿ ಮುಖ್ಯವಾದವು:—ಆಸ್ತಿಕತೆ, ದೇವರಲ್ಲಿ ಭಕ್ತಿ, ಧರ್ಮಾಚರಣೆಯಲ್ಲಿ ಅಚಲವಾದ ನಿಷ್ಠೆ, ನಮ್ಮ ಮತಧರ್ಮದಲ್ಲಿ ಹೇಗೋಹಾಗೆ ಇತರರ ಮತಧರ್ಮಗಳಲ್ಲೂ ಸಹನೆ, ಆದರ, ಗೌರವವನ್ನು ತೋರಿಸುವ ಮನೋವೈಶಾಲ್ಯ, ಇವೇ ಮುಂತಾದುವು ಆಗಿರುತ್ತವೆ ಎನ್ನಬೇಕು. ಆದರೆ ಈ ಪುರಾಣಗಳಲ್ಲಿ ಕೆಲವು ಶಿವನ ಸರ್ವೋತ್ಕರ್ಷವನ್ನು ತಿಳಿಸುವ ಶೈವ ಪುರಾಣಗಳಾಗಿವೆ. ಮತ್ತೆ ಕೆಲವು ವಿಷ್ಣುವಿನ ಸರ್ವೋತ್ತಮತ್ವವನ್ನು ಬೋಧಿಸುವ ವೈಷ್ಣವ ಪುರಾಣಗಳಾಗಿವೆ. ಇನ್ನು ಕೆಲವು ಈ ಎಲ್ಲರಲ್ಲೂ ಇರುವ ಶಕ್ತಿಗಳಿಗೆ ಮೂಲವಾದ ಆದಿಶಕ್ತಿ ಅಥವಾ ಪರಾಶಕ್ತಿಯ ಪರಮೋತ್ಕರ್ಷವನ್ನು ವಿವರಿಸುವ ಶಾಕ್ತೇಯಪುರಾಣಗಳಾಗಿವೆ. ಜನರು ಇವುಗಳಲ್ಲಿ ತಮತಮಗೆ ಇಷ್ಟವಾದುದನ್ನು ಆದರಿಸುತ್ತಾ ತಮ್ಮದೇ ಶ್ರೇಷ್ಠವೆಂದೂ, ಇತರ ಪುರಾಣಗಳನ್ನು ತಾಮಸಗಳೆಂದೂ, ಎಂದರೆ ಅವನ್ನೂ ರಚಿಸಿದ ವ್ಯಾಸರಿಗೂ ತಮೋಗುಣವು ಮೇಲುಗೈ ಆಗಿದ್ದಾಗ ರಚಿತವಾದುವೆಂದೂ, ಹೇಳಿ ಅಲ್ಲಗಳೆಯುತ್ತಾರೆ. ಇದರಿಂದ ಪರಸ್ಪರವಾಗಿ ಶೈವರಿಗೂ, ವೈಷ್ಣವರಿಗೂ, ಶಾಕ್ತೇಯರಿಗೂ, ದ್ವೇಷಾಸೂಯೆಗಳೂ ಕಲಹ ಕಡಿದಾಟಗಳೂ ಸಂಭವಿಸಿಯೂ ಇವೆ. ಆದುದರಿಂದ ವ್ಯಾಸರಿಂದ ಜನರಿಗೆ ಉಪಕಾರಕ್ಕಿಂತ ಹೆಚ್ಚಾಗಿ ಅಪಕಾರವೇ ಆಗಿದೆ ಎನ್ನುತ್ತಾ ಕೆಲವರು ಆಕ್ಷೇಪಿಸುತ್ತಾರೆ.

ಇಂತಹ ಆಕ್ಷೇಪಕ್ಕೆ ಸಮಾಧಾನವನ್ನು ಆದಿ ಪುರಾಣದ ಮುನ್ನುಡಿಯಲ್ಲಿ ವಿಶದವಾಗಿ ತಿಳಿಸಿರುತ್ತೇನೆ. ಅಲ್ಲದೆ ವೈದಿಕ ಕಾಲದಲ್ಲಿದ್ದ ಆರ್ಯರು ತಮ್ಮ ತಮ್ಮ ರುಚಿ, ಸಂಸ್ಕೃತಿ, ಸನ್ನಿವೇಶಗಳನ್ನು ಅನುಸರಿಸಿ, ದೇವರನ್ನು ಇಂದ್ರ, ಮಿತ್ರ, ಅಗ್ನಿ, ವರುಣ, ವಾಯು ಮುಂತಾದ ನಾಮರೂಪಗಳಲ್ಲಿ ಆರಾಧಿಸುತ್ತಿದ್ದು, ಕಡೆಗೆ ವಿವೇಕಿಗಳಾದ ಅವರು ಆ ಎಲ್ಲ

ದೇವತೆಗಳೂ ಒಂದೇ ಪರತತ್ವದ ನಾನಾ ರೂಪಗಳೆಂದು ಮನಗಂಡು, ಪರಸ್ಪರವಾಗಿ ಮೇಲು, ಕೀಳು, ಎಂಬ ಸಂಕುಚಿತಭಾವವನ್ನು ಬಿಟ್ಟು, ಸರ್ವಸಮತೆ, ಸಹಾನುಭೂತಿ, ಗೌರವಗಳಿಂದ ಸಹಕರಿಸುತ್ತಾ ಮುಂದು ವರಿಯುತ್ತಿದ್ದರು. ಈಗಲೂ ನಾವೂ ಶಿವ, ವಿಷ್ಣು, ಶಕ್ತಿಗಳು ಆ ಏಕದೇವತತ್ವದ ವ್ಯಾವಹಾರಿಕವಾದ (Relative view) ದೃಷ್ಟಿಯಲ್ಲಿನ ನಾಮರೂಪಗಳೆಂದೂ, ಪಾರಮಾರ್ಥಿಕವಾದ (Absolute view) ದೃಷ್ಟಿಯಲ್ಲಿ ಪರತತ್ವವು ಒಂದೇ ಎಂದೂ ತಿಳಿದು, ಪರಮತಸಹನೆ, ಸಹಾನುಭೂತಿಗಳಿಂದ ಸಹಕರಿಸುತ್ತಾ ಮುಂದುವರೆಯು ಬೇಕಾದುದು ನಮ್ಮ ವಿವೇಕ, ಮುಂದಾಲೋಚನೆಗಳುಳ್ಳ ಧರ್ಮವಾಗಿದೆ. ಇದೇ ವಿಶ್ವ ಧರ್ಮದ ಸ್ವರೂಪವೂ ಆಗಿರುತ್ತದೆ.

ಈ ಲಿಂಗಮಹಾಪುರಾಣದಲ್ಲಿ ಪರತತ್ವ ಚೈತನ್ಯವನ್ನು ನಮಗೆ ಜ್ಞಾಪಕಕ್ಕೆ ತರುವ ಗುರುತಿಗೆ ಲಿಂಗವೆಂದು ಹೆಸರೆಂಬುದಾಗಿ ಹೇಳಿದೆ. ಇಡಿಯ ಪ್ರಪಂಚವೇ ಪರಮೇಶ್ವರನ ಉಪಾಸನೆಯಲ್ಲಿ ಉಪಯೋಗಿಸ ಬಹುದಾದ ಪ್ರತೀಕ ಅಥವಾ ಲಿಂಗವೆಂದೂ, ಅದನ್ನು ಈಶ್ವರನ ಅಷ್ಟ ಮೂರ್ತಿ ಸ್ವರೂಪ ಅಥವಾ ವಿರಾಟ್‌ರೂಪದ ಪ್ರತಿನಿಧಿಯೆಂದೂ ಭಾವಿಸ ಬೇಕೆಂದು ಹೇಳಿದೆ. ಶರೀರದಲ್ಲೂ, ಹೃದಯಾಕಾಶದಲ್ಲೂ, ಲಿಂಗ ಸ್ವರೂಪವನ್ನು ಉಪಾಸನೆ ಮಾಡಬೇಕೆಂದೂ, ಅದರಿಂದ ಪರಮೇಶ್ವರನ ಸಾಕ್ಷಾತ್ಕಾರವನ್ನು ಎಲ್ಲರೂ ಪಡೆಯ ಬಹುದೆಂದೂ, ಹೇಳಿದೆ. ಅಲ್ಲದೆ ಇಲ್ಲಿನ ಒಂದು ವಿಶೇಷವೇನೆಂದರೆ,ಲಿಂಗದ ಬುಡದಲ್ಲಿ ಬ್ರಹ್ಮನನ್ನೂ,ಮಧ್ಯ ದಲ್ಲಿ ವಿಷ್ಣುವನ್ನೂ, ಶಿರಸ್ಸಿನಲ್ಲಿ ಶಿವನನ್ನೂ, ಲಿಂಗದ ಎಡಭಾಗದಲ್ಲಿ ಬ್ರಹ್ಮನನ್ನೂ, ಬಲಭಾಗದಲ್ಲಿ ವಿಷ್ಣುವನ್ನೂ, ಮಧ್ಯದಲ್ಲಿ ಶಿವನನ್ನೂ, ಧ್ಯಾನಿಸಬೇಕೆಂದು ಹೇಳಿ, ಲಿಂಗವು ಬ್ರಹ್ಮ, ವಿಷ್ಣು, ಶಿವ ರೆಂಬ ತ್ರಿಮೂರ್ತಿ ಸ್ವರೂಪವಾದುದೆಂದು ಭಾವಿಸಬೇಕೆಂದು, ಹಿಂದಿನ ಸಂಪುಟಗಳಲ್ಲಿ ಹೇಗೋ ಹಾಗೆ ಇಲ್ಲಿಯೂ ಉಪದೇಶಿಸಿರುತ್ತದೆ. ಈ ಅಂಶಕ್ಕೆ ಪ್ರಮಾಣಗಳನ್ನು ಹಿಂದಿನ ಸಂಪುಟಗಳಲ್ಲಿರುವುವನ್ನು ಅಲ್ಲಿಯೂ ಉದಾಹರಿಸಲಾಗಿದೆ. ಈ ಸಂಪುಟದಲ್ಲೂ "ಲಿಂಗಮೇಕತಮಂ ಶೈಲಂ ಬ್ರಹ್ಮವಿಷ್ಣು ಶಿವಾತ್ಮಕಂ" ॥ ಅ. ೪೭. ಶ್ಲೋ ೬. "ಲಿಂಗವೇದೀ ಉಮಾದೇವೀ ಲಿಂಗಂ ಸಾಕ್ಷಾನ್ಮ ಹೇಶ್ವರಃ ॥ " ೪೭. ೮. "ಮೂಲೇ ಬ್ರಹ್ಮಾ ವಸತಿ ಭಗವಾನ್ ಮಧ್ಯ ಭಾಗೇ ಚ ವಿಷ್ಣುಃ ಸರ್ವೇಶಾನಃ ಪಶುಪತಿರಜೋ ರುದ್ರಮೂರ್ತಿರ್ವ ರೇಣ್ಯಃ" ೪೭.೧೦. ಹೀಗೆಂದು ಧ್ಯಾನಿಸುತ್ತಾ ಆರಾಧಿಸಬೇಕೆಂದು ಹೇಳಿದೆ. ಇಂತಹವಿಶಾಲವಾದ ಮನೋಭಾವವನ್ನು ಉಂಟುಮಾಡುವ ಆರಾಧನೆಯು

ರೀತಿಯನ್ನು ಇಲ್ಲಿಮಾತ್ರವೇ ಅಲ್ಲದೆ ಶಾಕ್ತೇಯ ಪುರಾಣಗಳಲ್ಲೂ, ತಂತ್ರ ಮಂತ್ರ ಶಾಸ್ತ್ರಗಳಲ್ಲೂ ಮುಖ್ಯವಾಗಿ ವಿವರಿಸಿರುವುದನ್ನು ದೇವೀ ಭಾಗವತ, ತ್ರಿಪುರಾರಹಸ್ಯ, ಶ್ರೀವಿದ್ಯಾಮಂತ್ರ ಭಾಷ್ಯ, ಇವುಗಳಲ್ಲಿಯೂ ಇರುವ ಪ್ರಮಾಣಗಳನ್ನು ಉದಾಹರಿಸಿ, ಆ ಗ್ರಂಥಗಳ ಮುನ್ನುಡಿ, ಟಿಪ್ಪಣಿ ಗಳಲ್ಲಿ ವಿವರಿಸಿರುತ್ತೇನೆ. ಹೀಗೆ ಹೃದಯ ವೈಶಾಲ್ಯವನ್ನೂ, ವಿಶ್ವಧರ್ಮಾ ಚರಣೆಯಲ್ಲಿ ಆದರವನ್ನೂ ಉಂಟುಮಾಡುವ ಈ ಲಿಂಗಮಹಾಪುರಾಣ ವನ್ನು ತಾಮಸವೆಂದು ಹೇಳಿರುವುದು ನಿಜಸ್ಥಿತಿಯನ್ನು ಅವಲಂಬಿಸಿಲ್ಲವು. ಅದಕ್ಕೆ ಬದಲಾಗಿ ಇದನ್ನು ಸಾತ್ವಿಕಪುರಾಣವೆನ್ನುವುದು ಸತ್ಯಾಂಶವನ್ನು ಅವಲಂಬಿಸಿರುತ್ತಾ ಹೆಚ್ಚಾಗಿಯೇ ಒಪ್ಪುತ್ತದೆ. ಇದರಂತೆಯೇ ವೈಷ್ಣವ ಪುರಾಣಗಳಲ್ಲಿಯೂ ವಿಷ್ಣು ಸರ್ವೋತ್ತಮತ್ವವನ್ನು ಹೇಳಿದ್ದರೂ, ಬ್ರಹ್ಮ, ವಿಷ್ಣು, ರುದ್ರ, ಇವರಿಗೆ ಅಭೇದವನ್ನೂ ಬೋಧಿಸಿ, ಭೇದದೃಷ್ಟಿಯನ್ನು ಮಾಡಬಾರದೆಂದು ನಿಂದಿಸಿ, ಅಭೇದ ದೃಷ್ಟಿಯೇ ಎಲ್ಲರಿಗೂ ಶ್ರೇಯಸ್ಕರ ವೆಂದು ಶ್ಲಾಘಿಸಿ ಬೋಧಿಸಿದೆ. ಆದರೆ ವಿಷ್ಣುವಿನ ಆರಾಧನೆ, ಉಪಾಸನೆ ಗಳಲ್ಲಿ ಭಕ್ತರು ಮೊದಮೊದಲು ಉಪಯೋಗಿಸಬೇಕಾದ ಪ್ರತೀಕಗಳಾದ ಸಾಲಿಗ್ರಾಮ, ವಿಗ್ರಹ, ಮುಂತಾದುದರ ಸ್ವರೂಪವನ್ನು ವಿವರಿಸುವಾಗ, ಶಿವಪ್ರತೀಕವಾದ ಲಿಂಗದ ಸ್ವರೂಪವನ್ನು ವಿವರಿಸುವುದರಲ್ಲಿ ಕಾಣಬರುವ, ಮನೋ ವೈಶಾಲ್ಯವು ಕಂಡು ಬರುತ್ತಿಲ್ಲ. ಇನ್ನೂ ಹೆಚ್ಚಾಗಿ ಪರಿಶೋಧಿಸಿ ನೋಡಬೇಕಾಗಿದೆ. ಎಲ್ಲ ಪುರಾಣಗಳಲ್ಲೂ ಉದಾತ್ತವಾದ ನೀತಿ ಧರ್ಮಗಳೂ, ವೇದಗಳಲ್ಲೂ ಉಪನಿಷತ್ತುಗಳಲ್ಲೂ ಇರುವಂತೆ, ಏಕತತ್ವಬೋಧನೆಯೂ ಇರುವ ಗ್ರಂಥಭಾಗಗಳು ಅನೇಕವಾಗಿಇವೆ. ಹೀಗಿದ್ದರೂ ಕೆಲವು ಪುರಾಣ ಗಳನ್ನು ತಾಮಸಗಳೆಂದೂ, ಅವನ್ನು ರಚಿಸಿದವರು ವ್ಯಾಸಮಹರ್ಷಿಗಳೇ ಆದರೂ, ಅವರಿಗೂ ತಾಮಸಗುಣವು ಮೇಲುಗೈ ಆಗಿದ್ದಾಗ ಶೈವಪುರಾಣ ಗಳನ್ನು ರಚಿಸಿದರೆಂದೂ, ಹೇಳುವುದು ನಿಜವೂ ಅಲ್ಲವು. ಅಲ್ಲದೆ ವೈದಿ ಕಾರ್ಯರಿಂದ ನಮ್ಮವರೆಗೂ ಬಂದಿರುವಧಾರ್ಮಿಕ ಸಂಸ್ಕೃತಿಗೂ ವಿರುದ್ಧವಾಗಿ ರುವುದರಿಂದ ಅದು ಸ್ವಾಭಾವಿಕವೂ, ಯುಕ್ತಿಯುಕ್ತವೂ ಅಲ್ಲವು. ಎಂದು ಹೇಳಬಹುದು.

ಅಲ್ಲದೆ ಈ ಪುರಾಣದಲ್ಲಿ ಸಾತ್ವಿಕಾರಾಧನೆಯಲ್ಲಿನ ವಿವರಗಳನ್ನು ತಿಳಿ ಸುವ ಸಂದರ್ಭದಲ್ಲಿ ಅಹಿಂಸಾ ಹೋಮದ ಸ್ವರೂಪವನ್ನು ಹೃದಿ ಸ್ಥಂ ಚಿಂತಯೇದಗ್ನಿಂ ಧ್ಯಾನಯಜ್ಞೇನ ಹೋಮಯೇತ್ । ದೇಹಸ್ಥಂ ಸರ್ವ ಭೂತಾನಾಂ ಶಿವಂ ಸರ್ವಜಗತ್ಪತಿಂ ॥ ತಂ ಜ್ಞಾತ್ವಾ ಹೋಮಯೇದ್ಭಕ್ತ್ಯಾ ಪ್ರಾಣಾಯಾಮೇನ ನಿತ್ಯಶಃ ೨೫.೧೦೭.೧೦೮. ಹೀಗೆ ವಿವರಿಸಿದೆ.

ಅಲ್ಲದೆ ಮೋಕ್ಷವೆಂಬ ಪರಮ ಪುರುಷಾರ್ಥದ ಲಾಭಕ್ಕೆ ಕರ್ಮಾಚರಣೆಯು ಸಾಕ್ಷಾತ್ತಾದ ಸಾಧನವಲ್ಲವೆಂದೂ, ಚಿತ್ತಶುದ್ಧಿ, ಜ್ಞಾನಪ್ರಾಪ್ತಿ ಯೋಗ್ಯತಾ ಸಂಪಾದನೆಗಳಮೂಲಕವಾಗಿ ಇದು ಪರಂಪರಾ ಸಾಧನವೆಂದೂ, ಜ್ಞಾನವೇ ಮೋಕ್ಷಕ್ಕೆ ಸಾಕ್ಷಾತ್ಕಾರಣವೆಂದೂ ಹೇಳಿದೆ. ಅ. ೨೮. ಶ್ಲೋ ೯–೧೧. ನೋಡಬೇಕು. ಹೀಗೆ ವೇದಾಂತ ದರ್ಶನದೊಡನೆಯೂ ಈ ಪುರಾಣಕ್ಕೆ ಸಿದ್ಧಾಂತ, ಉಪದೇಶಗಳಲ್ಲಿ ಸಾಮರಸ್ಯವನ್ನೂ ತಿಳಿಯ ಹೇಳಿದೆ. ಇಲ್ಲಿ ಜ್ಞಾನಕರ್ಮ ಸಮುಚ್ಚಯವಾದವನ್ನು ನಿರಾಕರಿಸಿರುವಂತಿದೆ.

ಮತ್ತು ರಾಜನನ್ನು ಪ್ರಜೆಗಳು ಎಲ್ಲಕಾಲಗಳಲ್ಲೂ, ವಿಷಮಪರಿಸ್ಥಿತಿಗಳಲ್ಲಿ ವಿಶೇಷ ರೀತಿಯಿಂದಲೂ, ಕಾಪಾಡುತ್ತಿರಬೇಕೆಂಬ ವಿಶ್ವಧರ್ಮವನ್ನು ಅ. ೫೦. ಶ್ಲೋ. ೪೮–೫೦. ಅ. ೫೦ ಶ್ಲೋ ೧ರಲ್ಲಿಯೂ ವಿಧಾನಮಾಡಿರುವುದೂ, ಮೃತ್ಯುಂಜಯ ಮಂತ್ರದ ಅರ್ಥಜ್ಞಾನಪೂರ್ವಕವಾದ ಪೂಜಾ, ಜಪ, ಧ್ಯಾನಗಳಿಂದ ಆರಾಧನೆಯ ಕ್ರಮವನ್ನು ತಿಳಿಯಹೇಳಿರುವುದೂ, ಈ ವಿಷಮಕಾಲದಲ್ಲಿ ವಿಶೇಷಗಮನಾರ್ಹವಾಗಿದೆ. ಹಾಗೆಯೇ ವಜ್ರೇಶ್ವರೀವಿದ್ಯೆ, ಗಾಯತ್ರೀವಿದ್ಯೆ, ತ್ರಿಯಂಬಕಮೂರ್ತಿಯ ಉಪಾಸನೆಯ ಕ್ರಮಗಳು ವಿಶೇಷವಾಗಿ ಗಮನಾರ್ಹವಾಗಿವೆ.

ಈ ಸಂಪುಟದಲ್ಲಿ ೪೫ನೆಯ ಅಧ್ಯಾಯದಲ್ಲಿ ಶ್ಲೋಕಸಂಖ್ಯೆಯು ೩೪ ಎಂದು ಆಂಧ್ರಲಿಪಿಯ ಪುಸ್ತಕದಲ್ಲೂ, ೯೪ ಎಂದು ದೇವನಾಗರೀ ಲಿಪಿಯ ಪುಸ್ತಕದಲ್ಲೂ ಮುದ್ರಿತವಾಗಿದೆ. ಈ ವ್ಯತ್ಯಾಸವು ಈ ಅಧ್ಯಾಯದಲ್ಲಿ ಹೇಳಿರುವ ಮಂತ್ರಗಳಿಗೂ ಪ್ರತ್ಯೇಕವಾಗಿ ಸಂಖ್ಯೆಯನ್ನು ಒಂದರಲ್ಲಿ ಮಾತ್ರ ಕೊಟ್ಟಿರುವುದರಿಂದ ಆಗಿದೆಯೇ ಹೊರತು, ಮೂಲ ಗ್ರಂಥದಲ್ಲಿ ಹೆಚ್ಚುಕಡಿಮೆ ಏನೂ ಇಲ್ಲವೆಂಬುದನ್ನು ಹೋಲಿಕೆಯಿಂದ ಕಾಣಬಹುದಾಗಿದೆ.

ಮೇಲೆ ಹೇಳಿರುವಂತೆ ಈ ಲಿಂಗಮಹಾಪುರಾಣವು ಓದುಗರಲ್ಲಿ ಆಸ್ತಿಕತೆ, ದೇವರಲ್ಲೂ, ರಾಜರಲ್ಲೂ, ಗುರು ದ್ವಿಜರಲ್ಲೂ ಭಕ್ತಿ, ಸರ್ವಸಮತೆ, ಸಹಾನುಭೂತಿ, ಸಹಕಾರ, ಸತ್ಯ, ಅಹಿಂಸೆ, ಪರೋಪಕಾರ, ಮುಂತಾದ ವಿಶ್ವಧರ್ಮಗಳ ಅರಿವನ್ನು ಉಂಟುಮಾಡಿ, ಧರ್ಮಾರ್ಥವಾದ ಸೇವಾ ಮನೋವೃತ್ತಿಯನ್ನು ಬೆಳೆಯಿಸುವುದರಿಂದ ದೇಶದಲ್ಲಿ ಕಲ್ಯಾಣ, ಶಾಂತಿಗಳ ಸ್ಥಾಪನೆಗೆ ಸಾಧಕವಾಗಿದೆ. ಆದುದರಿಂದ ಇದರ ವ್ಯಾಸಂಗವು ಕನ್ನಡಿಗರೆಲ್ಲರಿಗೂ ದೊರೆಯುವಂತೆ ಮಾಡುವ ಉದ್ದೇಶದಿಂದ ಇಂತಹ

ಗ್ರಂಥಗಳನ್ನು ಕನ್ನಡ ಅರ್ಥಾನುವಾದದೊಡನೆ ಮುದ್ರಿಸಿ ಪ್ರಚಾರ ಮಾಡಬೇಕೆಂದು ನಮ್ಮನ್ನಾಳುವ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ.ಸಿ.ಬಿ., ಜಿ.ಸಿ.ಎಸ್.ಐ., ಮಹಾಸ್ವಾಮಿಯವರ** ಆಜ್ಞೆಯಂತೆ ಇದನ್ನೂ ಪ್ರಕಟಿಸಲಾಗಿದೆ. ಜಗನ್ಮಾತೆಯು ಈ ನಮ್ಮ ಮಹಾಪ್ರಭುಗಳಿಗೆ ಆಯುರಾರೋಗ್ಯ ಐಶ್ವರ್ಯ ಸತ್ಪುತ್ರಪ್ರಾಪ್ತಿ ಮುಂತಾದ ಸಕಲ ಸನ್ಮಂಗಳಗಳನ್ನು ಅನುಗ್ರಹಿಸುತ್ತಿರಲಿ ಎಂದೂ, ಅವರ ಉದ್ದೇಶವು ನೆರವೇರುವಂತಾಗಲೆಂದೂ, ಆ ತಾಯಿಯ ಅಡಿದಾವರೆಗಳಲ್ಲಿ ಭಕ್ತಿನಮ್ರನಾಗಿ, ಕೃತಜ್ಞತಾಪೂರ್ವಕವಾಗಿ ಪ್ರಾರ್ಥಿಸುತ್ತಿರುತ್ತೇನೆ.

ಸರ್ವಜಿತ್ ಸಂವತ್ಸರದ ನಿಜಶ್ರಾವಣ
ಕೃಷ್ಣಚತುರ್ದಶೀ ಶನಿವಾರ
13–9–47

ಎಡತೊರೆ ದೇವಯ್ಯದೀಕ್ಷಿತರ ಮಗ
**ಚಂದ್ರಶೇಖರಶಾಸ್ತ್ರೀ**



# ವಿಷಯಗಳ ಸೂಚಿಕೆ.

ಪುಟಸಂಖ್ಯೆ

ಪುಟಸಂಖ್ಯೆ

# ಶ್ರೀ ಲಿಂಗಮಹಾಪುರಾಣಂ

## ಸಂಪುಟ ೬

---

ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇದ್ವಾವಿಂಶತಿ
ತಮೋಽಧ್ಯಾಯಃ

**॥ ಶೈಲಾದಿ ರುವಾಚ ॥**

**ಸ್ನಾನ ಯಾಗಾದಿ ಕರ್ಮಾಣಿ ಕೃತ್ವಾ ವೈ ಭಾಸ್ಕರಸ್ಯ ಚ ।**
**ಶಿವಸ್ನಾನಂ ತತಃ ಕುರ್ಯಾ ದ್ಭಸ್ಮಸ್ನಾನಂ ಶಿವಾರ್ಚನಂ ॥ ೧ ॥**

---

॥ ಶ್ರೀ ಗಣೇಶ ಶಾರದಾ ಗುರುಭ್ಯೋ ನಮಃ ॥

**ಕರ್ಮಾನುಷ್ಠಾನಕಾಲೇ ಫಲವಿಷಯರತಿಂ ಸಂತ್ಯಜನ್ ಧರ್ಮಬುದ್ಧ್ಯಾ**
**ಸೌಖ್ಯೇ ದುಃಖೇಽಭಿಮಾನಂ ಪರಿಹರತಿ ತಥಾ**
**ದೋಷದೃಕ್ ಕರ್ಮಯೋಗೀ ।**
**ಚಿತ್ತೇ ಶುದ್ಧೇ ತು ಜೀವಃ ಶ್ರುತಿಗುರುವಚನೈಃ ಜ್ಞಾನವೈರಾಗ್ಯ**
**ಯೋಗಾತ್**
**ಬ್ರಹ್ಮಾತ್ಮೈಕ್ಯಂ ವಿಜಾನನ್ ಪುನರಿವ ಸ ಭವೇತ್ ಸಚ್ಚಿದಾನಂದ**
**ರೂಪಃ ॥**

ಆಲೋಚನಪರನಾದ ಜೀವನ ಈಗಿನ ಸ್ಥಿತಿಸ್ವಭಾವಗಳನ್ನೂ, ಅವನು ಪಡೆಯಬೇಕೆನ್ನುವ ಪರಮಫಲ, ಅದನ್ನು ಪಡೆಯುವರೀತಿ ಇವುಗಳನ್ನೂ, ಈ ಪದ್ಯದಲ್ಲಿ ಸೂಚಿಸಲಾಗಿದೆ. ದುಡಿಯುವುದು, ದುಡ್ಡನ್ನು ಸಂಪಾದಿಸುವುದು, ಆಹಾರ ಮುಂತಾದ ಆವಶ್ಯಕವಾದ ಭೋಗ್ಯವಸ್ತುಗಳನ್ನು ತರುವುದು, ಅವನ್ನು ಸೇವಿಸಿ ಸುಖದುಃಖ ರೂಪಗಳಾದ ಫಲಗಳನ್ನು ಅನುಭವಿಸುವುದು, ಆಯಾಸ ಪರಿಹಾರಕ್ಕಾಗಿ ನಿದ್ರಿಸುವುದು,

ವಿಶ್ರಾಂತಿಯನ್ನು ಪಡೆದು ಎದ್ದು ಪುನಃ ಮುಂಚಿನಂತೆಯೇ ದುಡಿಯು ವುದು, ತಾನು ಗಂಡಸಾದರೆ ಹೆಂಗುಸನ್ನೂ, ಹೆಂಗುಸಾದರೆ ಗಂಡಸನ್ನೂ ಕಾಮಿಸುವುದು, ಮಕ್ಕಳನ್ನು ಪಡೆದು ಪಾಲಿಸುವುದು, ಜನನ ಮರಣ ಗಳನ್ನು ಪಡೆಯುತ್ತಿರುವುದು, ಇದೇ ಪಾಮರನಾದ ಸಾಮಾನ್ಯ ಮಾನ ವನ ಈಗಿನ ಸ್ಥಿತಿಯಾಗಿದೆ. ದುಡಿಯುತ್ತಿರುವುದು, ಕರ್ಮವನ್ನು ಮಾಡು ತ್ತಿರುವುದು ಇವನ ಅನಿವಾರ್ಯವಾದ ಸಹಜವಾದ ಸ್ವಭಾವವಾಗಿರುತ್ತದೆ. ಆದರೆ ವಿವೇಕಿಯಾದ ಮಾನವನು ಕಾಲಕ್ರಮದಲ್ಲಿ ಅನುಭವಗಳನ್ನು ಪಡೆಯುತ್ತಾ, ಕರ್ಮಕ್ಕೆ ಮುಂದೆ ಸುಖ ಅಥವಾ ದುಃಖರೂಪವಾದ ಫಲವು ನಿಯತವೆಂದೂ, ಆ ಫಲಕ್ಕೆ ಹಿಂದೆ ಕರ್ಮವು ಆವಶ್ಯಕವಾಗಿದ್ದಿರ ಬೇಕೆಂದೂ, ಕ್ರಮವಾಗಿ ಅನುಭವದಿಂದ ತಿಳಿಯುತ್ತಾನೆ. ದುಃಖವು ಬೇಡವಾದುದರಿಂದ ಅದಕ್ಕೆ ಕಾರಣವಾದ ದುಷ್ಕರ್ಮವನ್ನು ಬಿಡುತ್ತಾ, ಸುಖವು ಬೇಕಾದುದರಿಂದ ಅದಕ್ಕೆ ಸಾಧನವಾದ ಸತ್ಕರ್ಮಗಳನ್ನು, ಕಾಮ್ಯ ಕರ್ಮಗಳನ್ನು, ಮಾಡುತ್ತಿರುತ್ತಾನೆ. ಈ ವಿಷಯವನ್ನು "ಕರ್ಮೈವೇಹ ಜನಸ್ಯ ದುಃಖಸುಖದಂ" ಎಂಬ ಪದ್ಯದಲ್ಲಿ, ದೇವೀ ಭಾಗವತ ಒಂಬತ್ತನೆಯ ಸ್ಕಂಧ ಪುಟ ೧–೨ರಲ್ಲೂ, ಅಷ್ಟಾವಕ್ರಗೀತೆಯ ಮುನ್ನುಡಿ ಪುಟ ೪–೮ ಗಳಲ್ಲೂ ವಿವರಿಸಿರುತ್ತೇನೆ.

ಆದುದರಿಂದ ವಿವೇಕಿಯೂ ಮುಂದಾಲೋಚನೆಯುಳ್ಳವನೂ ಆದ ಜೀವನು ಕರ್ಮವನ್ನು ಆಚರಿಸುತ್ತಿರುವಾಗ ಅದರ ಫಲದ ವಿಷಯದಲ್ಲಿ ಆಸಕ್ತಿಯನ್ನಿಡಬಾರದು. ಏಕೆಂದರೆ ಅದು ತನ್ನ ಫಲವನ್ನು ಜೀವನಿಗೆ ಕೊಡಬೇಕಾಗುತ್ತದೆ. ಅದಕ್ಕಾಗಿ ಜನನ ಮರಣಗಳ ಪರಂಪರೆಯು ಅನಂತವಾಗುತ್ತಾ ಹೋಗುತ್ತದೆ. ಆದರೆ ಕರ್ಮವನ್ನು ದೇವರ, ಜನತಾ ರೂಪಿಯಾದ ಜನಾರ್ದನನ, ಸೇವಕನಾದುದುದರಿಂದ ಜೀವನು ತನ್ನ ಕರ್ತವ್ಯ ಧರ್ಮವೆಂಬ ಬುದ್ಧಿಯಿಂದ, ಸ್ವಧರ್ಮವನ್ನು, ವರ್ಣಾಶ್ರಮ ಧರ್ಮ ವನ್ನು ನಿಷ್ಕಾಮನಾಗಿ ಮಾಡುತ್ತಿದ್ದರೆ, ಹಾಗೆಯೇ ಇದುವರೆಗಿನ ಕರ್ಮ ಫಲವಾದ ಸುಖದುಃಖಗಳು ಬಂದೊದಗಿದಾಗ, ಅವುಗಳಲ್ಲಿ ನಾನು, ನನ್ನದು, ಕರ್ತೃತ್ವ, ಭೋಕ್ತೃತ್ವ, ಈ ಭಾವಗಳನ್ನು ಬಿಟ್ಟು, ತಾತ್ಕಾಲಿಕ ವಾಗಿ ಬಂದು ಕೊಂಚಕಾಲವಿದ್ದು ಅವು ಹೋಗುವುವು ಎಂದು ತಿಳಿ ಯುತ್ತಾ ಸಹಿಸುತ್ತಾ ಬಂದರೆ, ಚಿತ್ತವು ಕಾಮಕ್ರೋಧಾದಿಗಳಿಗೆ ಅವ ಕಾಶವಿಲ್ಲದೆ ಶುದ್ಧವಾಗುತ್ತಾ ಬರುವುದು. ಅಲ್ಲದೆ ಕರ್ಮಫಲಗಳು ಎಷ್ಟೇ

ಹೆಚ್ಚಿನವಾದರೂ ಅವಿಶುದ್ಧಿ, ಕ್ಷಯ, ತಾರತಮ್ಯ, ಎಂಬ ದೋಷಗಳು ಅನಿವಾರ್ಯವಾಗಿರುವುವೆಂಬುದನ್ನೂ ತಿಳಿದರೆ, ಅವುಗಳಲ್ಲಿ ಮುಂದಕ್ಕೂ ಆಶೆಯುಂಟಾಗದೆ, ಚಿತ್ತದಲ್ಲಿ ಮಲವು ಪುನಃ ಬಂದು ಸೇರದಂತೆಯೂ ಆಗುವುದು. ಹೀಗೆ ಕರ್ಮಯೋಗಿ ಯಾಗಿರುವ ಜೀವನ ಚಿತ್ತವು ಸಂಪೂರ್ಣವಾಗಿ ನಿರ್ಮಲವಾದಮೇಲೆ, ಶ್ರುತಿವಾಕ್ಯದಿಂದಲೂ, ಗುರೂಪದೇಶದಿಂದಲೂ, ಜೀವನ ನಡೆನುಡಿ ಭಾವಗಳು ಮೇಲ್ಪಡುತ್ತವೆ. ಆಗ ಜೀವನ ಆತ್ಮಸ್ವರೂಪವು, ಸಚ್ಚಿದಾನಂದ ಸ್ವಭಾವವು, ಅನುಭವಕ್ಕೆ ಬರುತ್ತದೆ. ಈ ಜ್ಞಾನದಿಂದಲೂ, ವಿಷಯ ವೈರಾಗ್ಯದಿಂದಲೂ, ಪರಮಾತ್ಮನ ಸ್ವರೂಪವೂ ಜೀವಾತ್ಮನ ಸ್ವರೂಪವೂ ಸಚ್ಚಿದಾನಂದ ರೂಪದಲ್ಲಿ ಒಂದೇ ಆಗಿರುತ್ತದೆ. ಎಂಬ ತತ್ವವು ಸಾಕ್ಷಾತ್ಕಾರಕ್ಕೆ ಬರುತ್ತದೆ. ಇಂತಹ ಅಪರೋಕ್ಷಾನುಭವದಿಂದ ಜೀವನು, ಅಜ್ಞಾನದಿಂದ ತನ್ನನ್ನು ಅನಿತ್ಯ, ದುಃಖೀ, ಅಲ್ಪಜ್ಞ, ಅಲ್ಪಶಕ್ತ, ಎಂದು ಮುಂತಾಗಿ ಅದುವರೆಗೂ ಭಾವಿಸಿಕೊಂಡಿದ್ದುದನ್ನು, ಅದು ತೋರಿಕೆಯ ಸ್ವಭಾವವುಳ್ಳದ್ದಾಗಿ ವಾಸ್ತವವಾದುದಲ್ಲವೆಂದು ತಿಳಿದು, ಬಿಡುತ್ತಾನೆ. ಹೀಗೆ ಈ ಅಜ್ಞಾನವು ಜ್ಞಾನದಿಂದ ತೊಲಗಲು, ಜೀವನು ಎಂದಿನಂತೆ ಸಚ್ಚಿದಾನಂದ ರೂಪವನ್ನು ಪುನಃ ಪಡೆದಂತೆ ಭಾವಿಸುತ್ತಾನೆ. ಕಡೆಗೆ ಪುನಃ ಅಜ್ಞಾನಕ್ಕೆ ಕಾರಣವಿಲ್ಲದೆ, ನಿತ್ಯಶುದ್ಧ ಬುದ್ಧ ಮುಕ್ತಸ್ವಭಾವದಿಂದ ಜೀವಾತ್ಮನು ಪರಮಾತ್ಮನಾಗಿ, ಬ್ರಹ್ಮರೂಪನಾಗಿ, ನಿತ್ಯಾನಂದರೂಪನಾಗಿ, ಎಂದಿನಂತೆಯೇ ಇರುತ್ತಾನೆ. ಇದೇ ಮೋಕ್ಷವು. ಇಂತಹ ಪರಮ ಪುರುಷಾರ್ಥವು ಎಲ್ಲರಿಗೂ ದೊರೆಯುವಂತಾಗಲಿ.

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಇಪ್ಪತ್ತೆರಡನೆಯ ಅಧ್ಯಾಯವು.

೧. ಶೈಲಾದಿಯು ಹೇಳಿದನು. :—ಶಿವಾರ್ಚನೆಯಲ್ಲಿ ಅಧಿಕಾರವು ಸಿದ್ಧವಾಗುವುದಕ್ಕೋಸ್ಕರ ಭಾಸ್ಕರಾರ್ಚನೆಯನ್ನೂ ತಿಳಿಸಲು ಶೈಲಾದಿಯು ಹೇಳುತ್ತಾನೆ. ಭಾಸ್ಕರನ ಸ್ನಾನವನ್ನೂ ಪೂಜಾದಿ ನಿತ್ಯಕರ್ಮಗಳನ್ನೂ ನೆರವೇರಿಸಿ ಅನಂತರ ಭಸ್ಮ ಸ್ನಾನವನ್ನು ಶಿವಾರ್ಚನೆಯನ್ನೂ ಮಾಡಬೇಕು.

೨. ಓಂ ತಪಃ ಎಂಬ ಆರನೆಯ ಮಂತ್ರವನ್ನು ಹೇಳಿ ಮೃತ್ತಿಕೆಯನ್ನು ತಂದು, ಭಕ್ತಿಪುರಸ್ಸರವಾಗಿ ಆ ಮೃತ್ತಿಕೆಯನ್ನು ಭೂಮಿಯಲ್ಲಿ

ಷಷ್ಠೇನ ಮೃದಮಾದಾಯ ಭಕ್ತ್ಯಾ ಭೂಮೌ ನ್ಯಸೇನ್ಮೃದಂ ।
ದ್ವಿತೀ ಯೇನ ತಥಾಽಭ್ಯುಕ್ಷ್ಯ ತೃತೀಯೇನ ಚ ಶೋಧಯೇತ್ ॥
ಚತುರ್ಥೇನೈವ ವಿಭಜೇ ನ್ಮಲ ಮೇಕೇನ ಶೋಧಯೇತ್ ।
ಸ್ನಾತ್ವಾ ಷಷ್ಠೇನ ತಚ್ಛೇಷಾಂ ಮೃದಂ ಹಸ್ತ ಗತಾಂ ಪುನಃ ॥ ೩ ॥
ತ್ರಿಧಾ ವಿಭಜ್ಯ ಸರ್ವಂ ಚ ಚತುರ್ಭಿರ್ಮಧ್ಯಮಂ ಪುನಃ ।
ಷಷ್ಠೇನ ಸಪ್ತ ವಾರಾಣಿ ವಾಮಂ ಮೂಲೇನ ಚಾಲಯೇತ್ ॥ ೪ ॥
ದಶವಾರಂ ಚ ಷಷ್ಠೇನ ದಿಶೋ ಬಂಧಃ ಪ್ರಕೀರ್ತಿತಃ ।
ವಾಮೇನ ತೀರ್ಥಂ ಸವ್ಯೇನ ಶರೀರ ಮನುಲಿಪ್ಯ ಚ ॥ ೫ ॥

---

ಸ್ಥಾಪಿಸಬೇಕು. ತರುವಾಯ ಓಂ ಭುವಃ, ಎಂಬ ದ್ವಿತೀಯ ಮಂತ್ರ ದಿಂದ ಮೃತ್ತಿಕೆಯನ್ನು ಪ್ರೋಕ್ಷಿಸಿ, ಓಂ ಸುವಃ, ಎಂಬ ತೃತೀಯ ಮಂತ್ರದಿಂದ ಅದನ್ನು ಶೋಧಿಸಬೇಕು.

೩–೪. ಓಂ ಮಹಃ ಎಂಬ ನಾಲ್ಕನೆಯ ಮಂತ್ರದಿಂದ ಮೃತ್ತಿಕೆ ಯನ್ನು ವಿಭಾಗಮಾಡಬೇಕು. ವಿಭಾಗಮಾಡಿ ಓಂ ಭೂಃ ಎಂಬ ಮೊದಲ ನೆಯ ಮೂಲ ಮಂತ್ರದಿಂದ ಕೊಳೆಯನ್ನು ತೆಗೆಯಬೇಕು. ತರುವಾಯ ಓಂ ತಪಃ ಎಂಬ ಆರನೆಯ ಮಂತ್ರದಿಂದ ಸ್ನಾನಮಾಡಿ, ಕೈಯಲ್ಲಿರುವ ಉಳಿದ ಮೃತ್ತಿಕೆಯನ್ನು ಮೂರು ವಿಭಾಗವಾಗಿ ವಿಂಗಡಿಸಿ ಅದರಲ್ಲಿ ಮಧ್ಯ ಭಾಗವನ್ನು ನಾಲ್ಕು ಭಾಗವಾಗಿ ವಿಂಗಡಿಸಿ, ಮೂಲಮಂತ್ರದಿಂದ ವಾಮ ಹಸ್ತವನ್ನು ಲೇಪನಮಾಡಬೇಕು.

೫. ಓಂ ತಪಃ ಎಂದು ಆರನೆಯ ಮಂತ್ರದಿಂದ ಹತ್ತುಬಾರಿ ದಿಗ್ಬಂಧವನ್ನು ಮಾಡಿ, ವಾಮಹಸ್ತದಿಂದ ತೀರ್ಥವನ್ನು ತೆಗೆದುಕೊಂಡು, ದಕ್ಷಿಣ ಹಸ್ತದಿಂದ ಅಂಗುಲಿಗಳಿಂದ ಶರೀರವನ್ನು ಲೇಪಿಸಿಕೊಂಡು ತರು ವಾಯ,

ಸ್ನಾನಮಾಡಿ, ಸಕಲ ಮಂತ್ರಗಳಿಂದಲೂ, ಸೂರ್ಯ ದೇವನನ್ನು ಸ್ಮರಿಸಿ ತೀರ್ಥಾಭಿಷೇಕವನ್ನು ಮಾಡಿಕೊಳ್ಳಬೇಕು.

ಸ್ನಾತ್ವಾ ಸರ್ವೈಃ ಸ್ಮರನ್ ಭಾನು ಮಭಿಷೇಕಂ ಸಮಾಚರೇತ್ ।
ಶೃಂಗೇಣ ಪರ್ಣ ಪುಟಕೈಃ ಪಾಲಾಶೇನ ದಲೇನ ವಾ ।
ಸೌರೈ ರೇಭಿಶ್ಚ ವಿವಿಧೈಃ ಸರ್ವ ಸಿದ್ಧಿ ಕರೈಃ ಶುಭೈಃ ॥ ೬ ॥

ಸೌರಾಣಿ ಚ ಪ್ರವಕ್ಷ್ಯಾಮಿ ಬಾಷ್ಕಲಾದ್ಯಾನಿ ಸುವ್ರತ ।
ಅಂಗಾನಿ ಸರ್ವ ದೇವೇಷು ಸಾರಭೂತಾನಿ ಸರ್ವತಃ ॥ ೭ ॥

ಓಭೂಃ ಓಂಭುವಃ ಓಂಸುವಃ ಓಂಮಹಃ ಓಂಜನಃ ಓಂತಪಃ ಓಂ ಸತ್ಯಂ ಓಂಬ್ರಹ್ಮ
ನವಾಕ್ಷರ ಮಯಂ ಮಂತ್ರಂ ಬಾಷ್ಕಲಂ ಪರಿಕೀರ್ತಿತಂ ।
ನಕ್ಷರತೀತಿ ಲೋಕಾನಿ ಖುತ ಮಕ್ಷರ ಮುಚ್ಯತೇ ।
ಸತ್ಯ ಮಕ್ಷರ ಮಿತ್ಯುಕ್ತಂ ಪ್ರಣವಾದಿ ನಮೋಽಂತಕಂ ॥ ೮ ॥

---

೬. ಜಲಾಭಿಷೇಕ ಮಾಡುವಾಗ ಮುಂದೆ ಹೇಳುವ ಸರ್ವಸಿದ್ಧಿ ಪ್ರದಾಯಕವಾದ ಸೌರ ಮಂತ್ರಗಳಿಂದ ಸೂರ್ಯನನ್ನು ಸ್ಮರಿಸಿ, ಶೃಂಗ ದಿಂದಾಗಲೀ ( ಶೃಂಗವೆಂದರೆ ಕಾಡುಕೋಣದ ಕೋಡು;) ಇದು ಜಲಾಭಿ ಷೇಕ ಕಾರ್ಯದಲ್ಲಿ ಪ್ರಶಸ್ತವಾದುದೆಂದು ಪುರಾಣಾಂತರಗಳಲ್ಲಿ ಹೇಳಿದೆ. ದೊನ್ನೆಯ ಆಕಾರದಲ್ಲಿರುವ ಎಲೆಗಳಿಂದಾಗಲೀ, ಮುತ್ತುಗದ ಎಲೆಯಿಂದ ಲಾಗಲಿ ಜಲಾಭಿಷೇಕವನ್ನು ಮಾಡಿಕೊಳ್ಳಬೇಕು.

೭. ಎಲೈ ಸದಾಚಾರಶೀಲನೇ, ಬಾಷ್ಕಲಾದಿಯಾದ ಮತ್ತು ಸಕಲ ದೇವತೆಗಳ ಸ್ತೋತ್ರಗಳಲ್ಲಿ ಸಾರಭೂತವಾದ ಅವಯವಗಳಂತಿರುವ ಸೌರ ಮಂತ್ರಗಳನ್ನೂ, ಮುಂದೆ ಹೇಳುತ್ತೇನೆ.

೮. ಮೇಲೆ ಹೇಳಿರುವ ಮಂತ್ರವು ಒಂಬತ್ತು ಅಕ್ಷರಗಳೆಂಬ ಅವ ಯವಗಳಿಂದ ಯುಕ್ತವಾಗಿದೆ. ಭುವರಾದಿ ಲೋಕಗಳು ಪ್ರಲಯ ಪರ್ಯಂತರವಾಗಿ ನಾಶವನ್ನು ಹೊಂದುವುದಿಲ್ಲವಾದುದರಿಂದ ಅವುಗಳನ್ನು ಅಕ್ಷರವೆಂಬ ಯೌಗಿಕ ಶಬ್ದದಿಂದ ಚಾವಚಾರಿಕವಾಗಿ ವ್ಯವಹಾರಮಾಡು ತ್ತಾರೆ. ಪ್ರಣವವೊದಲುಗೊಂಡು ನಮಃ ಎಂಬ ಪರ್ಯಂತವೂ ಇರುವ ಮಂತ್ರವನ್ನು ಸತ್ಯಬೋಧಕವೆಂದು ಹೇಳುತ್ತಾರೆ. ಈ ಮಂತ್ರವೇ ಬಾಷ್ಕಲಮಂತ್ರವೆಂದೂ ಹೇಳಲ್ಪಟ್ಟಿದೆ.

ಓಂ ಭೂರ್ಭುವಃ ಸುವಃ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ
ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ॥
ಓಂ ನಮಃ ಸೂರ್ಯಾಯ ಖ ಖೋಲ್ಕಾಯ ನಮಃ ॥ ೯ ॥

ಮೂಲ ಮಂತ್ರ ಮಿದ(ಮು)ಂ ಪ್ರೋಕ್ತಂ ಭಾಸ್ಕರಸ್ಯ ಮಹಾತ್ಮನಃ ।
ನವಾಕ್ಷರೇಣ ದೀಪ್ತಾಸ್ಯಂ ಮೂಲ ಮಂತ್ರೇಣ ಭಾಸ್ಕರಂ ॥೧೦॥

ಪೂಜಯೇ ದಂಗ ಮಂತ್ರಾಣಿ ಕಥಯಾಮಿ ಯಥಾಕ್ರಮಂ ।
ವೇದಾದಿಭಿಃ ಪ್ರಭೂತಾದ್ಯಂ ಪ್ರಣವೇನ ಚ ಮಧ್ಯಮಂ ॥೧೧॥

ಮಂತ್ರಾಣಿ ಕಥಿತಾನ್ಯೇವಂ ಸೌರಾಣಿ ವಿವಿಧಾನಿ ಚ ।
ಏತೈಃ ಶೃಂಗಾದಿಭಿಃ ಪಾತ್ರೈಃ ಸ್ನಾತ್ವಾತ್ಮಾನ ಮಭಿಷೇಚಯೇತ್ ॥೧೨॥

ತಾಮ್ರ ಕುಂಭೇನ ವಾ ವಿಪ್ರಃ ಕ್ಷತ್ರಿಯೋ ವೈಶ್ಯ ಏವಚ ।
ಸಕುಶೇನ ಸಪುಷ್ಪೇಣ ಮಂತ್ರೈಃ ಸರ್ವೈಃ ಸಮಾಹಿತಃ ॥೧೩॥

---

೯. ಇದೇ ಮೂಲಮಂತ್ರವು.

೧೦–೧೧. ಮೇಲೆ ಹೇಳಿದ ಮಂತ್ರವು ಮಹಾತ್ಮನಾದ ಭಾಸ್ಕರನ ಮೂಲಮಂತ್ರವಾಗಿರುತ್ತದೆ. ಒಂಬತ್ತು ಅಕ್ಷರಗಳಿಂದ ಯುಕ್ತವಾದ ಈ ಮಂತ್ರದಿಂದ ಪ್ರಕಾಶಮಾನವಾದ ಮುಖವುಳ್ಳ ಈ ಭಾಸ್ಕರನನ್ನು ಪೂಜಿಸಬೇಕು. ಇನ್ನುಮುಂದೆ ಮೇಲಿನ ಮೂಲಮಂತ್ರಗಳಿಗೆ ಅಂಗ ಭೂತವಾದ ಮಂತ್ರಗಳನ್ನು ಹೇಳುವೆನು. ಆ ಮಂತ್ರ ಮಧ್ಯದಲ್ಲಿ ವ್ಯಾಹೃತಿಗಳೂ, ಮತ್ತು ಆದಿಭಾಗದಲ್ಲಿ ಪೂಜ್ಯವಾದ ಓಂಕಾರವೂ ಇರುತ್ತದೆ.

೧೨–೧೩. ಈ ಪ್ರಕಾರವಾಗಿ ಸೌರಮಂತ್ರಗಳು ಹೇಳಲ್ಪಟ್ಟಿರುತ್ತವೆ. ಈ ಸೌರ ಮಂತ್ರಗಳನ್ನು ಹೇಳಿ ಬ್ರಾಹ್ಮಣನಾಗಲೀ ಕ್ಷತ್ರಿಯನಾಗಲೀ ವೈಶ್ಯನಾಗಲೀ, ಇವರು ದರ್ಭೆಯನ್ನಾಗಲೀ ಹುವ್ವನ್ನಾಗಲೀ ತೆಗೆದುಕೊಂಡು ಪೂರ್ವೋಕ್ತರೀತಿಯಂತೆ, ಶೃಂಗಾದಿ ಪಾತ್ರೆಗಳಿಂದ ತಾನು ಅಭಿಷೇಕವನ್ನು ಮಾಡಿಕೊಳ್ಳಬೇಕು.

ರಕ್ತವಸ್ತ್ರ ಪರೀಧಾನಃ ಸ್ವಾಚಾಮೋ ದ್ವಿಧಿ ಪೂರ್ವಕಂ ।
ಸೂರ್ಯಶ್ಚೇತಿ ದಿವಾ ರಾತ್ರೌ ಚಾಗ್ನಿಶ್ಚೇತಿ ದ್ವಿಜೋತ್ತಮ ॥೧೪॥
ಆಪಃ ಪುನಂತು ಮಧ್ಯಾಹ್ನೇ ಮಂತ್ರಾಚಮನ ಮುಚ್ಯತೇ ॥
ಷಷ್ಠೇನ ಶುದ್ಧಿಂ ಕೃತ್ವೈವ ಜಪೇದಾದ್ಯ ಮನುತ್ತಮಂ ॥೧೫॥
ವೌಷಡಂತಂ ತಥಾ ಮೂಲಂ ನವಾಕ್ಷರ ಮನುತ್ತಮಂ ।
ಕರಶಾಖಾಂ ತಥಾಂಗುಷ್ಠ ಮಧ್ಯಮಾಽ ನಾಮಿಕಾಂ ನ್ಯಸೇತ್ ॥
ತಲೇ ಚ ತರ್ಜನ್ಯಂಗುಷ್ಠ ಮುಷ್ಟಿಭಾಗಾನಿ ವಿನ್ಯಸೇತ್ ।
ನವಾಕ್ಷರ ಮಯಂ ದೇಹಂ ಕೃತ್ವಾಂಗೈರಪಿ ಪಾವಿತಂ ॥೧೭॥

---

೧೪. (ಸ್ನಾನದ ತರುವಾಯ) ರಕ್ತವಸ್ತ್ರವನ್ನು ಧರಿಸಿದವನಾಗಿ ಮಂತ್ರಾಚಮನವನ್ನು ಮಾಡಬೇಕು. ಹಗಲು ಬೆಳಿಗ್ಗೆ "ಸೂರ್ಯಶ್ಚ ಮಾ ಮನ್ಯುಶ್ಚ" ಎಂಬ ಮಂತ್ರದಿಂದಲೂ, ರಾತ್ರಿ ಸಾಯಂಕಾಲದಲ್ಲಿ "ಅಗ್ನಿಶ್ಚೇತ್ಯಸ್ಯ" ಎಂಬ ಮಂತ್ರದಿಂದಲೂ, ಮಧ್ಯಾಹ್ನ "ಆಪಃ ಪುನಂತು ಪೃಥಿವೀಂ" ಎಂಬ ಮಂತ್ರದಿಂದಲೂ, ಮಂತ್ರಾಚಮನವನ್ನು ಮಾಡಬೇಕು.

೧೫. ಓಂ ತಪಃ " ಎಂಬ ಆರನೆಯ ಮಂತ್ರದಿಂದ ಶುದ್ಧಿಯನ್ನು ಮಾಡಿ, ವೌಷಟ್ ಎಂಬ ಮಂತ್ರ ಪರ್ಯಂತವಾಗಿ ಜಪಿಸಿ ಹಿಂದೆ ಹೇಳಿದ ಓಂ ಭೂಃ" ಮೊದಲಾದ ನವಬೀಜಾಕ್ಷರ ಯುತವಾದ ಮಂತ್ರವನ್ನು ಜಪಿಸಬೇಕು.

ಕರನ್ಯಾಸವನ್ನು ಹೇಳುತ್ತಾರೆ.

೧೬–೧೭. ಅಂಗುಷ್ಠದಿಂದ ತರ್ಜನಿಯನ್ನೂ, ಮಧ್ಯಮವನ್ನೂ, ಅನಾಮಿಕೆಯನ್ನೂ ಮತ್ತು ಕನಿಷ್ಠಿಕೆಯನ್ನೂ, ನ್ಯಾಸಮಾಡಿ, ಹಸ್ತತಲವನ್ನೂ, ಮತ್ತು ಹಸ್ತದ ಪೃಷ್ಠಭಾಗವನ್ನೂ ನ್ಯಾಸಮಾಡಬೇಕು. ತರುವಾಯ ಪೂರ್ವೋಕ್ತವಾದ ಅಂಗಮಂತ್ರಗಳಿಂದ ನವಬೀಜಾಕ್ಷರಸಹಿತವಾಯ ಮೂಲಮಂತ್ರವನ್ನು ಜಪಿಸಬೇಕು.

ಸೂರ್ಯೋಽಹ ಮಿತಿ ಸಂ ಚಿಂತ್ಯ ಮಂತ್ರೈರೇತೈರ್ಯಥಾ ಕ್ರಮಂ ।
ವಾಮಹಸ್ತ ಗತೈ ರದ್ಭಿ ರ್ಗಂಧ ಸಿದ್ಧಾರ್ಥಕಾನ್ವಿತೈಃ ॥೧೮॥
ಕುಶ ಪುಂಜೇನ ಚಾಭ್ಯುಕ್ಷ್ಯ ಮೂಲಾಗ್ರೈರಷ್ಟಧಾ ಸ್ಥಿತೈಃ ।
ಆಪೋ ಹಿಷ್ಠಾದಿಭಿ ಶ್ಚೈವ ಶೇಷ ಮಾಘ್ರಾಯ ವೈ ಜಲಂ ॥೧೯॥
ವಾಮ ನಾಸಾ ಪುಟೇನೈವ ದೇಹೇ ಸಂಭಾವ ಯೇ ಚ್ಛಿವಂ ।
ಅರ್ಘ್ಯ ಮಾದಾಯ ದೇಹಸ್ಥಂ ಸವ್ಯನಾಸಾ ಪುಟೇನ ಚ ॥೨೦॥
ಕೃಷ್ಣ ವರ್ಣೇನ ಬಾಹ್ಯಸ್ಥಂ ಭಾವಯೇ ಚ್ಚ ಶಿಲಾಗತಂ ।
ತರ್ಪಯೇತ್ ಸರ್ವ ದೇವೇಭ್ಯಃ ಋಷಿಭ್ಯಶ್ಚ ವಿಶೇಷತಃ ॥೨೧॥
ಭೂತೇಭ್ಯಶ್ಚ ಪಿತೃಭ್ಯಶ್ಚ ವಿಧಿನಾಽರ್ಘ್ಯಂ ಚ ದಾಪಯೇತ್ ।
ವ್ಯಾಪಿನೀಂ ಚ ಪರಾಂ ಜ್ಯೋತ್ಸ್ನಾಂ ಸಂಧ್ಯಾಂ ಸಮ್ಯಗುಪಾಸ್ಯ ವೈ ॥

---

೧೮–೧೯. ನಾನು ಸಾಕ್ಷಾತ್ ಸೂರ್ಯಸ್ವರೂಪನಾಗಿದ್ದೇನೆ, ಎಂದು ಭಾವಿಸಿ, ಹಿಂದೆ ಹೇಳಿದ ಮಂತ್ರಗಳಿಂದಲೂ, ಆಪೋಹಿಷ್ಠಾ ಮೊದಲಾದ ಮಂತ್ರಗಳಿಂದಲೂ, ಓಂಭೂಃ ಮೊದಲಾಗಿ ಎಂಟು ವಿಧವಾದ ಮಂತ್ರಗಳನ್ನೂ ಹೇಳಿ, ಎಡದ ಕೈಯ್ಯಲ್ಲಿರುವ ಗಂಧಪುಷ್ಪಾದಿಗಳಿಂದ ಯುಕ್ತವಾದ ನೀರನ್ನು ದರ್ಭೆಯಿಂದ ತನ್ನ ದೇಹದಲ್ಲಿ ಪ್ರೋಕ್ಷಿಸಿ, ಉಳಿದ ನೀರನ್ನು ಎಡಭಾಗದ ಮೂಗಿನ ಸೊಳ್ಳೆಯಿಂದಲೇ ಆಘ್ರಾಣ ಮಾಡಿ, ತನ್ನ ದೇಹದಲ್ಲಿ ಶಿವನನ್ನು ಭಾವಿಸಬೇಕು. ( ಎಂದರೆ ದೇಹದಲ್ಲಿ ಶಿವನು ನೆಲಸಿರುವನು ಎಂದು ಭಾವನೆಯನ್ನು ಇಡಬೇಕೆಂದರ್ಥವು. )

೨೦. ಆಘ್ರಾಣಿಸಿ ಉಳಿದ ನೀರನ್ನು ಪುನಃ ಬಲಭಾಗದ ಮೂಗಿನ ಸೊಳ್ಳೆಯಿಂದ ಆಘ್ರಾಣಿಸಿ ಆ ನೀರನ್ನು ಪಾಪಪುರುಷನೊಂದಿಗೆ ಹೊರಗಿರುವ ಶಿಲೆಯಲ್ಲಿ ವಿಸರ್ಜಿಸಬೇಕು.

೨೧. ಸ್ನಾನಾಂಗವಾದ ತರ್ಪಣದಾನದಲ್ಲಿ ಅರ್ಹರಾದ ಋಷಿ, ದೇವತೆ, ಮುಂತಾದವರನ್ನು ಹೇಳುತ್ತಾರೆ.

ಮುಖ್ಯವಾಗಿ ಋಷಿಗಳಿಗೂ, ದೇವತೆಗಳಿಗೂ, ಭೂತಗಳಿಗೂ ಪಿತೃಗಳಿಗೂ, ತರ್ಪಣವನ್ನು ಕೊಡಬೇಕು.

೨೨. ತ್ರಿಕಾಲಗಳಲ್ಲಿ ವ್ಯಾಪಿಸಿರುವ ಪವಿತ್ರವಾದ ಈ ಸಂಧ್ಯೆಯನ್ನು

**ಪ್ರಾತ ರ್ಮಧ್ಯಾಹ್ನ ಸಾಯಾಹ್ನೇ ಅರ್ಘ್ಯಂ ಚೈವ ನಿವೇದಯೇತ್ ।**
**ರಕ್ತ ಚಂದನ ತೋಯೇನ ಹಸ್ತ ಮಾತ್ರೇಣ ಮಂಡಲಂ ॥೨೩॥**
**ಸುವೃತ್ತಂ ಕಲ್ಪಯೇ ದ್ಭೂಮೌ ಪ್ರಾರ್ಥಯೇತ ದ್ವಿಜೋತ್ತಮಃ ।**
**ಪ್ರಾಙ್ಮುಖ ಸ್ತಾಮ್ರ ಪಾತ್ರಂ ಚ ಸಗಂಧಂ ಪ್ರಸ್ಥ ಪೂರಿತಂ ॥೨೪॥**
**ಪೂರಯೇ ದ್ಗಂಧ ತೋಯೇನ ರಕ್ತ ಚಂದನಕೇನ ಚ ।**
**ರಕ್ತ ಪುಷ್ಪೈ ಸ್ತಿಲೈ ಶ್ಚೈವ ಕುಶಾಕ್ಷತ ಸಮನ್ವಿತೈಃ ॥೨೫॥**
**ದೂರ್ವಾಃ ಪಾಮಾರ್ಗ ಗವ್ಯೇನ ಕೇವಲೇನ ಘೃತೇನ ಚ ।**
**ಆಪೂರ್ಯ ಮೂಲ ಮಂತ್ರೇಣ ನವಾಕ್ಷರ ಮಯೇನ ಚ ॥೨೬॥**
**ಜಾನುಭ್ಯಾಂ ಧರಣೀಂ ಗತ್ವಾ ದೇವ ದೇವಂ ನಮ ಸ್ಯ ಚ ।**
**ಕೃತ್ವಾ ಶಿರಸಿ ತತ್ಪಾತ್ರ ಮರ್ಘ್ಯಂ ಮೂಲೇನ ದಾಪಯೇತ್ ॥೨೭॥**

---

ಉಪಾಸನೆಮಾಡಬೇಕು ಮತ್ತು ತ್ರಿಕಾಲಾರ್ಘ್ಯವನ್ನು ಕೊಡಬೇಕು. ಎಂದರೆ ಬೆಳಿಗ್ಗೆ, ಮಧ್ಯಾಹ್ನ, ಮತ್ತು ಸಾಯಂಕಾಲ, ಈ ಮೂರು ಕಾಲಗಳಲ್ಲಿಯೂ ಅರ್ಘ್ಯವನ್ನು ಕೊಡಬೇಕು.

ಈಗ ಸೌರಾರ್ಘ್ಯಕ್ರಮವನ್ನು ಹೇಳುತ್ತಾರೆ.

೨೩–೨೭. ಎಲೈ ಬ್ರಾಹ್ಮಣರೇ, ರಕ್ತಚಂದನ ಮಿಶ್ರಿತವಾದ ಜಲದಿಂದ ಹಸ್ತಮಾತ್ರ ಪರಿಮಿತವಾದ ವರ್ತುಲಾಕಾರವಾದ ಮಂಡಲವನ್ನು ಭೂಮಿಯಲ್ಲಿ ರಚಿಸಬೇಕು. ರಚಿಸಿ ಗಂಧ ಮಿಶ್ರಿತವಾದ ಜಲದಿಂದ ತುಂಬಿರುವ ಕಲಶವನ್ನು ಸ್ಥಾಪಿಸಿ, ಆ ಕಲಶವನ್ನು ರಕ್ತಪುಷ್ಪಗಳಿಂದಲೂ, ಎಳ್ಳುಕಾಳುಗಳಿಂದಲೂ, ದರ್ಭೆ, ಅಕ್ಷತೆ, ಮುಂತಾದುವುಗಳಿಂದಲೂ, ದೂರ್ವೆ, ಉತ್ತರಣೆ, ಗೋ ಘೃತ ಮುಂತಾದ ವಸ್ತುಗಳಿಂದ ಪೂರಣಮಾಡಿ, ಮೂಲ ಮಂತ್ರವನ್ನು ಹೇಳಿ ಭೂಮಿಯಲ್ಲಿ ಮೊಳಕಾಲನ್ನೂರಿ ಸೂರ್ಯನನ್ನು ನಮಸ್ಕರಿಸಿ, ಪೂರ್ವಾಭಿಮುಖವಾಗಿ ನಿಂತವನಾಗಿ ಸೂರ್ಯನನ್ನು ಪ್ರಾರ್ಥಿಸಬೇಕು. ತರುವಾಯ ಆ ಜಲ ಕಲಶವನ್ನು ಶಿರಸ್ಸಿನಲ್ಲಿಟ್ಟುಕೊಂಡು ಮೂಲ ಮಂತ್ರದಿಂದ ಅರ್ಘ್ಯವನ್ನು ಕೊಡಬೇಕು.

ಅಶ್ವಮೇಧಾಯುತಂ ಕೃತ್ವಾ ಯತ್ಫಲಂ ಪರಿಕೀರ್ತಿತಂ ।
ತತ್ಫಲಂ ಲಭತೇ ದತ್ತ್ವಾ ಸೌರಾರ್ಘ್ಯಂ ಸರ್ವ ಸಂಮತಂ ॥೨೮॥
ದತ್ತ್ವೈವಾರ್ಘ್ಯಂ ಯಜೇದ್ಭಕ್ತ್ಯಾ ದೇವದೇವಂ ತ್ರಿಯಂಬಕಂ ।
ಅಥವಾ ಭಾಸ್ಕರಂ ಚೇಷ್ಟ್ವಾ ಆಗ್ನೇಯಂ ಸ್ನಾನಮಾಚರೇತ್॥೨೯॥
ದಂತಧಾವನ ಪೂರ್ವಂ ಚ ಸ್ನಾನಂ ಸೌರಂ ಚ ಶಾಂಕರಂ।
ವಿಘ್ನೇಶಂ ವರುಣಂ ಚೈವ ಗುರುಂ ತೀರ್ಥೇ ಸಮರ್ಚಯೇತ್॥ ೩೦॥
ಬದ್ಧ್ವಾ ಪದ್ಮಾಸನಂ ತೀರ್ಥೇ ತಥಾ ತೀರ್ಥಂ ಸಮರ್ಚಯೇತ್ ।
ತೀರ್ಥಂ ಸಂಗೃಹ್ಯ ವಿಧಿನಾ ಪೂಜಾ ಸ್ಥಾನಂ ಪ್ರವಿಶ್ಯ ಚ ॥೩೧॥
ಮಾರ್ಗೇಣಾರ್ಘ್ಯಪವಿತ್ರೇಣ ತದಾ ಕೃತ್ವಾ ಚ ಪಾದುಕಂ ।
ಪೂರ್ವವತ್ಕರ ವಿನ್ಯಾಸಂ ದೇಹವಿನ್ಯಾಸ ಮಾಚರೇತ್ ॥೩೨॥

---

೨೮. ಮೇಲೆ ಹೇಳಿದಂತೆ ವಿಧಿವತ್ತಾಗಿ ಸೌರಾರ್ಘ್ಯವನ್ನು ಕೊಡುವದರಿಂದ ಅಶ್ವಮೇಧಯಾಗಾನುಷ್ಠಾನದಿಂದ ಯಾವ ಫಲವು ಹೇಳಲ್ಪಟ್ಟಿದೆಯೋ ಆ ಫಲವನ್ನು ಹೊಂದುತ್ತಾನೆ.

೨೯. ಭಾಸ್ಕರಾರ್ಚನೆಯ ತರುವಾಯ ಶಿವಾರ್ಚನೆಯನ್ನು ಹೇಳುವುದಕ್ಕೋಸ್ಕರ ಅದರ ವಿಧಿಯನ್ನು ಹೇಳುತ್ತಾರೆ.

ಸೌರ ಸ್ನಾನದಂತೆಯೇ ಶಿವಸ್ನಾನವೂ ಶ್ರೇಷ್ಠವಾಗಿರುತ್ತದೆ. ಆದರೆ ಸದ್ಯೋಜಾತಾದಿ ಮಂತ್ರ ಭೇದದಿಂದ ವಿವರವು ಬೇರೆಯಾಗಿರುತ್ತದೆ.

೩೦. ಸೌರ ಸ್ನಾನವೇ ಆಗಲಿ, ಶಿವಸ್ನಾನವೇ ಆಗಲಿ, ಮೊದಲು ದಂತ ಧಾವನವನ್ನು ಮಾಡಿರಬೇಕು. ಮತ್ತು ತೀರ್ಥದಲ್ಲಿ ಗಣೇಶನನ್ನೂ ಗುರುವನ್ನೂ ಧ್ಯಾನಮಾಡಬೇಕು.

೩೧–೩೨. ಪದ್ಮಾಸನವನ್ನು ಹಾಕಿಕೊಂಡು ತೀರ್ಥವನ್ನು ಪೂಜಿಸಬೇಕು. ಅನಂತರ ವಿಧಿವತ್ತಾಗಿ ತೀರ್ಥವನ್ನು ತೆಗೆದುಕೊಂಡು ಪೂಜಾಸ್ಥಾನಕ್ಕೆ ಹೋಗುವ ಮಾರ್ಗವನ್ನು ನೀರಿನಿಂದ ಪ್ರೋಕ್ಷಿಸಿ ಶುದ್ಧಿಮಾಡಿ, ಆ ಮಾರ್ಗದ ಮೂಲಕ ಪೂಜಾಸ್ಥಾನವನ್ನು ಪ್ರವೇಶಿಸಬೇಕು. ಮತ್ತು ಹಿಂದಿನಂತೆ ಕರವಿನ್ಯಾಸವನ್ನೂ, ದೇಹವಿನ್ಯಾಸವನ್ನೂ ಮಾಡಬೇಕು.

ಅರ್ಘ್ಯಸ್ಯ ಸಾದನಂ ಚೈವ ಸಮಾಸಾತ್ಪರಿಕೀರ್ತಿತಂ ।
ಬದ್ಧ್ವಾ ಪದ್ಮಾಸನಂ ಯೋಗೀ ಪ್ರಾಣಾಯಾಮಂ ಸಮಾಚರೇತ್ ॥
ರಕ್ತ ಪುಷ್ಪಾಣಿ ಸಂಗೃಹ್ಯ ಕಮಲಾದ್ಯಾನಿ ಭಾವಯೇತ್ ।
ಆತ್ಮನೋ ದಕ್ಷಿಣೇ ಸ್ಥಾಪ್ಯ ಜಲಭಾಂಡಂ ಚ ವಾಮತಃ ॥೩೪॥
ತಾಮ್ರ ಪಾತ್ರಾಣಿ ಸೌರಾಣಿ ಸರ್ವ ಕಾಮಾರ್ಥ ಸಿದ್ಧಯೇ ।
ಅರ್ಘ್ಯ ಪಾತ್ರಂ ಸಮಾದಾಯ ಪ್ರಕ್ಷಾಲ್ಯ ಚ ಯಥಾ ವಿಧಿ ॥೩೫॥
ಪೂರ್ವೋಕ್ತೇನಾಂಬುನಾ ಸಾರ್ಧಂ ಜಲಭಾಂಡೇ ತಥೈವಚ ।
ಅಸ್ತ್ರೋದಕೇನ ಚೈವಾರ್ಘ್ಯ ಮರ್ಘ್ಯ ದ್ರವ್ಯ ಸಮನ್ವಿತಂ ॥೩೬॥
ಸಂಹಿತಾ ಮಂತ್ರಿತಂ ಕೃತ್ವಾ ಸಂಪೂಜ್ಯ ಪ್ರಥಮೇನ ಚ ।
ತುರೀಯೇಣಾವ ಗುಂಠ್ಯೈವ ಸ್ಥಾಪಯೇದಾತ್ಮನೋ ಪರಿ ॥೩೭॥
ಪಾದ್ಯ ಮಾಚಮನೀಯಂ ಚ ಗಂಧ ಪುಷ್ಪ ಸಮನ್ವಿತಂ ।
ಅಂಭಸಾ ಶೋಧಿತೇ ಪಾತ್ರೇ ಸ್ಥಾಪಯೇತ್ಪೂರ್ವವತ್ಪೃಥಕ್ ॥
ಸಂಹಿತಾಂ ಚೈವ ವಿನ್ಯಸ್ಯ ಕವಚೇನಾವ ಗುಂಠ್ಯ ಚ ॥೩೮॥

---

೩೩. ಅರ್ಘ್ಯಪ್ರದಾನದ ಕ್ರಮವು ಹಿಂದೆ ಸಂಕ್ಷೇಪದಿಂದ ಹೇಳಲ್ಪಟ್ಟಿರುತ್ತದೆ. ಬಳಿಕ ಸಮಾಧಾನ ಚಿತ್ತವುಳ್ಳವನಾಗಿ ಪದ್ಮಾಸನ ಸ್ಥಿತಿಯಲ್ಲಿದ್ದು ಪ್ರಾಣಾಯಾಮವನ್ನು ಅನುಷ್ಠಾನಮಾಡಬೇಕು.

೩೪–೩೮. ರಕ್ತವರ್ಣವುಳ್ಳ ದಾಸವಾಳವೇ ಮುಂತಾದಪುಷ್ಪಗಳನ್ನು ಸಂಗ್ರಹಿಸಿ ಇಟ್ಟು, ಅವುಗಳಲ್ಲಿ ಕಮಲ ಪುಷ್ಪಗಳೇ ಮೊದಲಾದ ಶ್ರೇಷ್ಠ ಪುಷ್ಪಗಳ ಭಾವನೆಯನ್ನಿಡಬೇಕು. ಅನಂತರದಲ್ಲಿ ಜಲಭಾಂಡವನ್ನೂ ತನ್ನ ಬಲಭಾಗದಲ್ಲಿಯೇ ಸ್ಥಾಪಿಸಬೇಕು. ಹೀಗೆ ಸ್ಥಾಪಿಸಿ ಅರ್ಘ್ಯ ಪಾತ್ರೆಯನ್ನು ತೆಗೆದುಕೊಂಡು ಅದನ್ನು ತೊಳೆದು ಪೂರ್ವದಲ್ಲಿ ಹೇಳಿದಂತೆ ಗಂಧಾದಿ ದ್ರವ್ಯಗಳಿಂದ ಯುಕ್ತವಾದ ಜಲಭಾಂಡದಲ್ಲಿರುವ ನೀರನ್ನು ಜಲಾಭಿಮಂತ್ರಣದ ಮಂತ್ರದಿಂದ ಪೂಜಿಸಿ, ಓಂ ಮಹಃ ಎಂಬ ನಾಲ್ಕನೆಯ ಮಂತ್ರದಿಂದ ಅದರ ಮುಚ್ಚಳವನ್ನು ಮೇಲು ಭಾಗದಲ್ಲಿಟ್ಟುಕೊಳ್ಳಬೇಕು. ತರುವಾಯ ಪಾದ್ಯ ಮತ್ತು ಆಚಮನೀಯಗಳ ನೀರನ್ನು

ಅರ್ಘ್ಯಾಂಬುನಾ ಸಮಭ್ಯುಕ್ಷ್ಯ ದ್ರವ್ಯಾಣಿ ಚ ವಿಶೇಷತಃ ।
ಆದಿತ್ಯಂ ಚ ಜಪೇ ದ್ದೇವಂ ಸರ್ವದೇವ ನಮಸ್ಕೃತಂ ॥೩೯॥
ಆದಿತ್ಯೋ ವೈ ತೇಜ ಊರ್ಜೋ ಬಲಂ ಯಶೋ ವಿವರ್ಧತಿ ।
ಇತ್ಯಾದಿನಾ ನಮಸ್ಕೃತ್ಯ ಕಲ್ಪಯೇ ದಾಸನಂ ಪ್ರಭೋಃ ॥೪೦॥
ಪ್ರಭೂತಂ ವಿಮಲಂ ಸಾರಂ ಆರಾಧ್ಯ ಪರಮಂ ಸುಖಂ ।
ಆಗ್ನೇಯ್ಯಾದಿ ಷು ಕೋಣೇಷು ಮಧ್ಯಮಾಂತಂ ಹೃದಿ ನ್ಯಸೇತ್ ॥
ಅಂಗಂ ಪ್ರ ವಿನ್ಯಸೇ ಚ್ಚೈವ ಬೀಜ ಮಂಕುರ ಮೇವಚ ।
ನಾಲಂ ಸುಷಿರ ಸಂಯುಕ್ತಂ ಸೂತ್ರ ಕಂಟಕ ಸಂಯುತಂ ॥೪೨॥

---

ಸಂಶೋಧಿಸಿ ಪೂರ್ವೋಕ್ತ ರೀತಿಯಂತೆ ಬೇರೆ ಬೇರೆ ಪಾತ್ರೆಗಳಲ್ಲಿ ಹಾಕಿ ಇಡಬೇಕು.

೩೯. ಬಳಿಕ ಸಂಹಿತಾ ವಿನ್ಯಾಸವನ್ನು ಮಾಡಿ ಕಲಶವನ್ನು ಕವಚದಿಂದ ಮುಚ್ಚಿ ಪೂಜಾದ್ರವ್ಯಗಳನ್ನು ಅರ್ಘ್ಯದಿಂದ ಸಂಪ್ರೋಕ್ಷಿಸಿ ಸರ್ವದೇವತೆಗಳಿಗೂ ವಂದ್ಯನಾದ ಸೂರ್ಯನ ಮಂತ್ರವನ್ನು ಜಪಿಸಬೇಕು.

೪೦ ತರುವಾಯ "ಆದಿತ್ಯೋ ವೈ ತೇಜ ಓಜೋಬಲಂ ಯಶಃ ಚಕ್ಷುಃ ಶ್ರೋತ್ರ ಮಾತ್ಮಾ, ಎಂಬೀ ಮೊದಲಾದ ಯಾಜುಷ ಮಂತ್ರಗಳಿಂದ ಆದಿತ್ಯನನ್ನು ನಮಸ್ಕರಿಸಿ ಆದಿತ್ಯನಿಗೆ ಆಸನವನ್ನು ಕಲ್ಪಿಸಬೇಕು.

೪೧. ಆಗ್ನೇಯಾದಿ ಉಪದಿಕ್ಕುಗಳಲ್ಲಿ ಓಂಭೂಃ " ಎಂಬ ಮಂತ್ರದಿಂದ ಮೊದಲುಗೊಂಡು ಓಂ ಮಹಃ" ಎಂಬ ಮಂತ್ರದ ಪರ್ಯಂತವೂ ಹೃದಯಾದಿಗಳಿಂದ ನ್ಯಾಸಮಾಡಬೇಕು.

೪೨–೪೩. ಪೂರ್ವೋಕ್ತ ಪ್ರಕಾರದಿಂದ ಅಂಗನ್ಯಾಸವನ್ನುಮಾಡಿ, ಕಮಲದ ಬೀಜವನ್ನೂ ಕಂದವನ್ನೂ, ರಂಧ್ರ ಮತ್ತು ಸೂತ್ರದಿಂದ ಯುಕ್ತವಾದ ನಾಲವನ್ನೂ, ಎಲೆಯನ್ನೂ ಎಲೆಯ ಅಗ್ರಭಾಗವನ್ನೂ, ಇಷ್ಟು ಅವಯವಗಳಿಂದ ಕೂಡಿದ ರಕ್ತವರ್ಣವುಳ್ಳ ಕರ್ಣಿಕಾ ಮತ್ತು

ದಲಂ ದಲಾಗ್ರಂ ಸು ಶ್ವೇತಂ ಹೇಮಾಭಂ ರಕ್ತ ಮೇವಚ ।
ಕರ್ಣಿಕಾ ಕೇಸರೋಪೇತಂ ದಿಪ್ತಾಽದ್ಯೈಃ ಶಕ್ತಿಭಿ ರ್ವೃತಂ ॥೪೩॥
ದೀಪ್ತಾ ಸೂಕ್ಷ್ಮಾ ಜಯಾ ಭದ್ರಾ ವಿಭೂತಿ ರ್ವಿಮಲಾ ಕ್ರಮಾತ್ ।
ಅಘೋರಾ ವಿಕೃತಾ ಚೈವ ದೀಪ್ತಾದ್ಯಾ ಶ್ಚಾಷ್ಟ ಶಕ್ತಯಃ ॥೪೪॥
ಭಾಸ್ಕರಾಭಿ ಮುಖಾಃ ಸರ್ವಾಃ ಕೃತಾಂಜಲಿ ಪುಟಾಃ ಶುಭಾಃ ।
ಅಥವಾ ಪದ್ಮ ಹಸ್ತಾವಾ ಸರ್ವಾಭರಣ ಭೂಷಿತಾಃ ॥೪೫॥
ಮಧ್ಯತೋ ವರದಾಂ ದೇವೀಂ ಸ್ಥಾಪಯೇ ತ್ಸರ್ವತೋ ಮುಖಃ ।
ಆವಾಹಯೇ ತ್ತತೋ ದೇವೀಂ ಭಾಸ್ಕರಂ ಪರಮೇಶ್ವರಂ ॥೪೬॥
ನವಾಕ್ಷರೇಣ ಮಂತ್ರೇಣ ಬಾಷ್ಕಲೋಕ್ತೇನ ಭಾಸ್ಕರಂ ।
ಆವಾಹನೇ ಚ ಸಾನ್ನಿಧ್ಯ ಮನೇನೈವ ವಿಧೀಯತೇ ॥೪೭॥

---

ಕೇಸರಗಳಿಂದ ಕೂಡಿರುವ ಮುಂದೆ ಹೇಳುವ ದೀಪ್ತಾ ಮೊದಲಾದ ಅಷ್ಟ ಶಕ್ತಿಗಳಿಂದ ಪರಿವೃತವಾದ ಕಮಲವನ್ನು ಧ್ಯಾನಮಾಡಬೇಕು.

೪೪. ದೀಪ್ತಾ, ಸೂಕ್ಷ್ಮಾ, ಜಯಾ, ಭದ್ರಾ, ವಿಭೂತೀ, ವಿಮಲಾ, ಅಘೋರಾ, ವಿಕೃತಾ, ಎಂದು ಈ ಎಂಟು ಶಕ್ತಿಗಳನ್ನು ದೀಪ್ತಾದಿ ಅಷ್ಟ ಶಕ್ತಿಗಳೆಂದು ಹೇಳುತ್ತಾರೆ.

೪೫. ಮೇಲೆ ಹೇಳಿದ ಅಷ್ಟಶಕ್ತಿಗಳನ್ನು ಭಾಸ್ಕರನಿಗೆ ಎದುರಾಗಿ ಅಂಜಲಿಬದ್ಧನಾಗಿ ನಿಂತಿರುವಂತೆ ಭಾವಿಸಬೇಕು. ಅಥವಾ ಕೈಯ್ಯಲ್ಲಿ ಪದ್ಮವನ್ನು ಹಿಡಿದುಕೊಂಡು ಸಮಸ್ತ ಆಭರಗಣಗಳನ್ನೂ ಧರಿಸಿರುತ್ತಾರೆ. ಎಂದಾದರೂ ಭಾವಿಸಬೇಕು.

೪೬. ಮಧ್ಯಭಾಗದಲ್ಲಿ ಸಕಲ ವರಗಳನ್ನೂ ಕೊಡುವ ಗಾಯತ್ರೀ ದೇವಿಯನ್ನು ಸ್ಥಾಪಿಸಿ, ಆವಾಹನೆಮಾಡಿ ತರುವಾಯ ಸೂರ್ಯನನ್ನು ಆವಾಹನೆ ಮಾಡಬೇಕು.

೪೭. ನವಾಕ್ಷರ ಮಯವಾದ ಹಿಂದೆ ಹೇಳಿದ ಬಾಷ್ಕಲ ಮಂತ್ರ

ಮುದ್ರಾ ಚ ಪದ್ಮ ಮುದ್ರಾಖ್ಯಾ ಭಾಸ್ಕರಸ್ಯ ಮಹಾತ್ಮನಃ ।
ಮೂಲೇನಾ ರ್ಘ್ಯಂ ತತೋ ದದ್ಯಾತ್ ಪಾದ್ಯಮಾಚಮನಂ ಪೃಥಕ್॥

ಪುನರರ್ಘ್ಯ ಪ್ರದಾನೇನ ಬಾಷ್ಕಲೇನ ಯಥಾವಿಧಿ ।
ರಕ್ತ ಪದ್ಮಾನಿ ಪುಷ್ಪಾಣಿ ರಕ್ತಚಂದನ ಮೇವಚ ॥೪೯॥

ಧೂಪ ದೀಪಾದಿ ನೈವೇದ್ಯಂ ಮುಖವಾಸಾದಿ ರೇವಚ ।
ತಾಂಬೂಲ ವರ್ತಿ ದೀಪಾದ್ಯಂ ಬಾಷ್ಕಲೇನ ವಿಧೀಯತೇ ॥೫೦॥

ಆಗ್ನೇಯ್ಯಾಂ ಚ ತಥೈಶಾನ್ಯಾಂ ನೈಋರ್ತ್ಯಾಂ ವಾಯುಗೋಚರೇ ।
ಪೂರ್ವಸ್ಯಾಂ ಪಶ್ಚಿಮೇ ಚೈವ ಷಟ್ ಪ್ರಕಾರಂ ವಿಧೀಯತೇ ॥೫೧॥

---

ದಿಂದ ಸೂರ್ಯನನ್ನು ಅವಾಹನೆ ಮಾಡೋಣದರಿಂದ ಈ ಆವಾಹನೆ ಯಿಂದಲೇ ಸೂರ್ಯನ ಸಾನ್ನಿಧ್ಯವು ಪ್ರಾಪ್ತವಾಗುವುದು.

೪೮. ಪದ್ಮಮುದ್ರೆಯೆಂದು ಹೆಸರುಳ್ಳ ಮುದ್ರೆಯನ್ನು ಪ್ರದರ್ಶಿಸಿ, ಮೂಲಮಂತ್ರದಿಂದ ಅರ್ಘ್ಯಪಾದ್ಯ ಆಚಮನೀಯಗಳನ್ನು ಬೇರೆಬೇರೆ ಯಾಗಿ ಕೊಡಬೇಕು.

೪೯–೫೦. ಮತ್ತೊಮ್ಮೆ ಅರ್ಘ್ಯಪ್ರದಾನವನ್ನುಮಾಡಿ ಬಾಷ್ಕಲೋಕ್ತ ಮಂತ್ರದಿಂದ ವಿಧಿವತ್ತಾಗಿ ರಕ್ತ ಕಮಲಗಳನ್ನೂ, ಇತರ ರಕ್ತ ಪುಷ್ಪಗಳನ್ನೂ, ರಕ್ತಚಂದನವನ್ನೂ, ಧೂಪದೀಪ ನೈವೇದ್ಯಾದಿ ಗಳನ್ನೂ ತಾಂಬೂಲವನ್ನೂ, ಬತ್ತಿಗಳಿಂದ ಉರಿಸಲ್ಪಟ್ಟದೀಪಗಳನ್ನೂ, ಸಮರ್ಪಿಸಬೇಕು.

೫೧. ಆಗ್ನೇಯ, ಈಶಾನ್ಯ, ನೈಋತ್ಯ, ವಾಯುವ್ಯ, ಪೂರ್ವ ಪಶ್ಚಿಮ ದಿಕ್ಕುಗಳಲ್ಲಿ ಒಟ್ಟುಗೂಡಿ, ಆರು ಪ್ರಕಾರದ ಪೂಜೆಯನ್ನು ಮಾಡಬೇಕು. (ಎಂದರೆ ಪ್ರತಿಯೊಂದು ದಿಕ್ಕಿಗೂ ಬೇರೇ ಬೇರೇ ಪೂಜೆಯನ್ನು ಮಾಡಬೇಕೆಂದರ್ಥವು).

ನೇತ್ರಾಂತಂ ವಿಧಿನಾಽಭ್ಯರ್ಚ್ಯ ಪ್ರಣವಾದಿ ನಮೋಽಂತಕಂ ।
ಕರ್ಣಿಕಾಯಾಂ ಪ್ರವಿನ್ಯಸ್ಯ ರೂಪಕ ಧ್ಯಾನಮಾಚರೇತ್ ॥೫೨॥

ಸರ್ವೇ ವಿದ್ಯುತ್ಪ್ರಭಾಃ ಶಾಂತಾಃ ರೌದ್ರ ಮಸ್ತ್ರಂ ಪ್ರಕೀರ್ತಿತಂ ।
ದಂಷ್ಟ್ರಾಕರಾಲವದನಂ ಹ್ಯಷ್ಟಮೂರ್ತಿಂ ಭಯಂಕರಂ ॥೫೩॥

ವರದಂ ದಕ್ಷಿಣಂ ಹಸ್ತಂ ವಾಮಂ ಪದ್ಮ ವಿಭೂಷಿತಂ ।
ಸರ್ವಾಭರಣ ಸಂಪನ್ನಾಃ ರಕ್ತಸ್ರಗನು ಲೇಪನಾಃ ॥೫೪॥

ರಕ್ತಾಂಬರ ಧರಾಃ ಸರ್ವಾಃ ಮೂರ್ತಯಸ್ತಸ್ಯ ಸಂಸ್ಥಿತಾಃ ।
ಸ ಮಂಡಲೋ ಮಹಾದೇವಃ ಸಿಂಧೂರಾರುಣ ವಿಗ್ರಹಃ ॥೫೫॥

---

೫೨. ಓಂ ಎಂಬ ಪ್ರಣವ ಮೊದಲುಗೊಂಡು ನಮಃ ಎಂಬ ಪರ್ಯಂತದ ಮಂತ್ರಗಳಿಂದ ನೇತ್ರಾಂತವಾಗಿ ಅಂಗನ್ಯಾಸಮಾಡಿ ಕಮಲದ ಕರ್ಣಿಕೆಯಲ್ಲಿ ಸೂರ್ಯನ ಪ್ರತಿಬಿಂಬವನ್ನು ಧ್ಯಾನಮಾಡಬೇಕು

೫೩. ಭಾಸ್ಕರನನ್ನು ಧ್ಯಾನಮಾಡುವ ವಿಧಾನವನ್ನು ಹೇಳುತ್ತಾರೆ. ಹೃದಯಾದಿ ಅವಯವಗಳು ಕಾಂತಿಯುಕ್ತವಾದವುಗಳಾಗಿಯೂ, ಭಾಸ್ಕರನಲ್ಲಿ ಅಸ್ತ್ರವು ಅತಿಭಯಂಕರವಾಗಿಯೂ, ಮುಖವು ಕೋರೆ ದಾಡೆಗಳಿಂದ ಭಯಂಕರವಾಗಿಯೂ, ಇರುತ್ತವೆ. ಇಂತಹ ಭಾವನೆ ಯಿಂದ ಅವನನ್ನು ಧ್ಯಾನಮಾಡಬೇಕು.

೫೪–೫೫. ಮತ್ತು ಆ ಭಾಸ್ಕರನ ದಕ್ಷಿಣ ಹಸ್ತವನ್ನು ವರಗಳನ್ನು ಕೊಡುವುದನ್ನಾಗಿಯೂ, ವಾಮ ಹಸ್ತವನ್ನು ಪದ್ಮದಿಂದ ಅಲಂಕೃತ ವಾದುದನ್ನಾಗಿಯೂ, ಭಾವಿಸಬೇಕು. ಭಾಸ್ಕರನ ಸಮಸ್ತ ಅವಯವ ಗಳೂ, ಸಕಲಾಭರಣ ಭೂಷಿತಗಳೂ, ರಕ್ತಮಾಲ್ಯಧಾರಿಗಳೂ, ರಕ್ತ ವರ್ಣವುಳ್ಳವುಗಳೂ, ರಕ್ತವಸ್ತ್ರವನ್ನು ಧರಿಸಿದವುಗಳೂ ಆಗಿ, ಇರುತ್ತವೆ. ಆ ಭಾಸ್ಕರನು ಮಂಡಲ ಸಹಿತನೂ, ಸಿಂಧೂರದಂತೆ (ಸಿಂಧೂರ ವೆಂದರೆ ಸಾಮಾನ್ಯವಾಗಿ ಕುಂಕುಮದಂತೆ ಕೆಂಪು ಬಣ್ಣವುಳ್ಳ ಚಂದ್ರ ಎಂಬ ಪೂಜಾ ಸಾಮಾಗ್ರಿ) ಕೆಂಪಾದ ವರ್ಣವುಳ್ಳ ಶರೀರವುಳ್ಳವನಾಗಿಯೂ, ಕೈಯ್ಯಲ್ಲಿ ಪದ್ಮವನ್ನು ಧರಿಸಿದವನಾಗಿಯೂ, ಅಮೃತಮಯವಾದ ಮುಖವುಳ್ಳವ

ಪದ್ಮಹಸ್ತೋಽಮೃತಾ ಸ್ಯಶ್ಚ ದ್ವಿಹಸ್ತ ನಯನಃ ಪ್ರಭುಃ ।
ರಕ್ತಾಭರಣ ಸಂಯುಕ್ತೋ ರಕ್ತಸ್ರಗನು ಲೇಪನಃ ॥೫೬॥

ಇತ್ಥಂ ರೂಪಧರಂ ಧ್ಯಾಯೇ ದ್ಭಾಸ್ಕರಂ ಭುವನೇಶ್ವರಂ ।
ಪದ್ಮ ಬಾಹ್ಯೇ ಶುಭಂ ಚಾತ್ರ ಮಂಡಲೇಷು ಸಮಂತತಃ ॥೫೭॥

ಸೋಮ ಮಂಗಾರಕಂ ಚೈವ ಬುಧಂ ಬುದ್ಧಿಮತಾಂವರಂ ।
ಬೃಹಸ್ಪತಿಂ ಮಹಾಬುದ್ಧಿಂ ರುದ್ರಪುತ್ರಂ ಚ ಭಾರ್ಗವಂ ॥೫೮॥

ಶನೈಶ್ಚರಂ ತಥಾ ರಾಹುಂ ಕೇತುಂ ಧೂಮ್ರಂ ಪ್ರಕೀರ್ತಿತಂ ।
ಸರ್ವೇ ದ್ವಿನೇತ್ರಾಃ ದ್ವಿಭುಜಾಃ ರಾಹುಶ್ಚೋರ್ಧ್ವ ಶರೀರಧೃಕ್ ॥

ನಿವೃತ್ತಾಸ್ಯೋಽಂಜಲಿಂ ಕೃತ್ವಾ ಭ್ರುಕುಟೀ ಕುಟಿಲೇಕ್ಷಣಃ ।
ಶನೈಶ್ಚರಶ್ಚ ದಂಷ್ಟ್ರಾಸ್ಯೋ ವರದಾಭಯ ಹಸ್ತಧೃಕ್ ॥೬೦॥

---

ನಾಗಿಯೂ, ಎರಡು ಕೈಗಳುಳ್ಳವನೂ, ಮತ್ತು ಎರಡು ಕಣ್ಣುಗಳ್ಳುವನೂ, ಕೆಂಪಾದ ಆಭರಣಗಳಿಂದ ಯುಕ್ತನೂ ಆಗಿ, ಇರುತ್ತಾನೆ.

೫೭–೫೮. ಜಗತ್ಪತಿಯಾದ ಭಾಸ್ಕರನನ್ನು ಪೂರ್ವೋಕ್ತವಾದ ರೂಪಾದಿಗಳುಳ್ಳವನನ್ನಾಗಿ ಧ್ಯಾನಿಸಬೇಕು. ಯಾವ ಮಂಡಲದಲ್ಲಿ ಪದ್ಮವನ್ನು ರಚಿಸಿದೆಯೋ ಆ ಮಂಡಲದ ಹೊರಭಾಗದಲ್ಲಿ ಮಂಡಲ ಗಳನ್ನು ನಿರ್ಮಿಸಿ, ಆ ಮಂಡಲಗಳಲ್ಲಿ ಚಂದ್ರ, ಅಂಗಾರಕ, ಬುಧ, ಬೃಹಸ್ಪತಿ, ಶುಕ್ರ, ಶನೈಶ್ಚರ, ರಾಹು, ಕೇತು, ಮಧ್ಯದಲ್ಲಿ ಸೂರ್ಯ, ಈ ನವಗ್ರಹಗಳನ್ನು ಸುತ್ತಲೂ ಮಂಡಲಗಳಲ್ಲಿ ಪೂಜಿಸಬೇಕು.

೫೯–೬೦. ಪೂರ್ವೋಕ್ತರಾದ ಸೋಮಾದಿ ನವಗ್ರಹಗಳಲ್ಲಿ ಸರ್ವರೂ, ಎರಡು ಕಣ್ಣುಗಳುಳ್ಳವರೂ, ಮತ್ತು ಎರಡು ಭುಜಗಳುಳ್ಳ ವರೂ, ಆಗಿರುತ್ತಾರೆ. ಅವರಲ್ಲಿ ರಾಹುವು ಕೇವಲ ಶಿರಸ್ಸನ್ನು ಧರಿಸಿ ದವನೂ, ಶನೈಶ್ಚರನು ಬಾಯನ್ನು ತೆರೆದವನಾಗಿಯೂ, ಅಂಜಲಿ ಬದ್ಧನಾಗಿಯೂ, ಕುಟಿಲವಾದ ಕಣ್ಣುಗಳುಳ್ಳವನೂ ಕೋರೆದಾಡೆಗಳಿಂದ ಯುಕ್ತವಾದ ಮುಖವುಳ್ಳವನೂ, ಹಾಗೆಯೇ ಇತರರೂ ವರದ ಹಸ್ತಗ ಳನ್ನೂ ಮತ್ತು ಅಭಯ ಹಸ್ತಗಳನ್ನೂ ಧರಿಸಿದವರಾಗಿಯೂ ಇರುತ್ತಾರೆ.

ಸ್ವೈಃ ಸ್ವೈಃ ಭಾರ್ಗವೈಃ ಸ್ವನಾವ್ನಾ ಚ ಪ್ರಣವಾದಿ ನಮೋಽಂತಕಂ ।
ಪೂಜನೀಯಾಃ ಪ್ರಯತ್ನೇನ ಧರ್ಮಕಾಮಾರ್ಥ ಸಿದ್ಧಯೇ ॥೬೧॥

ಸಪ್ತ ಸಪ್ತಗಣಾಂ ಶ್ಚೈವ ಬಹಿರ್ದೇವಸ್ಯ ಪೂಜಯೇತ್ ।
ಋಷಯೋ ದೇವಗಂಧರ್ವಾಃ ಪನ್ನಗಾ ಪ್ಸರಸಾಂ ಗಣಾಃ ॥೬೨॥

ಗ್ರಾಮಣ್ಯೋ ಯಾತುಧಾನಾಶ್ಚ ತಥಾ ಯಕ್ಷಾಶ್ಚ ಮುಖ್ಯತಃ ।
ಸಪ್ತಾಶ್ವಾನ್ ಪೂಜಯೇ ದಗ್ರೇ ಸಪ್ತಚ್ಛಂದೋ ಮಯಾನ್ ವಿಭೋಃ ॥೬೩॥

ವಾಲ ಖಿಲ್ಯಗಣಂ ಚೈವ ನಿರ್ಮಾಲ್ಯ ಗ್ರಹಣಂ ವಿಭೋಃ ।
ಪೂಜಯೇ ದಾಸನಂ ಮೂರ್ತೇಃ ದೇವತಾಮಪಿ ಪೂಜಯೇತ್ ॥

ಅರ್ಘ್ಯಂ ಚ ದಾಪಯೇ ತ್ತೇಷಾಂ ಪೃಥಗೇವ ವಿಧಾನತಃ ।
ಆವಾಹನೇ ಚ ಪೂಜಾಽಂತೇ ತೇಷಾ ಮುದ್ವಾಸನೇ ತಥಾ ॥೬೫॥

---

೬೧. ಈ ನವಗ್ರಹಗಳನ್ನು ಹಿಂದೆ ಹೇಳಿದ ಸ್ವರೂಪದಿಂದಲೂ, ಆಯಾ ಹೆಸರುಗಳಿಂದಲೂ, ಪ್ರಣವಾದಿ ನಮೋಽಂತವಾದ ಮಂತ್ರಗಳನ್ನು ಹೇಳಿ ಪ್ರಯತ್ನ ಪುರಸ್ಸರವಾಗಿ ಧರ್ಮಾದಿ ಪುರುಷಾರ್ಥತ್ರಯಗಳ ಸಿದ್ಧಿಗೋಸ್ಕರ ಪೂಜಿಸಬೇಕು.

೬೨-೬೩. ದೇವಮಂಟಪದ ಹೊರಭಾಗದಲ್ಲಿ ಸಪ್ತಗಣಗಳನ್ನೂ, ಸಪ್ತಋಷಿಗಳನ್ನೂ, ದೇವತೆಗಳನ್ನೂ, ಗಂಧರ್ವರನ್ನೂ ನಾಗರನ್ನೂ, ಅಪ್ಸರ ಸ್ತ್ರೀಯರನ್ನೂ, ಯಾತು ಧಾನರೆಂಬ ರಾಕ್ಷಸರನ್ನೂ, ಯಕ್ಷರನ್ನೂ ಸಪ್ತಚ್ಛಂದೋಗಣ ಸ್ವರೂಪವಾದ ಸಪ್ತಾಶ್ವಗಳನ್ನೂ, ಭಾಸ್ಕರನ ಮುಂಭಾಗದಲ್ಲಿ ಸ್ಥಾಪಿಸಿ ಪೂಜಿಸಬೇಕು.

೬೪-೬೬. ನಿರ್ಮಾಲ್ಯವನ್ನು ಸ್ವೀಕಾರಮಾಡುವ ವಾಲಖಿಲ್ಯವೆಂದು ಸಂಜ್ಞೆಯುಳ್ಳ ಋಷಿ ಸಮುದಾಯುವನ್ನು ಪೂಜಿಸಿ,ದೇವ ವಿಗ್ರಹವನ್ನೂ ಪೂಜಿಸಿ, ಸೂರ್ಯಾದಿಗಳಿಗೆ ಅರ್ಘ್ಯಾದಿಗಳನ್ನು ಕೊಡಬೇಕು. ಪೂಜೆಯ ಅಂತ್ಯದಲ್ಲಿಯೂ, ಆವಾಹನೆಯಕಾಲದಲ್ಲಿಯೂ, ವಿಸರ್ಜನೆಯ

ಸಹಸ್ರಂ ವಾ ತದರ್ಧಂ ವಾ ಶತ ಮಷ್ಟೋತ್ತರಂ ತು ವಾ ।
ಬಾಷ್ಕಲಂ ಚ ಜಪೇದಗ್ರೇ ದಶಾಂಶೇನ ಚ ಯೋಜಯೇತ್ ॥೬೬॥
ಕುಂಡಂ ಚ ಪಶ್ಚಿಮೇ ಕುರ್ಯಾದ್ವರ್ತುಲಂ ಚೈವ ಮೇಖಲಂ ।
ಚತುರಂಗುಲ ಮಾನೇನ ಚೋತ್ಸೇಧಾ ದ್ವಿಸ್ತರಾದಪಿ ॥೬೭॥
ಏಕಹಸ್ತ ಪ್ರಮಾಣೇನ ನಿತ್ಯೇ ನೈಮಿತ್ತಿಕೇ ತಥಾ ।
ಕೃತ್ವಾಽಶ್ವತ್ಥ ದಲಾಕಾರಂ ನಾಭಿಂ ಕುಂಡೇ ದಶಾಂಗುಲಂ ॥೬೮॥
ತದರ್ಧೇನ ಪುರಸ್ತಾತ್ತು ಗಜೋಷ್ಠ ಸದೃಶಂ ಸ್ಮೃತಂ ।
ಗಲಮೇಕಾಂಗುಲಂ ಚೈವ ಶೇಷಂ ದ್ವಿಗುಣವಿಸ್ತರಂ ॥೬೯॥

---

ಕಾಲದಲ್ಲಿಯೂ, ಸಾವಿರವನ್ನಾಗಲೀ, ಐದುನೂರನ್ನಾಗಲೀ, ಅಷ್ಟೋತ್ತರ ವನ್ನಾಗಲೀ, ಬಾಷ್ಕಲ ಮಂತ್ರವನ್ನು ಜಪಿಸಬೇಕು. ಅಲ್ಲದೆ ಅಂತ್ಯ ದಲ್ಲಿಯೂ ಮೊದಲಿನಲ್ಲಿಯೂ ಇದರ ಹತ್ತನೆಯ ಒಂದು ಅಂಶದಷ್ಟು ಸಲ ಮಂತ್ರವನ್ನು ಜಪಿಸಬೇಕು.

೬೭. ಹೋಮ ವಿಧಿಯನ್ನು ಹೇಳುತ್ತಾರೆ. ಮಂಡಲದ ಪಶ್ಚಿಮ ದಿಕ್ಕಿನಲ್ಲಿ ಅಗ್ನಿಕುಂಡವನ್ನೂ, ವೇದಿಕೆಯನ್ನೂ, ಅದರ ಸಮೀಪದಲ್ಲಿ ನಾಲ್ಕು ಅಂಗುಲಗಳ ಪ್ರಮಾಣವುಳ್ಳ ವರ್ತುಲಾಕಾರವಾದ ನಾಭಿಯನ್ನು ಮಾಡಿ ಸ್ಥಾಪಿಸಬೇಕು.

೬೮. ನಿತ್ಯ ಕರ್ಮದಲ್ಲಾಗಲಿ ನೈಮಿತ್ತಿಕ ಕರ್ಮದಲ್ಲಾಗಲೀ, ಇವೆರಡರಲ್ಲಿಯೂ ಪೂರ್ವೋಕ್ತವಾದ ಏಕಹಸ್ತ ಪ್ರಮಾಣವುಳ್ಳ ವೇದಿಕೆ ಯಲ್ಲಿ ಅಶ್ವತ್ಥದಲದ ಆಕಾರವನ್ನು ರಚಿಸಿ ಆ ಅಶ್ವತ್ಥದಲಾಕಾರದಲ್ಲಿ ಹತ್ತು ಅಂಗುಲ ಪ್ರಮಾಣವುಳ್ಳ ನಾಭಿಯನ್ನು ನಿರ್ಮಿಸಬೇಕು. (ನಾಭಿ ಯೆಂದರೆ ಅಗ್ನಿ ಪ್ರತಿಷ್ಠಾಪನೆಮಾಡುವುದಕ್ಕೋಸ್ಕರ ವೇದಿಕೆಯಲ್ಲಿ ರಚಿ ಸಲ್ಪಡುವ ಒಂದು ನಿಮ್ನವಾದ ಸ್ಥಾನ ವಿಶೇಷವೆಂದು ಅರ್ಥ).

೬೯. ವೇದಿಕೆಯ ಮುಂಭಾಗದಲ್ಲಿ ಐದು ಅಂಗುಲ ಪ್ರಮಾಣ ವುಳ್ಳ ಮತ್ತು ಆನೆಯ ತುಟಿಯ ಆಕಾರದಂತೆ ಆಕಾರವುಳ್ಳ ನಾಭಿ ಯನ್ನೂ. ಒಂದು ಅಂಗುಲ ಪರಿಮಿತವಾದ ಆನೆಯ ಕತ್ತಿನ ಆಕಾರ

ತತ್ಪ್ರಮಾಣೇನ ಕುಂಡಸ್ಯ ತ್ಯಕ್ತ್ವಾ ಕುರ್ವೀತ ಮೇಖಲಾಂ ।
ಯತ್ನೇನ ಸಾಧಯಿತ್ವೈವ ಪಶ್ಚಾದ್ಧೋಮಂ ಚ ಕಾರಯೇತ್ ॥
ಷಷ್ಠೇನೋಲ್ಲೇಖನಂ ಕುರ್ಯಾತ್ ಪ್ರೋಕ್ಷಯೇದ್ವಾರಿಣಾ ಪುನಃ ।
ಆಸನಂ ಕಲ್ಪಯೇನ್ಮಧ್ಯೇ ಪ್ರಥಮೇನ ಸಮಾಹಿತಃ ॥೭೧॥
ಪ್ರಭಾವತೀಂ ತತಃ ಶಕ್ತಿ ಮಾದ್ಯೇನೈವ ತು ವಿನ್ಯಸೇತ್ ।
ಬಾಷ್ಕಲೇ ನೈವ ಸಂಪೂಜ್ಯ ಗಂಧಪುಷ್ಪಾದಿಭಿಃ ಕ್ರಮಾತ್ ॥೭೨॥
ಬಾಷ್ಕಲೇ ನೈವ ಮಂತ್ರೇಣ ಕ್ರಿಯಾಂ ಪ್ರತಿಯುಜೇತ್ ಪೃಥಕ್ ।
ಮೂಲಮಂತ್ರೇಣ ವಿಧಿನಾ ಪಶ್ಚಾ ತ್ಪೂರ್ಣಾಹುತಿ ರ್ಭವೇತ್ ॥

---

ವನ್ನೂ ಉಳಿದಭಾಗದಲ್ಲಿ ಎರಡರಷ್ಟು ಅಂಗುಲ ವಿಸ್ತಾರವುಳ್ಳ ನಾಭಿಯನ್ನೂ ರಚಿಸಬೇಕು.

೭೦. ಕುಂಡದಿಂದ ಎರಡು ಅಂಗುಲ ಪ್ರಮಾಣದೂರದಲ್ಲಿ ಮೇಖಲೆಯನ್ನು ರಚಿಸಿ ಈ ಕಾರ್ಯವನ್ನು ಪ್ರಯತ್ನ ಪೂರ್ವಕವಾಗಿ ಸ್ಥಾಪಿಸಿ ಅನಂತರ ಹೋಮವನ್ನು ಮಾಡಬೇಕು.

೭೧. ಓಂ, ತಪಃ, ಎಂಬ ಆರನೆಯ ಮಂತ್ರದಿಂದ ನಾಭಿಯ ಒಳಭಾಗದಲ್ಲಿ ದಕ್ಷಿಣೋತ್ತರವಾಗಿಯೂ, ಮತ್ತು ಪೂರ್ವ ಪಶ್ಚಿಮವಾಗಿಯೂ ಮೂರು ಮೂರು ಗೆರೆಗಳನ್ನು ವಿನ್ಯಾಸಮಾಡಿ, ಪುನಃ ಜಲದಿಂದ ಅದನ್ನು ಪ್ರೋಕ್ಷಿಸಿ, ಓಂ ಭೂಃ. ಎಂಬ ಪ್ರಥಮ ಮಂತ್ರ ದಿಂದ ಮಧ್ಯದಲ್ಲಿ ಆಸನವನ್ನು ಕಲ್ಪಿಸ ಬೇಕು.

೭೨–೭೩. ಅನಂತರದಲ್ಲಿ ಓಂಭೂಃ, ಎಂಬ ಆದ್ಯ ಮಂತ್ರದಿಂದ ಪ್ರಭಾವತೀ ಎಂಬ ಸಂಜ್ಞೆಯುಳ್ಳ ಶಕ್ತಿದೇವತೆಯನ್ನು ವಿನ್ಯಾಸಮಾಡಿ, ಬಾಷ್ಕಲ ಮಂತ್ರದಿಂದಲೇ ಗಂಧ ಪುಷ್ಪಾದಿ ಪೂಜಾಸಾಮಗ್ರಿಗಳಿಂದ ಪೂಜಿಸಿ, ಮುಂದಿನ ಸಕಲ ಅರ್ಚನ ಕ್ರಿಯೆಗಳನ್ನೂ, ಬಾಷ್ಕಲ ಮಂತ್ರದಿಂದಲೇ ನೆರವೇರಿಸಬೇಕು. ಅನಂತರದಲ್ಲಿ ಮೂಲಮಂತ್ರದಿಂದ ಪೂರ್ಣಾಹುತಿಯನ್ನು ನೆರವೇರಿಸಬೇಕು.

ಕ್ರಮಾದೇವಂ ವಿಧಾನೇನ ಸೂರ್ಯಾಗ್ನಿರ್ಜನಿತೋ ಭವೇತ್ ।
ಪೂರ್ವೋಕ್ತೇನ ವಿಧಾನೇನ ಪ್ರಾಗುಕ್ತಂ ಕಮಲಂ ನ್ಯಸೇತ್ ॥೭೪॥
ಮುಖೋಪರಿ ಸಮಭ್ಯರ್ಚ್ಯ ಪೂರ್ವವದ್ಭಾಸ್ಕರಂ ಪ್ರಭುಂ ।
ದಶೈವಾಹುತಯೋ ದೇಯಾ ಬಾಷ್ಕಲೇನ ಮಹಾಮುನೇ ॥೭೫॥
ಅಂಗಾನಾಂ ಚ ತಥೈ ಕೈಕಂ ಸಂಹಿತಾಭಿಃ ಪೃಥಕ್ ಪುನಃ ।
ಜಯಾದಿ ಸ್ವಿಷ್ಟ ಪರ್ಯಂತ ಮಿಧ್ಮಪ್ರಕ್ಷೇಪ ಮೇವ ಚ ॥೭೬॥
ಸಾಮಾನ್ಯಂ ಸರ್ವ ಮಾರ್ಗೇಷು ಪಾರಂಪರ್ಯಂ ಕ್ರಮೇಣ ಚ ।
ನಿವೇದ್ಯ ದೇವದೇವಾಯ ಭಾಸ್ಕರಾಯಾ ಮಿತಾತ್ಮನೇ ॥೭೭॥
ಪೂಜಾ ಹೋಮಾದಿಕಂ ಸರ್ವಂ ದತ್ವಾರ್ಘ್ಯಂ ಚ ಪ್ರದಕ್ಷಿಣಂ ।
ಅಂಗೈಃ ಸಂಪೂಜ್ಯ ಸಂಕ್ಷಿಪ್ಯ ಹೃದ್ಯುದ್ವಾಸ್ಯ ನಮಸ್ಯ ಚ ॥೭೮॥

---

೭೪. ಪೂರ್ವೋಕ್ತ ಕ್ರಮದಿಂದ ಸೌರಹೋಮ ಸಂಬಂಧವಾದ ಅಗ್ನಿಯು ಉತ್ಪನ್ನವಾಗುತ್ತದೆ. ಹಿಂದೆ ಹೇಳಿದ ವಿಧಾನದಿಂದಲೇ ಚೂರ್ಣದಿಂದ ರಚಿಸಿದ ಕಮಲವನ್ನು ಪೂಜಿಸಬೇಕು.

೭೫. ಎಲೈ ಮಹಾಮುನಿಯೇ, ಕಮಲದ ಮುಖದ ಮೇಲು ಭಾಗದಲ್ಲಿ ಪೂರ್ವೋಕ್ತ ರೀತಿಯಿಂದ ಸೂರ್ಯನನ್ನು ಪೂಜಿಸಿ ಬಾಷ್ಕಲ ಮಂತ್ರದಿಂದ ಹತ್ತು ಆಹುತಿಗಳನ್ನು ಕೊಡಬೇಕು.

೭೬–೭೮. ಒಂದೊಂದು ಅಂಗಮಂತ್ರದಿಂದ ಜಯಾದಿ ಹೋಮ ದಿಂದ ಸ್ವಿಷ್ಟಕೃದ್ಧೋಮ ಪರ್ಯಂತವಾಗಿ ಹೋಮವನ್ನು ಮಾಡಿ, ಹೋಮಕಾಲದಲ್ಲಿ ಸಮಿತ್ತನ್ನು ಕ್ರಮವಾಗಿ ಪ್ರಕ್ಷೇಪಮಾಡಬೇಕು. ತರುವಾಯ ಪೂಜಾಹೋಮಾದಿಗಳನ್ನೂ, ಅರ್ಘ್ಯವನ್ನೂ ಭಾಸ್ಕರನಿಗೆ ನಿವೇದಿಸಿ ಪ್ರದಕ್ಷಿಣೆಯನ್ನು ಮಾಡಿ, ಅಂಗಮಂತ್ರಗಳಿಂದ ಸಂಕ್ಷೇಪ ವಾಗಿ ಪೂಜಿಸಿ ಹೃತ್ಪೂರ್ವಕವಾಗಿ ಅಗ್ನಿಯನ್ನು ಆತ್ಮಸಮಾರೋಪಣೆ ಯಿಂದ ವಿಸರ್ಜಿಸಿ ನಮಸ್ಕಾರವನ್ನು ಮಾಡಿ,ಬಳಿಕ ಧರ್ಮಾದಿ ಪುರುಷಾ ರ್ಥತ್ರಯ ಸಿದ್ಧಿಗೋಸ್ಕರ ಶಿವಪೂಜೆಯನ್ನಾಚರಿಸಬೇಕು.

ಶಿವಪೂಜಾಂ ತತಃ ಕುರ್ಯಾ ದ್ಧರ್ಮ ಕಾಮಾರ್ಥ ಸಿದ್ಧಯೇ ।
ಏವಂ ಸಂಕ್ಷೇಪತಃ ಪ್ರೋಕ್ತಂ ಯಜನಂ ಭಾಸ್ಕರಸ್ಯ ಚ ॥೭೯॥

ಯಃ ಸಕೃದ್ವಾ ಯಜೇ ದೇವಂ ದೇವದೇವಂ ಜಗದ್ಗುರುಂ ।
ಭಾಸ್ಕರಂ ಪರಮಾತ್ಮಾನಂ ಸ ಯಾತಿ ಪರಮಾಂ ಗತಿಂ ॥೮೦॥

ಸರ್ವ ಪಾಪ ವಿನಿರ್ಮುಕ್ತಃ ಸರ್ವ ಪಾಪ ವಿವರ್ಜಿತಃ ।
ಸರ್ವೈಶ್ವರ್ಯ ಸಮೋಪೇತಃ ತೇಜಸಾಽ ಪ್ರತಿಮಶ್ಚ ಸಃ ॥೮೧॥

ಪುತ್ರ ಪೌತ್ರಾದಿ ಮಿತ್ರೈಶ್ಚ ಬಾಂಧವೈಶ್ಚ ಸಮಂತತಃ ।
ಭುಕ್ತ್ವೈವ ವಿಪುಲಾನ್ ಭೋಗಾನ್ ಇಹೈವ ಧನಧಾನ್ಯವಾನ್ ॥

ಯಾನ ವಾಹನ ಸಂಪನ್ನೋ ಭೂಷಣೈರ್ವಿವಿಧೈರಪಿ ।
ಕಾಲಂ ಗತೋಽಪಿ ಸೂರ್ಯೇಣ ಮೋದತೇ ಕಾಲಮಕ್ಷಯಂ ॥೮೩॥

ಪುನಸ್ತಸ್ಮಾದಿಹಾ ಗತ್ಯ ರಾಜಾ ಭವತಿ ಧಾರ್ಮಿಕಃ ।
ವೇದ ವೇದಾಂಗ ಸಂಪನ್ನೋ ಬ್ರಾಹ್ಮಣೋ ವಾತ್ರಃ ಜಾಯತೇ ॥

---

೭೯. ಈ ರೀತಿಯಾಗಿ ಸಂಕ್ಷೇಪವಾಗಿ ಸೂರ್ಯಾರ್ಚನೆಯ ಕ್ರಮವನ್ನು ಹೇಳಲಾಗಿದೆ.

೮೦. ಯಾವ ದ್ವಿಜನು ಜಗದ್ಗುರುವೂ, ದೇವೇಶನೂ, ಆದ ಭಾಸ್ಕರನನ್ನು ಒಂದೇ ಆ ವೃತ್ತಿ ಪೂಜೆಮಾಡಿದರೂ ಸಹ ಪರಮಾತ್ಮ ಸ್ವರೂಪನಾದ ಭಾಸ್ಕರನ ಸಾಯುಜ್ಯವನ್ನು ಹೊಂದುತ್ತಾನೆ.

೮೧–೮೪. ಭಾಸ್ಕರಾರ್ಚನೆಯನ್ನು ಮಾಡುವವನು ಭಾಸ್ಕರ ಸಾಯುಜ್ಯವನ್ನು ಪಡೆಯುವ ಕ್ರಮವನ್ನು ಹೇಳುತ್ತಾರೆ. ಭಾಸ್ಕರನ ಪೂಜೆಯನ್ನು ಮಾಡಿದವನು ಹಿಂದಿನ ಮತ್ತು ಮುಂದಿನ ಸಮಸ್ತ ಪಾಪಗಳಿಂದಲೂ ಬಾಹಿರನಾಗಿ, ಸಕಲ ಐಶ್ವರ್ಯಗಳಿಂದ ಕೂಡಿದವನೂ, ಅಪರಿಮಿತವಾದ ತೇಜಸ್ಸನ್ನು ಹೊಂದಿದವನೂ ಆಗುತ್ತಾನೆ. ಮತ್ತು ಪುತ್ರಪೌತ್ರಮಿತ್ರಬಾಂಧವರೊಡನೆ ಧನಧಾನ್ಯಾದಿ ಜನ್ಯವಾದ ಸಕಲ ಭೋಗಗಳನ್ನೂ ಈ ಲೋಕದಲ್ಲಿಯೇ ಅನುಭವಿಸಿ, ಅಂತ್ಯಕಾಲದಲ್ಲಿ ರಥಾದಿ ಯಾನಗಳನ್ನೂ ಮತ್ತು ವಾಹನಗಳನ್ನೂ ಆರೋಹಣಮಾಡಿ ದಿವಂಗತನಾದರೂ,

**ಪುನಃ ಪ್ರಾಗ್ವಾಸನಾಯೋಗಾ ದ್ಧಾರ್ಮಿಕೋ ವೇದಪಾರಗಃ ।**
**ಸೂರ್ಯಮೇವ ಸಮಭ್ಯರ್ಚ್ಯ ಸೂರ್ಯಸಾಯುಜ್ಯಮಾಪ್ನುಯಾತ್ ॥೮೫॥**

**ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ದ್ವಾವಿಂಶತಿ ತಮೋಽಧ್ಯಾಯಃ**

---

ಲೋಕಾಂತರದಲ್ಲಿ ಅನೇಕ ವರ್ಷಕಾಲ ಭೋಗ ಗೊಂಡವನಾಗಿ ಪುನಃ ಆ ಲೋಕದಿಂದ ಭೂಲೋಕಕ್ಕೆ ಬಂದು ಧಾರ್ಮಿಕನಾದ ರಾಜನ ಜನ್ಮವನ್ನಾಗಲೀ ವೇದವೇದಾಂಗಯುಕ್ತನಾದ ಬ್ರಾಹ್ಮಣ ಜನ್ಮವನ್ನಾಗಲೀ ಹೊಂದುತ್ತಾನೆ. ಪುನಃ ಹಿಂದಿನ ಜನ್ಮದ ಸಂಸ್ಕಾರದಿಂದ ಈ ಲೋಕದಲ್ಲಿ ಸೂರ್ಯನನ್ನು ಪೂಜಿಸಿ ತರುವಾಯ ಸೂರ್ಯನ ಸಾಯುಜ್ಯವನ್ನು ಹೊಂದುತ್ತಾನೆ.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.

अथ श्री लिंगमहापुराणे उत्तरभागे
त्रयो विंशति तमोऽध्यायः

॥ शैलादि रुवाच ॥

**ಅಥ ತೇ ಸಂಪ್ರವಕ್ಷ್ಯಾಮಿ ಶಿವಾರ್ಚನ ಮನುತ್ತಮಂ ।**
**ತ್ರಿಸಂಧ್ಯ ಮರ್ಚಯೇದೀಶಂ ಅಗ್ನಿಕಾರ್ಯಂ ಚ ಶಕ್ತಿತಃ ॥ ೧ ॥**
**ಶಿವಸ್ನಾನಂ ಪುರಾ ಕೃತ್ವಾ ತತ್ತ್ವ ಶುದ್ಧಿಂ ಚ ಪೂರ್ವವತ್ ।**
**ಪುಷ್ಪಹಸ್ತಃ ಪ್ರವಿಶ್ಯಾಥ ಪೂಜಾಸ್ಥಾನಂ ಸಮಾಹಿತಃ ॥ ೨ ॥**

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಇಪ್ಪತ್ತುಮೂರನೇಯ
ಅಧ್ಯಾಯವು.

೧–೩. ಶೈಲಾದಿಯು ಹೇಳಿದನು:— ಎಲೈ ದ್ವಿಜನೇ, ಇನ್ನು ಮುಂದೆ ಶ್ರೇಷ್ಠವಾದ ಶಿವಾರ್ಚನೆಯ ಕ್ರಮವನ್ನು ವಿಸ್ತರಿಸಿ ಹೇಳುವೆನು. ಪ್ರಾತರಾದಿ ಮೂರು ಕಾಲಗಳಲ್ಲಿಯೂ, ಶಿವನನ್ನು ಅರ್ಚಿಸಬೇಕು. ಮತ್ತು ಶಕ್ತಿಗನುಸಾರವಾಗಿ ತ್ರಿಕಾಲಗಳಲ್ಲಿಯೂ ಅಗ್ನಿ ಕಾರ್ಯಗಳನ್ನೂ ಮಾಡಬೇಕು. (ಬ್ರಹ್ಮಚಾರಿಗಳಾದರೆ ಅಗ್ನಿಕಾರ್ಯವನ್ನೂ, ಗೃಹಸ್ಥ ರಾದರೆ ಔಪಾಸನವನ್ನೂ ಮಾಡಬೇಕೆಂದು ತಿಳಿಯತಕ್ಕದ್ದು). ಶಿವ ಪೂಜೆಯನ್ನು ಮಾಡುವವನು ಮೊದಲು ಭಾಸ್ಕರ ಪೂಜೆಯಲ್ಲಿ ಹಿಂದೆ ಹೇಳಿದ ಕ್ರಮದಂತೆ ಸ್ನಾನವನ್ನೂ ಮತ್ತು ತತ್ತ್ವಶುದ್ಧಿ (ಭೂತಶುದ್ಧಿ) ಯನ್ನೂ ಆಚರಿಸಿ ಕೈಯ್ಯಲ್ಲಿ ಹುವ್ವನ್ನು ತೆಗೆದುಕೊಂಡು (ಹೂಗಳೆಂದರೆ ಅರ್ಥಾತ್ ಪೂಜಾಸಾಮಗ್ರಿಯೆಂದರ್ಥವು.) ಪೂಜೆ ಮಾಡುವ ಸ್ಥಳ ವನ್ನು ಪ್ರವೇಶಿಸಿ ಚಿತ್ತೈಕಾಗ್ರ್ಯವುಳ್ಳವನಾಗಿ ಮೂರಾವೃತ್ತಿ ಪ್ರಾಣಾ ಯಾಮವನ್ನು ಮಾಡಿ, ಭೂತಶುದ್ಧಿ ಕ್ರಮದಲ್ಲಿ ಹೇಳುವ ದಹನ ಪ್ಲಾವ ನಾದಿ ಕ್ರಿಯೆಗಳನ್ನು ನೆರವೇರಿಸಿ, ಕೈಗಳನ್ನು ಗಂಧಾದಿ ಪರಿಮಳ ದ್ರವ್ಯ ಗಳಿಂದ ಪರಿಮಳ ಯುಕ್ತವಾದದ್ದನ್ನಾಗಿ ಮಾಡಿ, ಯೋಗಶಾಸ್ತ್ರೋಕ್ತ ವಾದ ಮಹಾಮುದ್ರೆಯೆಂಬ ಮುದ್ರೆಯನ್ನು ವಿನ್ಯಾಸಮಾಡಬೇಕು.

ಪ್ರಾಣಾಯಾಮ ತ್ರಯಂ ಕೃತ್ವಾ ದಹನಾ ಪ್ಲಾವನಾನಿ ಚ ।
ಗಂಧಾದಿ ವಾಸಿತ ಕರೋ ಮಹಾಮುದ್ರಾಂ ಪ್ರವಿನ್ಯಸೇತ್ ॥ ೩ ॥
ವಿಜ್ಞಾನೇನ ತನುಂ ಕೃತ್ವಾ ಬ್ರಹ್ಮಾಗ್ನೇರಪಿ ಯತ್ನತಃ ।
ಅವ್ಯಕ್ತ ಬುದ್ಧ್ಯಹಂಕಾರ ತನ್ಮಾತ್ರಾಸಂಭವಾಂ ತನುಂ ॥ ೪ ॥
ಶಿವಾಮೃತೇನ ಸಂಪ್ಲೂತಂ ಶಿವಸ್ಯ ಚ ಯಥಾ ತಥಂ ।
ಅಧೋನಿಷ್ಟ್ಯಾ ವಿತಸ್ತ್ಯಾಂ ತು ನಾಭ್ಯಾಮುಪರಿ ತಿಷ್ಠತಿ ॥ ೫ ॥

---

ಮಹಾಮುದ್ರೆಯೆಂದರೆ ಕಾಲುಗಳೆರಡನ್ನೂ ಕೆಳಗೆ ನೀಡಿ, ಎಡಗಡೆಯ ಕಾಲಿನ ಬುಡದ ಭಾಗದಿಂದ ಯೋನಿಯ ದಕ್ಷಿಣ ಭಾಗವನ್ನು ಒತ್ತುವುದು, ಪೀಡಿಸುವುದು. ಹೀಗೆ ಪೀಡಿಸಿದ ಕಾಲುಗಳನ್ನು ಬಲವಾಗಿ ಕೈಗಳಿಂದ ಹಿಡಿದುಕೊಳ್ಳಬೇಕು. ಈ ಮುದ್ರೆಯನ್ನು ಮಹಾಮುದ್ರೆಯೆಂದು ಯೋಗಿಗಳು ಹೇಳುತ್ತಾರೆ. ಹಠಪ್ರದೀಪಿಕೆಯಲ್ಲಿ ಹೀಗೆಯೇ ಹೇಳಲ್ಪಟ್ಟಿದೆ. "ಪಾದಮೂಲೇನ ವಾಮೇನ ಯೋನಿಂಸಂಪೀಡ್ಯ ದಕ್ಷಿಣಂ। ಪ್ರಸಾರಿತಂ ಪದಂ ಕೃತ್ವಾ ಕರಾಭ್ಯಾಂ ಧಾರಯೇ ದ್ದೃಢಂ॥ ಕಂಠೇಬಂಧಂ ಸಮಾರೋಪ್ಯ ಧಾರಯೇ ದ್ವಾಯುಮೂರ್ಧ್ವತಃ ॥" ಎಂದು ವಿವರಿಸಿದೆ.

೪–೫. ಜ್ಞಾನಾಗ್ನಿಯಿಂದ ಅವಿದ್ಯೆಯ ನಿಶ್ಚಯಾತ್ಮಕ ವೃತ್ತಿಯುಳ್ಳ ಅಂತಃಕರಣವನ್ನು ಅತ್ಮನಲ್ಲಿ ಅನಾತ್ಮವಾದ ಅಂತಃಕರಣತಾದಾತ್ಮ್ಯದ ಅಧ್ಯಾಸರೂಪವಾದ ಅಹಂಕಾರ ಮತ್ತು ಆಕಾಶಾದಿ ಪಂಚ ತನ್ಮಾತ್ರೆ ಇವುಗಳಿಂದುಂಟಾದ ಸೂಕ್ಷ್ಮವಾದ ಶರೀರವನ್ನು ದಹಿಸಿ, ಜ್ಞಾನದಿಂದ ಪವಿತ್ರೀಕರಿಸಬೇಕು. (ಶಿವನನ್ನು ಸಾಕ್ಷಾತ್ಕರಿಸತಕ್ಕ ಉಪಾಯವು ಯಾವುದೆಂದರೆ ಉಪಾಯವನ್ನು ಹೇಳುತ್ತಾರೆ). ಯೋಗಶಾಸ್ತ್ರೋಕ್ತವಾದ, ಅಮೃತ ಬಿಂದುಗಳಿಂದ ಪವಿತ್ರವಾಗಿ ಮಾಡಲ್ಪಟ್ಟ, ಶಿವನ ಆವಿರ್ಭಾವಕ್ಕೆ ಆಧಾರಭೂತವಾದ, ಹೃದಯ ಕಮಲವು ನಾಭಿಯಿಂದ ಹನ್ನೆರಡು ಅಂಗುಲದಷ್ಟು ಮೇಲ್ಭಾಗದಲ್ಲಿ ಕೆಳಮುಖವಾಗಿ ಇರುತ್ತದೆ. ಇದನ್ನೇ ಹೃದಯವನ್ನಾಗಿ ತಿಳಿಯಬೇಕು. ಇದೇ ಜಗದಾಧಾರನಾದ ಆ ಪರಮೇಶ್ವರನಿಗೆ ನಿವಾಸಸ್ಥಾನವಾಗಿರುವುದು. (ಎಂದರೆ ಪರಮಾ

ಹೃದಯಂ ತದ್ವಿಜಾನೀಯಾ ದ್ವಿಶ್ವಸ್ಯಾಯತನಂ ಮಹತ್ ।
ಹೃತ್ಪದ್ಮ ಕರ್ಣಿಕಾಯಾಂ ತು ದೇವಂ ಸಾಕ್ಷಾತ್ಸದಾಶಿವಂ ॥ ೬ ॥
ಪಂಚವಕ್ತ್ರಂ ದಶಭುಜಂ ಸರ್ವಾಭರಣ ಭೂಷಿತಂ ।
ಪ್ರತಿವಕ್ತ್ರಂ ತ್ರಿನೇತ್ರಂ ಚ ಶಶಾಂಕ ಕೃತ ಶೇಖರಂ ॥ ೭ ॥
ಬದ್ಧ ಪದ್ಮಾಸನಾ ಸೀನಂ ಶುದ್ಧಸ್ಫಟಿಕ ಸನ್ನಿಭಂ ।
ಊರ್ಧ್ವ ವಕ್ತ್ರಂ ಸಿತಂ ಧ್ಯಾಯೇತ್ ಪೂರ್ವಂ ಕುಂಕುಮಸನ್ನಿಭಂ ॥
ನೀಲಾಭಂ ದಕ್ಷಿಣಂ ವಕ್ತ್ರಂ ಅತಿರಕ್ತಂ ತಥೋತ್ತರಂ ।
ಗೋಕ್ಷೀರ ಧವಲಂ ದಿವ್ಯಂ ಪಶ್ಚಿಮಂ ಪರಮೇಷ್ಠಿನಃ ॥ ೯ ॥
ಶೂಲಂ ಪರಶುಖಡ್ಗಂ ಚ ವಜ್ರಂ ಶಕ್ತಿಂ ಚ ದಕ್ಷಿಣೇ ।
ವಾಮೇ ಪಾಶಾಂಕುಶಂ ಘಂಟಾಂ ನಾಗಂ ನಾರಾಚಮುತ್ತಮಂ ॥

---

ತ್ಮನು ನಿರಾಧಾರಸ್ವರೂಪನಾಗಿ ಸರ್ವ ವ್ಯಾಪಕನಾಗಿರುವವನಾದರೂ, ಹೃದಯವು ಅವನ ಉಪಲಬ್ಧಿಗೆ ಸ್ಥಾನವಾಗಿರುವುದು. ಎಂದು ತಿಳಿಯಬೇಕು. ಹೃದಯದಲ್ಲಿ ಶಿವನು ನೆಲೆಸಿರುವನೆಂಬುದು ವ್ಯವಹಾರ ದೃಷ್ಟಿಯಿಂದ ಹೇಳುವುದೇ ಹೊರತು ವಸ್ತುತಃ ಹೃದಯವು ಶಿವನ ಸ್ಥಿತಿಗೆ ಆಧಾರ ವಲ್ಲವೆಂದು ತಿಳಿಯಬೇಕು).

೬-೧೨. ಹೃದಯ ಕಮಲದ ಕರ್ಣಿಕೆಯಲ್ಲಿ ನೆಲೆಸಿರುವ ಆ ಸಾಕ್ಷಾತ್ ಸದಾಶಿವಸ್ವರೂಪನಾದ ಶಿವನನ್ನು ಮುಂದೆ ಹೇಳುವ ರೀತಿಯಿಂದ ಸಗುಣನನ್ನಾಗಿ ಭಾವಿಸಿ ಪೂಜಿಸಬೇಕು. ಅವನ ಸ್ವರೂಪವು ಮುಂದೆ ಹೇಳುವಂತೆ ಇರುವುದು. ಶಿವನು ಸದ್ಯೋಜಾತಾದಿ ಪಂಚ ಮುಖಗಳನ್ನು ಧರಿಸಿದವನೂ, ಹತ್ತು ಭುಜಗಳುಳ್ಳವನೂ, ಸಕಲ ಆಭರಣಗಳಿಂದಲೂ ಅಲಂಕೃತನೂ, ಆಗಿದ್ದಾನೆ. ಪಂಚಮುಖಗಳಲ್ಲಿ ಪ್ರತಿಯೊಂದು ಮುಖವೂ ಮೂರು ಕಣ್ಣುಗಳಿಂದ ಯುಕ್ತವಾಗಿಯೂ, ಶಿರಸ್ಸಿನಲ್ಲಿ ಚಂದ್ರನಿಂದ ಯುಕ್ತವಾಗಿಯೂ, ಇರುವುದು. ಇದಲ್ಲದೇ ಅವನು ಶುದ್ಧವಾದ ಸ್ಫಟಿಕದಂತಿರುವವನೂ ಆಗಿರುತ್ತಾನೆ. ಆ ಶಿವನ ಊರ್ಧ್ವ ಮುಖವನ್ನು ಧವಲವರ್ಣವುಳ್ಳದ್ದನ್ನಾಗಿಯೂ, ಪೂರ್ವ ಮುಖವನ್ನು ಕುಂಕುಮದಂತೆ

**ವರದಾ ಭಯ ಹಸ್ತಂ ವಾ ಶೇಷಂ ಪೂರ್ವವ ದೇವ ತು ।**
**ಸರ್ವಾಭರಣ ಸಂಯುಕ್ತಂ ಚಿತ್ರಾಂಬರಧರಂ ಶಿವಂ ॥೧೧॥**

**ಬ್ರಹ್ಮಾಂಗ ವಿಗ್ರಹಂ ದೇವಂ ಸರ್ವ ದೇವೋತ್ತಮೋತ್ತಮಂ ।**
**ಪೂಜಯೇತ್ಸರ್ವಭಾವೇನ ಬ್ರಹ್ಮಾಂಗೈಃ ಬ್ರಹ್ಮಣಃ ಪತಿಂ ॥೧೨॥**

**ಉಕ್ತಾನಿ ಪಂಚ ಬ್ರಹ್ಮಾಣಿ ಶಿವಾಂಗಾನಿ ಶೃಣುಷ್ವ ಮೇ ।**
**ಶಕ್ತಿ ಭೂತಾನಿ ಚ ತಥಾ ಹೃದಯಾದೀನಿ ಸುವ್ರತ ॥೧೩॥**

---

ರಕ್ತವರ್ಣವುಳ್ಳದ್ದನ್ನಾಗಿಯೂ, ದಕ್ಷಿಣ ಮುಖವನ್ನು ಕೃಷ್ಣವರ್ಣವುಳ್ಳದ್ದನ್ನಾಗಿಯೂ, ಉತ್ತರ ಮುಖವನ್ನು ಅತ್ಯಂತ ರಕ್ತವರ್ಣವುಳ್ಳದ್ದನ್ನಾಗಿಯೂ, ಭಾವಿಸಿ ಧ್ಯಾನಮಾಡಬೇಕು. ಬ್ರಹ್ಮನ ಪಶ್ಚಿಮ ಮುಖವು ಗೋಕ್ಷೀರದಂತೆ ಶುಕ್ಲವರ್ಣವುಳ್ಳದ್ದಾಗಿರುವುದು. ವಾಮಹಸ್ತಗಳಲ್ಲಿ ಪಾಶ, ಅಂಕುಶ, ಗಂಟೆ, ನಾಗ, ಬಾಣಗಳು ಇರುವುವು. ಮತ್ತು ದಕ್ಷಿಣ ಹಸ್ತಗಳಲ್ಲಿ ಶೂಲ, ಪರಶು, ವಜ್ರಾಯುಧ, ಖಡ್ಗ, ಶಕ್ತಿ, ಮುಂತಾದ ಆಯುಧಗಳು ಇರುವುವು. ಈ ಹಸ್ತಗಳಲ್ಲಿ ಒಂದು ಹಸ್ತವು ವರಗಳನ್ನು ಕೊಡುವುದೂ, ಮತ್ತು ಇನ್ನೊಂದು ಅಭಯವನ್ನು ಕೊಡುವುದೂ ಆಗಿರುತ್ತದೆ. ಇಂತಹ ಸಕಲ ಆಭರಣಗಳಿಂದ ಯುಕ್ತನೂ, ಚಿತ್ರವಾದ ವಸ್ತ್ರಗಳನ್ನು ಧರಿಸಿದವನೂ, ಮಂಗಳ ಸ್ವರೂಪನೂ, ಸದ್ಯೋಜಾತಾದಿ ಅಂಗಗಳುಳ್ಳವನೂ, ದೇವತೆಗಳಲ್ಲಿ ಶ್ರೇಷ್ಠನೂ ಆದ ಶಿವನನ್ನು ಸದ್ಯೋಜಾತಾದಿ ಅಂಗಗಳ ಕ್ರಮದಿಂದ ಸಕಲ ವಸ್ತುಗಳಲ್ಲಿ ಅಷ್ಟಮೂರ್ತಿಯ ಭಾವನೆಯಿಂದ ಪೂಜೆಮಾಡಬೇಕು.

೧೩. ಹಿಂದೆ ಹೇಳಿರುವ ಶಿವನ ಸದ್ಯೋಜಾತಾದಿ ಅಂಗಗಳು ಮತ್ತು ಹೃದಯಾದಿ ಶಕ್ತಿಗಳು ಆವುವೆಂಬುದನ್ನೂ ಹೇಳುತ್ತೇನೆ ಕೇಳುವವನಾಗು.

ಓಂ ಈಶಾನಃ ಸರ್ವವಿದ್ಯಾನಾಂ
ಹೃದಯಾಯ ಶಕ್ತಿಬೀಜಾಯ ನಮಃ ।
ಓಂ ಈಶ್ವರಃ ಸರ್ವಭೂತಾನಾಂ ಅಮೃತಾಯ ಶಿರಸೇ ನಮಃ ॥೧೪॥
ಓಂ ಬ್ರಹ್ಮಾಧಿಪತಯೇ ಕಾಲಾಗ್ನಿರೂಪಾಯ ಶಿಖಾಯೈ ನಮಃ ।
ಓಂ ಬ್ರಹ್ಮಣೋಽಧಿ ಪತಯೇ ಕಾಲ
ಚಂಡಮಾರುತಾಯ ಕವಚಾಯ ನಮಃ ॥೧೫॥

ಓಂ ಬ್ರಹ್ಮಣೇ ಬೃಂಹಣಾಯ
ಜ್ಞಾನಮೂರ್ತಯೇ ನೇತ್ರಾಯ ನಮಃ ।
ಓಂ ಶಿವಾಯ ಸದಾಶಿವಾಯ ಪಾಶುಪತಾಸ್ತ್ರಾಯ
ಅಪ್ರತಿಹತಾಯ ಫಟ್ ಫಟ್ ॥೧೬॥

ಓಂ ಸದ್ಯೋಜಾತಾಯ ಭವೇಭವೇನಾತಿ ಭವೇ ಭವಸ್ವಮಾಂ
ಭವೋದ್ಭವಾಯ ಶಿವ ಮೂರ್ತಯೇ ನಮಃ ।
ಓಂ ಹಂಸ ಶಿಖಾಯ ವಿದ್ಯಾ ದೇಹಾಯ ಆತ್ಮಸ್ವರೂಪಾಯ
ಪರಾಪರಾಯ ಶಿವಾಯ ಶಿವತಮಾಯ ನಮಃ ॥೧೭॥

ಕಥಿತಾನಿ ಶಿವಾಂಗಾನಿ ಮೂರ್ತಿ ವಿದ್ಯಾ ಚ ತಸ್ಯ ವೈ ।
ಬ್ರಹ್ಮಾಂಗ ಮೂರ್ತಿಂ ವಿದ್ಯಾಂಗ ಸಹಿತಾಂ ಶಿವ ಶಾಸನೇ ॥೧೮॥

---

೧೪–೧೬. ಇವು ಆರು ಅಂಗಗಳು, ಪಂಚಮೂರ್ತಿಗಳನ್ನು ಮುಂದೆ ಹೇಳುತ್ತಾರೆ.

೧೭–೧೮. ಈ ರೀತಿಯಾಗಿ ಶಿವನ ಷಡಂಗಗಳೂ, ಪಂಚಮೂರ್ತಿಗಳನ್ನು ಪ್ರತಿಪಾದಿಸುವ ಮಂತ್ರಗಳೂ ಹೇಳಲ್ಪಟ್ಟವು. ವಿದ್ಯಾಂಗ ಸಹಿತವಾದ ಬ್ರಹ್ಮಾಂಗಗಳನ್ನೂ, ಮತ್ತು ಮೂರ್ತಿಗಳನ್ನೂ, ಶಿವಶಾಸ್ತ್ರದಲ್ಲಿ ತಿಳಿದುಕೊಳ್ಳಬೇಕು.

**ಸೌರಾಣಿ ಚ ಪ್ರವಕ್ಷ್ಯಾಮಿ ಬಾಷ್ಕಲಾದ್ಯಾನಿ ಸುವ್ರತ ।**
**ಅಂಗಾನಿ ಸರ್ವ ವೇದೇಷು ಸಾರ ಭೂತಾನಿ ಸುವ್ರತ ॥೧೯॥**

**ಓಂ ಭೂಃ, ಓಂ ಭುವಃ, ಓಂ ಸ್ವಃ, ಓಂ ಮಹಃ, ಓಂ ಜನಃ, ಓಂ ತಪಃ,**
**ಓಂ ಸತ್ಯಂ, ಓಂ ಋತಂ, ಓಂ ಬ್ರಹ್ಮ,**
**ನವಾಕ್ಷರ ಮಯಂ ಮಂತ್ರಂ ಬಾಷ್ಕಲಂ ಪರಿಕೀರ್ತಿತಂ ।**
**ನಕ್ಷರ ತೀತಿ ಲೋಕೇಽಸ್ಮಿನ್ ತತೋ ಹ್ಯಕ್ಷರ ಮುಚ್ಯತೇ**
**ಸತ್ಯ ಮಕ್ಷರ ಮಿತ್ಯುಕ್ತಂ ಪ್ರಣವಾದಿ ನಮೋಽಂತಕಂ ॥೨೦॥**

**ಓಂ ಭೂರ್ಭುವಃ ಸ್ವಃ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀ ಮಹಿ ।**
**ಧಿಯೋ ಯೋ ನಃ ಪ್ರಚೋದಯಾತ್ ನಮಸ್ಸೂರ್ಯಾಮ ಖಷೋಲ್ಕಾಯ ನಮಃ ॥೨೧॥**

---

೧೯. ಸಂದರ್ಭಾನುಸಾರವಾಗಿ ಪೂರ್ವಾಧ್ಯಾಯದಲ್ಲಿ ಹೇಳಿದ ಸೌರಮಂತ್ರಗಳನ್ನು ಈ ಅಧ್ಯಾಯದಲ್ಲೂ ಹೇಳುತ್ತಾರೆ.

ಎಲೈ ತಪಸ್ವಿಯೇ, ಸಕಲ ವೇದಗಳಲ್ಲಿಯೂ, ಸಾರಭೂತ ಮಂತ್ರಗಳಾದ ಸೌರಮಂತ್ರಗಳನ್ನು ಹೇಳುವೆನು.

೨೦. ಓಂಕಾರವೇ ಆದಿಯಲ್ಲಿದ್ದು ನಮಃ ಎಂಬುದೇ ಅಂತ್ಯದಲ್ಲಿ ಉಳ್ಳ, ಒಂಬತ್ತು ಅಕ್ಷರಗಳಿಂದ ಕೂಡಿರುವುದಾಗಿಯೂ, ಬಾಷ್ಕಲೋಕ್ತವಾದುದಾಗಿಯೂ, ಇರುತ್ತದೆ. ಈ ಮಂತ್ರವು ಬಹುಕಾಲ ನಷ್ಟವಾಗದೇ ಪ್ರಲಯ ಪರ್ಯಂತವೂ ಸ್ಥಾಯಿಯಾಗಿರುವುದರಿಂದ ಈ ಮಂತ್ರವನ್ನೂ ಅಕ್ಷರವೆಂದು ಹೇಳುತ್ತಾರೆ. (ಅಕ್ಷರವೆಂದರೆ ನಾಶರಹಿತವಾದ ಬ್ರಹ್ಮಸ್ವರೂಪವೆಂದರ್ಥವು. ಆದರೆ ಈ ಮಂತ್ರವೂ ಅಕ್ಷರವೆಂದರೆ ಇದರಲ್ಲಿ ಆಪೇಕ್ಷಿಕವಾದ ಅಕ್ಷರತ್ವವಿರುವುದರಿಂದ ಅಕ್ಷರವೆಂದು ಹೇಳುತ್ತಾರೆ).

(ಭಾಸ್ಕರನ ಮೂಲಮಂತ್ರವನ್ನು ಮುಂದೆ ಹೇಳುತ್ತಾರೆ).

೨೧–೨೩. ಮೇಲೆ ಹೇಳಿರುವ ಮಂತ್ರವು ಮಹಾತ್ಮನಾದ ಸೂರ್ಯನ ಮೂಲಮಂತ್ರವಾಗಿಯೂ, ವೇದಗಳಲ್ಲಿ ಅತ್ಯಂತ ಶ್ರೇಷ್ಠವೂ, ಓಂಕಾರ

ಮೂಲಮಂತ್ರ ಮಿತಿ ಪ್ರೋಕ್ತಂ ಭಾಸ್ಕರಸ್ಯ ಮಹಾತ್ಮನಃ ।
ನವಾಕ್ಷರೇಣ ದೀಪ್ತಾದ್ಯಾ ಮೂಲಮಂತ್ರೇಣ ಭಾಸ್ಕರಂ ॥೨೨॥
ಪೂಜಯೇ ದಂಗ ಮಂತ್ರಾಣಿ ಕಥಯಾಮಿ ಸಮಾಸತಃ ।
ವೇದಾದಿಭಿಃ ಪ್ರಭೂತಾದ್ಯಂ ಪ್ರಣವೇನ ತು ಮಧ್ಯಮಂ ॥೨೩॥
ಓಂ ಭೂಃ ಬ್ರಹ್ಮಣೇ ಹೃದಯಾಯ ನಮಃ ।
ಓಂ ಭುವಃ ವಿಷ್ಣವೇ ಶಿರಸೇ ನಮಃ ॥
ಓಂ ಸ್ವಃ ರುದ್ರಾಯ ಶಿಖಾಯೈ ನಮಃ ।
ಓಂ ಭೂರ್ಭುವಃ ಸ್ವಃ ಜ್ವಾಲಾಮಾಲಿನ್ಯೈ ದೇವಾಯ ನಮಃ ॥
ಓಂ ಮಹಃ ಮಹೇಶ್ವರಾಯ ಕವಚಾಯ ನಮಃ ।
ಓಂ ಜನಃ ಶಿವಾಯ ನೇತ್ರೇಭ್ಯೋ ನಮಃ ॥
ಓಂ ತಪಸ್ತಾಪನಾಯ ಅಸ್ತ್ರಾಯ ನಮಃ ॥
ಏವಂ ಪ್ರಸಂಗಾ ದೇವೇಹ ಸೌರಾಣಿ ಕಥಿತಾನಿ ಹ ।
ಶೈವಾನಿ ಚ ಸಮಾಸೇನ ನ್ಯಾಸಯೋಗೇನ ಸುವ್ರತ ॥೨೪॥
ಇತ್ಥಂ ಮಂತ್ರಮಯಂ ದೇವಂ ಪೂಜಯೇದ್ಧೃದಯಾಂಬುಜೇ ।
ನಾಭೌ ಹೋಮಂ ತು ಕರ್ತವ್ಯಂ ಜನಯಿತ್ವಾ ಯಥಾ ಕ್ರಮಂ ॥

---

ವನ್ನು ಉಚ್ಚರಿಸಿ ತರುವಾಯ ಹೇಳತಕ್ಕದ್ದೂ ಆಗಿರುತ್ತದೆ. ಪೂರ್ವೋಕ್ತ ವಾದ ನವಾಕ್ಷರ ಮಂತ್ರದಿಂದ ದೀಪ್ತಾದಿ ಅಷ್ಟಶಕ್ತಿಗಳನ್ನೂ ಮೂಲ ಮಂತ್ರದಿಂದ ಭಾಸ್ಕರನನ್ನೂ ಪೂಜಿಸಬೇಕು. ಇನ್ನುಮುಂದೆ ಅಂಗ ಮಂತ್ರಗಳನ್ನು ಸಂಕ್ಷೇಪವಾಗಿ ಹೇಳುತ್ತೇನೆ.

ಈ ಮಂತ್ರಗಳು ಮೂಲಮಂತ್ರಕ್ಕೆ ಅಂಗಭೂತಗಳಾದ ಮಂತ್ರ ಗಳಾಗಿರುತ್ತವೆ.

೨೪. ಎಲೈ ತಪಸ್ವಿಯೇ, ಈ ರೀತಿಯಲ್ಲಿ ಸಂದರ್ಭವಶದಿಂದ ಇಲ್ಲಿ ಸೌರಮಂತ್ರಗಳು ಹೇಳಲ್ಪಟ್ಟವೆ. ಅದಲ್ಲದೇ ಶೈವಮಂತ್ರಗಳೂ ಕೂಡ ಅಂಗನ್ಯಾಸ ಸಹಿತವಾಗಿ ಸಂಕ್ಷೇಪದಿಂದ ಹೇಳಲ್ಪಟ್ಟಿರುತ್ತವೆ.

೨೫. ಪೂರ್ವೋಕ್ತವಾದ ಮಂತ್ರಗಳಿಂದ ಆ ಶಿವನನ್ನು ಹೃತ್ಕಮಲ ದಲ್ಲಿ ಪೂಜಿಸಬೇಕು. ಮತ್ತು ನಾಭಿಸ್ಥಾನದಲ್ಲಿ (ಅಗ್ನಿಕುಂಡದಲ್ಲಿ)

**ಮನಸಾ ಸರ್ವಕಾರ್ಯಾಣಿ ಶಿವಾಗ್ನೌ ದೇವ ಮೀಶ್ವರಂ ।**
**ಪಂಚ ಬ್ರಹ್ಮಾಂಗ ಸಂಭೂತಂ ಶಿವ ಮೂರ್ತಿಂ ಸದಾಶಿವಂ ॥೨೬॥**
**ರಕ್ತಪದ್ಮಾಸನಾ ಸೀನಂ ಶಕಲೀ ಕೃತ್ಯ ಯತ್ನತಃ ।**
**ಮೂಲೇನ ಮೂರ್ತಿ ಮಂತ್ರೇಣ ಬ್ರಹ್ಮಾಂಗಾ ದ್ಯೈಸ್ತು ಸುವ್ರತ ॥**
**ಪೂರ್ಣಾಹುತಿ ವಿಧಾನೇನ ಜ್ಞಾನಿನಾಂ ಶಿವಶಾಸನೇ ।**
**ಶಿವಂ ವಕ್ತ್ರಗತಂ ಧ್ಯಾಯೇತ್ತೇಜೋ ಮಾತ್ರಂ ಚ ಶಂಕರಂ ॥೨೮॥**
**ಲಲಾಟೇ ದೇವದೇವೇಶಂ ಭ್ರೂಮಧ್ಯೇ ವಾ ಸ್ಮರೇತ್ಪುನಃ ।**
**ಯಚ್ಚ ಹೃತ್ಕಮಲೇ ಸರ್ವಂ ಸಮಾಪ್ಯ ವಿಧಿವಿಸ್ತರಂ ॥೨೯॥**

---

ಅಗ್ನಿಯನ್ನು ಪ್ರತಿಷ್ಠಾಪನೆಮಾಡಿ, ವಿಧಿವತ್ತಾಗಿ ಹೋಮವನ್ನೂ ಮಾಡಬೇಕು.

೨೬-೨೭. (ಮಾನಸ ಹೋಮವನ್ನು ನೆರವೇರಿಸುವ ಕ್ರಮವು) ಸದ್ಯೋಜಾತಾದಿ ಪಂಚ ರೂಪಗಳಿಂದ ಯುಕ್ತನಾದ ಮತ್ತು ರಕ್ತಪದ್ಮಾಸನದಲ್ಲಿ ಕುಳಿತಿರುವ ಶಿವನಮೂರ್ತಿಯನ್ನು ಮೂಲ ಮಂತ್ರವಾದ ಮೂರ್ತಿ ಮಂತ್ರದಿಂದಲೂ, ಅಂಗಮಂತ್ರಗಳಿಂದಲೂ, ಪ್ರತ್ಯೇಕವಾಗಿ ಪೂಜಿಸಿ, ಸಮಿದ್ಹೋಮವನ್ನೂ, ಮತ್ತು ಆಜ್ಯಹೋಮವನ್ನೂ ಮಾಡಿ, ಚಂದ್ರಮಂಡಲದಿಂದ ಉತ್ಪನ್ನವಾದ ಆ ಅಮೃತಮಯವಾದ ಧಾರೆಯಿಂದ ಪೂರ್ಣಾಹುತಿಯನ್ನು ಮಾಡುತ್ತಾ ದೇವನನ್ನು ಮನಸ್ಸಿನಿಂದ ಸ್ಮರಿಸಬೇಕು.

ಹಿಂದೆ ಹೇಳಿರುವ ಮಾನಸ ಸ್ಮರಣೆಯನ್ನು ಪೂರ್ಣಾಹುತಿ ವಿಧಾನದಿಂದ ಮಾಡಬೇಕೆಂದು ಶಿವಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ.

೨೮-೩೦. ಹೋಮವನ್ನು ಮಾಡಿದ ಬಳಿಕ ಶಿವನನ್ನು ಮುಖದಲ್ಲಿರುವವಂತೆ ಧ್ಯಾನಮಾಡಬೇಕು. ರುದ್ರನನ್ನು ಹಣೆಯಲ್ಲಾಗಲೀ ಹುಬ್ಬುಗಳ ನಡುವೆಯಲ್ಲಾಗಲೀ ಧ್ಯಾನಮಾಡಬೇಕು. ಹೃತ್ಕಮಲವನ್ನು ಸರ್ವತೋ ಮುಖದಿಂದ ವ್ಯಾಪಿಸಿರುವ ಪರಿಶುದ್ಧವಾದ ದೀಪದ ಜ್ವಾಲೆಯಂತೆ ತೇಜೋ ವಿಶಿಷ್ಟನಾದ ಆ ಶಿವನನ್ನು ಹೃತ್ಕಮಲದಲ್ಲಿ ಧ್ಯಾನ ಮಾಡಬೇಕು. (ಈ ರೀತಿಯಲ್ಲಿ ಶಿವಪೂಜೆಯ ವಿಧಾನವು ಉತ್ತಮಾ

ಶುದ್ಧ ದೀಪ ಶಿಖಾಕಾರಂ ಭಾವಯೇದ್ಭವ ನಾಶನಂ ।
ಅಂಗೇ ಚ ಪೂಜಯೇದ್ದೇವಂ ಸ್ಥಂಡಿಲೇ ವಾ ಸದಾ ಶಿವಂ ॥೩೦॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ತ್ರಯೋವಿಂಶತಿ ತಮೋಽಧ್ಯಾಯಃ

---

ಧಿಕಾರಿಗೆ ಹೇಳಲ್ಪಟ್ಟಿರುತ್ತದೆ). ಮಂದಾಧಿಕಾರಿಯು ಮಾತ್ರ ಶಿವ ಲಿಂಗದಲ್ಲಾಗಲೀ, ಅಥವಾ ಸ್ಥಂಡಿಲದಲ್ಲಾಗಲೀ ಶಿವದೃಷ್ಟಿಯಿಂದ ಪೂಜಿಸಬೇಕು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದಲ್ಲಿ ಉತ್ತರಭಾಗದಲ್ಲಿ ಇಪ್ಪತ್ತುಮೂರನೆಯ ಅಧ್ಯಾಯವು ಮುಗಿದುದು

### ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
### ಚತುರ್ವಿಂಶತಿತಮೋಽಧ್ಯಾಯಃ

॥ ಶೈಲಾದಿ ರುವಾಚ ॥

ವ್ಯಾಖ್ಯಾಂ ಪೂಜಾವಿಧಾನಸ್ಯ ಪ್ರವದಾಮಿ ಸಮಾಸತಃ ।
ಶಿವಶಾಸ್ತ್ರೋಕ್ತ ಮಾರ್ಗೇಣ ಶಿವೇನ ಕಥಿತಂ ಪುರಾ ॥ ೧ ॥

ಅಥೋಭೌ ಚಂದನ ಚರ್ಚಿತೌ ಹಸ್ತೌ ವೌಷಡಂತೇನಾದ್ಯಂ ಜಲಿಂ ಕೃತ್ವಾ, ಮೂರ್ತಿ ವಿದ್ಯಾ ಶಿವಾದೀನಿ ಜಪ್ತ್ವಾ ಅಂಗುಷ್ಠಾದಿ ಕನಿಷ್ಠಿಕಾಂತ ಈಶಾನಾದ್ಯಂ ಕನಿಷ್ಠಿಕಾದಿ ಮಧ್ಯಮಾಂತಂ ಹೃದಯಾದಿ ತೃತೀಯಾಂತಂ,

ತುರೀಯ ಮಂಗುಷ್ಠೇನಾ ನಾಮಿಕಯಾ ಪಂಚಮಂ, ತಲದ್ವಯೇನ ಷಷ್ಠಂ, ತರ್ಜನ್ಯಂಗುಷ್ಠಾಭ್ಯಾಂ ನಾರಾಚಾ ಸ್ತ್ರಪ್ರಯೋಗೇಣ ಪುನರಪಿ ಮೂಲಂ ಜಪ್ತ್ವಾ ತುರಿಯೇಣಾವಗುಂಠ್ಯ ಶಿವಹಸ್ತ ಮಿತ್ಯುಚ್ಯತೇ ॥ ೨ ॥

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಇಪ್ಪತ್ತುನಾಲ್ಕನೆಯ ಅಧ್ಯಾಯವು

೧. ನಂದೀಶ್ವರನು ಹೇಳಿದನು :— ಶಿವಶಾಸ್ತ್ರದಲ್ಲಿ ಹೇಳಿದರೀತಿಯಲ್ಲಿ ಹಿಂದೆ ಶಿವನೇ ಹೇಳಿದ ಪೂಜಾವಿಧಾನದ ವ್ಯಾಖ್ಯಾನವನ್ನು (ವಿವರಣೆಯನ್ನು) ಸಂಗ್ರಹವಾಗಿ ಹೇಳುವೆನು.

೨-೩. ಶಿಷ್ಯನಿಗೆ ಶಿವಸ್ನಾನ ಭಸ್ಮಸ್ನಾನಗಳಾದ ಮೇಲೆ ಎರಡು ಕೈಗಳಿಗೂ ಗಂಧವನ್ನು ಬಳಿದು ಕೊಂಡು, ವೌಷಟ್ ಎಂಬ ಮಂತ್ರವನ್ನು ಉಚ್ಚರಿಸಿ ಬೊಗಸೆಯನ್ನು ಮಾಡಿ, ಹಿಂದಿನ ಅಧ್ಯಾಯದಲ್ಲಿ ಹೇಳಿದ ಮೂರ್ತಿ ವಿದ್ಯೆಯನ್ನೂ ಶೈವಮಂತ್ರಗಳನ್ನೂ ಜಪಿಸಿ, ಅಂಗುಷ್ಠಾದಿ ಕನಿಷ್ಠಿಕೆಯವರೆಗೆ ಈಶಾನಾದಿ ಐದುಮಂತ್ರಗಳಿಂದ ನ್ಯಾಸಮಾಡಬೇಕು. ನ್ಯಾಸಕ್ರಮವೆಂದರೆ ಕನಿಷ್ಠಿಕಾ, ತರ್ಜನೀ, ಮಧ್ಯಮ, ಹೃದಯ ಈ ಪ್ರದೇಶಗಳಲ್ಲಿ

ಶಿವಾರ್ಚನಾ ತೇನ ಹಸ್ತೇನ ಕಾರ್ಯಾ ॥ ೩ ॥
ತತ್ವ ಗತಮಾತ್ಮಾನಂ ವ್ಯವಸ್ಥಾಪ್ಯ ತತ್ವ ಶುದ್ಧಿಂ ಪೂರ್ವವತ್ ॥ ೪ ॥
ಕ್ಷ್ಮಾಽಂಭೋಽಗ್ನಿ ವಾಯುವ್ಯೋಮಾಽಂತಂ ಪಂಚ ಚತುಃ
ಶುದ್ಧಕೋಟ್ಯಂತೇ ಧಾರಾಸಹಿತೇನ ವ್ಯವಸ್ಥಾಪ್ಯ ।
ತತ್ವಶುದ್ಧಿಂ ಪೂರ್ವಂ ಕುರ್ಯಾತ್ ॥ ೫ ॥
ತತ್ವಶುದ್ಧಿಃ ಷಷ್ಠೇನ ಸದ್ಯೇನ ತೃತಿಯೇನ ಫಡಂತಾದ್ಧರಾ ಶುದ್ಧಿಃ ॥

---

ಅಘೋರಮಂತ್ರವನ್ನೂ ಅಂಗುಷ್ಠದಲ್ಲಿ ನಾಲ್ಕನೆಯದಾದ ತತ್ಪುರುಷ ಮಂತ್ರವನ್ನೂ ಅನಾಮಿಕದಿಂದ ಐದನೆಯ ಮಂತ್ರವನ್ನೂ ಎರಡು ಅಂಗೈಗಳಿಂದ ಆರನೆಯ ಮಂತ್ರವನ್ನೂ ಜಪಿಸಿ, ತರ್ಜನೀ ಮತ್ತು ಅಂಗುಷ್ಠಗಳಿಂದ ನಾರಾಚ ಮುದ್ರೆಯನ್ನು ಮಾಡಿ, ಮೂಲಮಂತ್ರವಾದ ಪಂಚಾಕ್ಷರ ಮಂತ್ರವನ್ನೂ ಜಪಿಸಿ, ನಾಲ್ಕನೆಯ ಮಂತ್ರದಿಂದ ಅವಗುಂಠನವನ್ನು ಮಾಡಿದರೆ ಶಿವಹಸ್ತವೆನಿಸುವುದು. ಈ ಶಿವಹಸ್ತದಿಂದ ಶಿವಾರ್ಚನೆಯನ್ನು ಮಾಡಬೇಕು.

೪. ಭಕ್ತನು ತನ್ನ ಮನಸ್ಸು ತತ್ವಗಳಲ್ಲಿ ಸೇರಿರುವಂತೆ ಮಾಡಿ ಹಿಂದೆ ಹೇಳಿದಂತೆ ತತ್ವಶುದ್ಧಿಯನ್ನು ಮಾಡಬೇಕು. ಹೇಗೆಂದರೆ,

೫. ಭೂಮಿ ನೀರು ಅಗ್ನಿ ವಾಯು ಆಕಾಶಾಂತವಾಗಿ ಪಂಚಕೋಶಗಳನ್ನೂ ಅತಿಕ್ರಮಿಸಿ ಅಹಂಕಾರ, ಮಹತ್ತತ್ವ, ಪ್ರಕೃತಿ, ಬ್ರಹ್ಮರೂಪವಾದ ನಾಲ್ಕು ತತ್ವಗಳಲ್ಲಿ ಶುದ್ಧಕೋಟಿಸ್ವರೂಪವಾದ ಬ್ರಹ್ಮತತ್ವದ ಸಮೀಪದಲ್ಲಿ ಅಮೃತಧಾರೆಯಿಂದ ಕೂಡಿರುವಂತೆ ಸುಷುಮ್ನಾನಾಡಿಯಲ್ಲಿ ಮನಸ್ಸನ್ನು ನೆಲೆಗೊಳಿಸಿ, ಮೊದಲು ತತ್ವಶುದ್ಧಿಯನ್ನು ಮಾಡಬೇಕು.

೬. ತತ್ವಶುದ್ಧಿಕ್ರಮವೆಂದರೆ ಆರನೆಯದಾದ ನಮೋಹಿರಣ್ಯಬಾಹವೇ ಎಂಬ ಮಂತ್ರದಿಂದಲೂ ಸದ್ಯೋಜಾತ ಮಂತ್ರದಿಂದಲೂ

ಷಷ್ಠಸಹಿತೇನ ಸದ್ಯೇನ ತೃತೀಯೇನ ಫಡಂತೇನ ವಾರಿತತ್ವ ಶುದ್ಧಿಃ ॥
ವಾಹ್ನೇಯ ತೃತೀಯೇನ ಫಡಂತೇನಾಗ್ನಿ (ತತ್ವ) ಶುದ್ಧಿಃ ॥ ೮ ॥
ವಾಯವ್ಯ ಚ ತುರ್ಥೇನ ಷಷ್ಠಸಹಿತೇನ ಫಡಂತೇನ ವಾಯು ಶುದ್ಧಿಃ ॥
ಷಷ್ಠೇನ ಸ ಸದ್ಯೇನ ತೃತೀಯೇನ ಫಡಂತೇನಾ ಕಾಶ ಶುದ್ಧಿಃ ॥೧೦॥
ಉಪಸಂ ಹೃತ್ಯೈವಂ ಸದ್ಯ ಷಷ್ಠೇನ ತೃತೀಯೇನ ಮೂಲೇನ ಫಡಂ
ತೇನ ತಾಡನಂ, ತೃತೀಯೇನ ಸಂಪುಟೀ ಕೃತ್ಯಗ್ರಹಣಂ ಮೂಲಮೇವ
ಯೋನಿ ಬೀಜೇನ ಸಂಪುಟೀ ಕೃತ್ವಾ ಬಂಧನಂ ಬಂಧಃ ॥೧೧॥

---

ಮೂರನೆಯದಾದ ಅಘೋರ ಮಂತ್ರದಿಂದಲೂ ಫಟ್ ಎಂಬ ಮಂತ್ರ ವನ್ನು ಕೊನೆಯಲ್ಲಿ ಉಚ್ಚರಿಸಿ ಭೂತತ್ವ ಶುದ್ಧಿಯನ್ನು ಮಾಡಬೇಕು.

೭. ನಮೋಹಿರಣ್ಯಬಾಹವೇ ಸದ್ಯೋಜಾತ ಅಘೋರಮಂತ್ರಗಳ ಕೊನೆಯಲ್ಲಿ ಫಟ್ ಎಂಬ ಮಂತ್ರವನ್ನುಚ್ಚರಿಸಿ ನೀರಿನ ತತ್ವವನ್ನು ಶುದ್ಧಿ ಮಾಡಬೇಕು.

೮. ಅಗ್ನಿಸಂಬಂಧವಾದ ಮೂರನೆಯ ಅಘೋರ ಮಂತ್ರದ ಕೊನೆಯಲ್ಲಿ ಫಟ್ ಎಂಬ ಮಂತ್ರವನ್ನುಚ್ಚರಿಸಿ ಅಗ್ನಿ ತತ್ವಶುದ್ಧಿಯನ್ನು ಮಾಡಬೇಕು.

೯. ವಾಯುಸಂಬಂಧವಾದ ನಾಲ್ಕನೆಯದಾದ ತತ್ಪುರುಷ ಮಂತ್ರದೊಡನೆ ಆರನೆಯ ನಮೋಹಿರಣ್ಯಬಾಹವೇ ಎಂಬ ಮಂತ್ರದ ಕೊನೆಯಲ್ಲಿ ಫಟ್ ಎಂಬ ಮಂತ್ರವನ್ನು ಉಚ್ಚರಿಸಿ ವಾಯುತತ್ವಶುದ್ಧಿ ಯನ್ನು ಮಾಡಬೇಕು.

೧೦. ನಮೋಹಿರಣ್ಯಬಾಹವೇ ಸದ್ಯೋಜಾತ ಅಘೋರ ಮಂತ್ರ ಗಳ ಕೊನೆಯಲ್ಲಿ ಫಟ್ ಎಂಬುದನ್ನುಚ್ಚರಿಸಿ ಆಕಾಶತತ್ವಶುದ್ಧಿಯನ್ನು ಮಾಡಬೇಕು.

೧೧. ಈ ರೀತಿಯಲ್ಲಿ ಉಪಸಂಹರಿಸಿ ಸದ್ಯೋಜಾತ, ನಮೋಹಿರಣ್ಯ ಬಾಹವೇ, ಅಘೋರ ಮತ್ತು ಪಂಚಾಕ್ಷರ ಮಂತ್ರ, ಇವುಗಳ ಕೊನೆಯಲ್ಲಿ

**ಏವಂ ಶಾಂತ್ಯ (ಕ್ಷಾಂತಾ) ತೀತಾದಿ ನಿವೃತ್ತಿ ಪರ್ಯಂತಂ ಪೂರ್ವ ವತ್ಕೃತ್ವಾ ಪ್ರಣವೇನ ತತ್ವತ್ರಯಾಕ ಮನುಧ್ಯಾಯ ಆತ್ಮಾನಂ ದೀಪ ಶಿಖಾಕಾರಂ ಪುರ್ಯಷ್ಟಕ ಸಹಿತಂ ತ್ರಯಾತೀತಂ ಶಕ್ತಿಕ್ಷೋಭೇಣಾ ಮೃತಧಾರಾಂ ಸುಷುಮ್ನಾಯಾಂ ಧ್ಯಾತ್ವಾ ॥೧೨॥**

**ಶಾಂತ್ಯತೀತಾದಿ ನಿವೃತ್ತಿಪರ್ಯಂತಾನಾಂ ಚಾಂತರ್ನಾದ ಬಿಂದ್ವಕಾ ರೋಕಾರ ಮಕಾರಾಂತಂ ಶಿವಂ ಸದಾಶಿವಂ ರುದ್ರ ವಿಷ್ಣು ಬ್ರಹ್ಮಾಂತಂ ಸೃಷ್ಟಿಕ್ರಮೇಣಾ ಮೃತೀಕರಣಂ ಬ್ರಹ್ಮನ್ಯಾಸಂ ಕೃತ್ವಾ ಪಂಚವಕ್ತ್ರೇಷು ಪಂಚದಶನಯನಂ ವಿನ್ಯಸ್ಯ ಮೂಲೇನ ಪಾದಾದಿ ಕೇಶಾಂತಂ ಮಹಾ ಮುದ್ರಾಮಪಿ ಬದ್ಧ್ವಾ ಶಿವೋಽಹಮಿತಿ ಧ್ಯಾತ್ವಾ**

---

ಫಟ್ ಮಂತ್ರವನ್ನುಚ್ಚರಿಸಿ ತಾಡನವನ್ನೂ, ಪಂಚಾಕ್ಷರ ಮಂತ್ರವನ್ನು ಅಘೋರ ಮಂತ್ರದಿಂದ ಸಂಪುಟೀಕರಣಮಾಡಿ ಗ್ರಹಣವನ್ನೂ, ಮೂಲ ಮಂತ್ರವಾದ ಪಂಚಾಕ್ಷರ ಮಂತ್ರವನ್ನು ಯೋನಿ ಬೀಜವಾದ ಹ್ರೀಂ ಎಂಬುದರಿಂದ ಸಂಪುಟೀಕರಣವನ್ನು ಮಾಡಿ ದಿಗ್ಬಂಧನವನ್ನೂ ಮಾಡಬೇಕು.

೧೨. ಹೀಗೆಯೇ ಶಾಂತ್ಯತೀತ ಮೊದಲಾಗಿ ನಿವೃತ್ತಿಕಲಾಪರ್ಯಂತವಾಗಿರುವ, ಇಪ್ಪತ್ತೊಂದನೆಯ ಅಧ್ಯಾಯದಲ್ಲಿ ಹೇಳಿದಂತೆ, ಕಲಾಸಂಕ್ರಮಣಗಳನ್ನು ಮಾಡಿ, ಪ್ರಣವ ಮಂತ್ರದಿಂದ ತತ್ವತ್ರಯವಾದ ಬ್ರಹ್ಮ, ವಿಷ್ಣು, ರುದ್ರರೂಪಗಳನ್ನು ಧ್ಯಾನಮಾಡಿ, ದೀಪದ ಉರಿಯ ಆಕಾರವಾದ ಶುದ್ಧ ಚೈತನ್ಯವನ್ನು ಯೋಗಶಾಸ್ತ್ರದಲ್ಲಿ ಹೇಳಿದ ಮೂಲಾಧಾರವೇ ಮುಂತಾದ ಎಂಟು ಸ್ಥಳಗಳಲ್ಲಿ ಧ್ಯಾನಿಸಿ, ವಿಶ್ವ, ತೈಜಸ, ಪ್ರಾಜ್ಞ ನೆಂಬ ಮೂರು ಅವಸ್ಥೆಗಳ ಜೀವನಿಗಿಂತ ಭಿನ್ನನಾದ ಪರಮಾತ್ಮನನ್ನು ಶಕ್ತಿ ಕ್ಷೋಭ ರೂಪನಾದ ಕುಂಡಲಿನೀ ಶಕ್ತಿಯನ್ನು ಎಚ್ಚರಗೊಳಿಸುವ ಕ್ರಮದಿಂದ ಸುಷುಮ್ನಾನಾಡಿಯಲ್ಲಿ ಸಾಗಿಸಿ ಅಮೃತಧಾರೆಯನ್ನು ಧ್ಯಾನಮಾಡಬೇಕು.

೧೩. ಶಾಂತ್ಯತೀತವೇ ಮೊದಲಾಗಿ ನಿವೃತ್ತಿಪರ್ಯಂತವಾದ ಕಲೆಗಳ ನಡುವೆ ನಾದ ಬಿಂದು ಅಕಾರ ಉಕಾರ ಮಕಾರಗಳೇ ಕೊನೆ

**ಶಕ್ತ್ಯಾದೀನಿ ವಿನ್ಯಸ್ಯ ಹೃದಿ ಶಕ್ತ್ಯಾ ಬೀಜಾಂಕುರಾ ನಂತರಾತ್ಸಸುಷಿ ರಸೂತ್ರಕಂಟಿಕ ಪತ್ರಕೇಸರ ಧರ್ಮಜ್ಞಾನ ವೈರಾಗ್ಯೈಶ್ವರ್ಯ ಸೂರ್ಯ ಸೋಮಾಗ್ನಿ ವಾಮಾಜ್ಯೇಷ್ಠಾರೌದ್ರೀ ಕಾಲೀಕಲವಿಕರಣೀ ಬಲವಿಕರಣೀ ಬಲಪ್ರಮಥನೀ ಸರ್ವಭೂತದಮನೀ(ಃ) ಕೇಸರೇಷು ಕರ್ಣಿಕಾಯಾಂ ಮನೋನ್ಮನೀಮಪಿ ಧ್ಯಾತ್ವಾ ॥೧೩॥**

**ಆಸನಂ ಪರಿಕಲ್ಪ್ಯೈವಂ ಸರ್ವೋಪಚಾರ ಸಹಿತಂ ಬಹಿರ್ಯೋಗೋಪಚಾರೇಣಾಂತಃ ಕರಣಂ ಕೃತ್ವಾ ನಾಭೌ ವಹ್ನಿಕುಂಡೇ ಪೂರ್ವವದಾಸನಂ ಪರಿಕಲ್ಪ್ಯ ಸದಾಶಿವಂ ಧ್ಯಾತ್ವಾ ಬಿಂದುತೋಽಮೃ ಧಾರಾಂ ಶಿವ ಮಂಡಲೇ ನಿಪತಿತಾಂ ಧ್ಯಾತ್ವಾ ಲಲಾಟೇ ಮಹೇಶ್ವರಂ ದೀಪ ಶಿಖಾಕಾರಂ ಧ್ಯಾತ್ವಾ ಆತ್ಮಶುದ್ಧಿ ರಿತ್ಥಂ**

---

ಯಾಗುವಂತೆ ಕ್ರಮವಾಗಿ ಶಿವ ಸದಾಶಿವ ರುದ್ರ ವಿಷ್ಣು ಬ್ರಹ್ಮರನ್ನು ಧ್ಯಾನಿಸಿ, ಸೃಷ್ಟಿಕ್ರಮದಿಂದ ಅಮೃತೀ ಕರಣವನ್ನೂ ಬ್ರಹ್ಮನ್ಯಾಸವನ್ನೂ ಮಾಡಿ, ಪಂಚ ಬ್ರಹ್ಮರ ಐದು ಮುಖಗಳನ್ನು ಹದಿನೈದು ಕಣ್ಣುಗಳನ್ನೂ ಧ್ಯಾನಮಾಡಿ,ಮೂಲಮಂತ್ರವಾದ ಪಂಚಾಕ್ಷರ ಮಂತ್ರದಿಂದ ಪಾದಾದಿ ಕೇಶಾಂತದವರೆಗೆ ಮಹಾಮುದ್ರೆಯನ್ನು ಧರಿಸಿ, ನಾನೇ ಶಿವನೆಂದು ಧ್ಯಾನಿಸಿ, ಹೃದಯಾಕಾಶದಲ್ಲಿ ಶಕ್ತಿಯನ್ನು ಧ್ಯಾನಮಾಡಿ ಆ ಶಕ್ತಿಯಿಂದ ಬೀಜಾಂಕುರಗಳುಂಟಾದಮೇಲೆ ರಂಧ್ರದಾರ ಮುಳ್ಳು ಎಲೆ ಕೇಸರ ಗಳುಳ್ಳ ಕಮಲದಲ್ಲಿ ಧರ್ಮಜ್ಞಾನ ವೈರಾಗ್ಯ ಐಶ್ವರ್ಯ ಸೂರ್ಯ ಚಂದ್ರ ಅಗ್ನಿವಾಮಾ ಜ್ಯೇಷ್ಠಾ ರೌದ್ರೀ ಕಾಲೀ ಕಲವಿಕರಣೀ ಬಲವಿಕರಣೀ ಬಲಪ್ರಮಥಿನೀ ಸರ್ವಭೂತದಮನೀ ಎಂಬ ಎಂಟು ಶಕ್ತಿದೇವಿಯರನ್ನು ಕೇಸರಗಳಲ್ಲಿಯೂ ಕರ್ಣಿಕೆಯಲ್ಲಿ ಮನೋನ್ಮನಿಯನ್ನೂ ಧ್ಯಾನ ಮಾಡಬೇಕು.

ಹಿಂದೆ ಹೇಳಿದ ರೀತಿಯಲ್ಲಿ ಆಸನವನ್ನೂ ಕಲ್ಪಿಸಿ ಸಮಸ್ತ ಉಪಚಾರ ಸಹಿತವಾಗಿ, ಹೊರಗಿನ ಪೂಜೋಪಚಾರದಂತೆಯೇ, ಮನಸ್ಸಿನಲ್ಲಿಯೇ ಪೂಜೋಪಚಾರಗಳನ್ನು ಕಲ್ಪಿಸಬೇಕು. ಹೇಗೆಂದರೆ ಹೊಕ್ಕುಳಿನಲ್ಲಿ ವಹ್ನಿಕುಂಡದಲ್ಲಿ ಹಿಂದೆ ಹೇಳಿದಂತೆ ಆಸನವನ್ನು ಕಲ್ಪಿಸಿ ಸದಾಶಿವ

ಪ್ರಾಣಾಪಾನೌ ಸಂಯಮ್ಯ ಸುಷುಮ್ನಯಾ ವಾಯುಂ ವ್ಯವಸ್ಥಾಪ್ಯ ಷಷ್ಠೇನ ತಾಲುಮುದ್ರಾಂ ಕೃತ್ವಾ ದಿಗ್ಬಂಧಂ ಕೃತ್ವಾ ಷಷ್ಠೇನ ಸ್ಥಾನ ಶುದ್ಧಿಃ

ವಸ್ತ್ರಾದಿ ಪೂತಾಂತರರ್ಘ್ಯ ಪಾತ್ರಾದಿಷು ಪ್ರಣವೇನ ತತ್ವತ್ರಯಂ ವಿನ್ಯಸ್ಯ ತದುಪರಿ ಬಿಂದುಂ ಧ್ಯಾತ್ವಾ ತ್ವಂಭಸಾ ವಿಪೂರ್ಯ ದ್ರವ್ಯಾಣಿ ಚ ವಿಧಾಯ ಅಮೃತಪ್ಲಾವನಂ ಕೃತ್ವಾ ಪಾದ್ಯ ಪಾತ್ರಾದಿಷು ತೇಷಾಮರ್ಘ್ಯವ ದಾಸನಂ ಪರಿಕಲ್ಪ್ಯ ಸಂಹಿತಯಾಽಭಿಮಂತ್ರ್ಯಾದ್ಯೇನಾಭ್ಯರ್ಚ್ಯ ದ್ವಿತೀಯೇನಾಮೃತೀ ಕೃತ್ವಾ ತೃತೀಯೇನ ವಿಶೋಧ್ಯ ಚತುರ್ಥೇನಾವಗುಂಠ್ಯ ಪಂಚಮೇನ ಅವಲೋಕ್ಯ ಷಷ್ಠೇನ ರಕ್ಷಾಂ ವಿಧಾಯ ಚತುರ್ಥೇನ ಕುಶಪುಂಜೇನಾರ್ಘ್ಯಾಂಭಸಾಽಭ್ಯುಕ್ಷ್ಯ ಆತ್ಮಾನಮಪಿ ದ್ರವ್ಯಾಣಿ ಪುನರರ್ಘ್ಯಾಂಭಸಾಽಭ್ಯುಕ್ಷ್ಯ ಸಪುಷ್ಪೇಣ ಸರ್ವದ್ರವ್ಯಾಣಿಪೃಥಕ್ ಪೃಥಕ್ ಶೋಧಯೇತ್ ॥೧೪॥

---

ನನ್ನು ಧ್ಯಾನಿಸಿ, ಹಣೆಯಲ್ಲಿ ದೀಪಶಿಖೆಯ ಆಕಾರವಾಗಿರುವ ಅಗ್ನಿನೇತ್ರವುಳ್ಳ ಮಹೇಶ್ವರನನ್ನು ಧ್ಯಾನಿಸಿ, ಬಿಂದುವಿನಿಂದ ಅಮೃತಧಾರೆಯು ಶಿವಮಂಡಲದಮೇಲೆ ಬೀಳುತ್ತಿರುವುದೆಂದು ಧ್ಯಾನಮಾಡಬೇಕು. ಇದೇ ಆತ್ಮಶುದ್ಧಿಯು.

ಪ್ರಾಣಾಪಾನವಾಯುಗಳನ್ನು ಒಂದು ಕ್ರಮದಲ್ಲಿ ಸಂಚರಿಸುವಂತೆ ಮಾಡಿ ಸುಷುಮ್ನಾನಾಡಿಯಲ್ಲಿ ಸ್ಥಿರಗೊಳಿಸಿ, ಆರನೆಯದಾದ ನಮೋ ಹಿರಣ್ಯ ಬಾಹವೇ ಎಂಬ ಮಂತ್ರದಿಂದ ತಾಲುಮುದ್ರೆಯೆಂಬ ಖೇಚರೀ ಮುದ್ರೆಯನ್ನೂ ದಿಗ್ಬಂಧನವನ್ನೂ ಮಾಡಿದರೆ ಸ್ಥಾನವೆಂದರೆ ಶರೀರ ಶುದ್ಧಿಯಾಗುವುದು.

೧೪. ವಸ್ತ್ರಾದಿಗಳಿಂದ ಚೆನ್ನಾಗಿ ಶುದ್ಧಿಮಾಡಿದ ಅರ್ಘ್ಯಪಾತ್ರೆಯೇ ಮೊದಲಾದ ಪಾತ್ರೆಗಳಲ್ಲಿ ಓಂಕಾರದಿಂದ ತತ್ವತ್ರಯವಾದ ಬ್ರಹ್ಮಾ ವಿಷ್ಣು, ರುದ್ರರನ್ನು, ಧ್ಯಾನಮಾಡಿ, ಆ ಮೇಲೆ ಬಿಂದುವನ್ನು ಧ್ಯಾನ ಮಾಡಿ, ನೀರನ್ನು ತುಂಬಿ, ಅದರಲ್ಲಿ ಹಾಕಬೇಕಾದ ಅಷ್ಟಗಂಧಾದಿ ದ್ರವ್ಯಗಳನ್ನು ಹಾಕಿ ಅಮೃತದಿಂದ ನೆನಸಿ, ಪಾದ್ಯಪಾತ್ರಾದಿಗಳನ್ನೂ ಅರ್ಘ್ಯ

**ಸದ್ಯೇನ ಗಂಧಂ, ವಾಮೇನ ವಸ್ತ್ರಂ, ಅಘೋರೇಣ ಆಭರಣಂ, ಪುರುಷೇಣ ನೈವೇದ್ಯಂ, ಈಶಾನೇನ ಪುಷ್ಪಾಣಿ, ಅಥಾಭ್ಯ ಮಂತ್ರಯೇತ್ ॥**

**ಶಿವಗಾಯತ್ರ್ಯಾ ಶೇಷಂ ಪ್ರೋಕ್ಷಯೇತ್ ॥೧೬॥**

**ಪಂಚಾಮೃತ ಪಂಚಗವ್ಯಾದೀನಿ ಬ್ರಹ್ಮಾಂಗ ಮೂಲಾದ್ಯೈ ರಭಿಮಂತ್ರಯೇತ್ ॥೧೭॥**

---

ಪಾತ್ರೆಯಂತೆಯೇ ಆಸನ ಕಲ್ಪನೆ ಅಭಿಮಂತ್ರಣ ಮುಂತಾದುವುಗಳಿಂದ ಸಂಸ್ಕಾರಮಾಡಿ, ಪಂಚ ಬ್ರಹ್ಮ ಮಂತ್ರಗಳಲ್ಲಿ ಮೊದಲನೆಯ ಮಂತ್ರದಿಂದ ಪೂಜಿಸಿ, ಎರಡನೆಯ ಮಂತ್ರದಿಂದ ಅಮೃತೀ ಕರಣವನ್ನು ಮಾಡಿ, ಮೂರನೆಯುದರಿಂದ ಶುದ್ಧಿಮಾಡಿ, ನಾಲ್ಕನೆಯುದರಿಂದ ಮುಚ್ಚಿ, ಐದನೆಯದರಿಂದ ನಿರೀಕ್ಷಿಸಿ, ಆರನೆಯದಾದ ಹಿರಣ್ಯಬಾಹವೇ ಎಂಬ ಮಂತ್ರದಿಂದ ರಕ್ಷಣೆಯನ್ನು ಮಾಡಿ, ನಾಲ್ಕನೆಯ ರುದ್ರಗಾಯತ್ರಿಯಿಂದ ಅರ್ಘ್ಯ ಪಾತ್ರೆಯ ನೀರನ್ನು ಕೂರ್ಚೆಯಿಂದ ತೆಗೆದುಕೊಂಡು ಪ್ರೋಕ್ಷಿಸಿ, ತನ್ನನ್ನೂ ಪೂಜಾದ್ರವ್ಯಗಳನ್ನೂ ಪುನಃ ಅರ್ಘ್ಯ ಪಾತ್ರೆಯ ನೀರಿನಿಂದ ಪ್ರೋಕ್ಷಿಸಿ, ಪುಷ್ಪಸಹಿತವಾದ ನೀರಿನಿಂದ ಸಮಸ್ತ ಪೂಜಾದ್ರವ್ಯಗಳನ್ನೂ ಬೇರೆಬೇರೆ ಯಾಗಿ ಪ್ರೋಕ್ಷಿಸಿ ಶುದ್ಧಿಯನ್ನು ಮಾಡಬೇಕು.

೧೫. ಸದ್ಯೋಜಾತ ಮಂತ್ರದಿಂದ ಗಂಧವನ್ನೂ, ವಾಮದೇವ ಮಂತ್ರದಿಂದ ವಸ್ತ್ರವನ್ನೂ, ಅಘೋರ ಮಂತ್ರದಿಂದ ಆಭರಣಗಳನ್ನೂ, ತತ್ಪುರುಷ ಮಂತ್ರದಿಂದ ನೈವೇದ್ಯವನ್ನೂ, ಈಶಾನ ಮಂತ್ರದಿಂದ ಪುಷ್ಪವನ್ನೂ ಅಭಿಮಂತ್ರಿಸಬೇಕು.

೧೬. ಮಿಕ್ಕ ದ್ರವ್ಯಗಳನ್ನು ಶಿವಗಾಯತ್ರೀ ಮಂತ್ರದಿಂದ ಪ್ರೋಕ್ಷಿಸಬೇಕು.

೧೭. ಪಂಚಾಮೃತ ಪಂಚಗವ್ಯ ಮುಂತಾದ ದ್ರವ್ಯಗಳನ್ನು ಮೂಲ ಮಂತ್ರವಾದ ಪಂಚಾಕ್ಷರ ಮಂತ್ರದಿಂದ ಅಭಿಮಂತ್ರಿಸಬೇಕು.

ಪೃಥಕ್ ಪೃಥಕ್ ಮೂಲೇನಾರ್ಘ್ಯಂ ಧೂಪಂ ದತ್ವಾಽಽಚ ಮನೀ
ಯಂ ಚ ತೇಷಾಮಪಿ ಧೇನುಮುದ್ರಾಂ ಚ ದರ್ಶಯಿತ್ವಾಕವ
ಚೇನಾ ವಗುಂಠ್ಯಾಸ್ತ್ರೇಣ ರಕ್ಷಾಂ ಚ ವಿಧಾಯ ದ್ರವ್ಯ ಶುದ್ಧಿಂ
ಕುರ್ಯಾತ್ ॥೧೮॥
ಅರ್ಘ್ಯೋದಕ ಮಗ್ರೇ ಹೃದಾ ಗಂಧಮಾದಾಯಾಸ್ತ್ರೇಣ ವಿಶೋಧ್ಯ,
ಪೂಜಾಪ್ರಭೃತಿ ಕರಣಂ ರಕ್ಷಾಂತಂ ಕೃತ್ವೈವಂ ದ್ರವ್ಯಶುದ್ಧಿಂ ಪೂಜಾ
ಸಮರ್ಪಣಾಂತಂ ಮೌನಮಾಸ್ಥಾಯ, ಪುಷ್ಪಾಂಜಲಿಂ ದತ್ವಾ,
ಸರ್ವಮಂತ್ರಾಣಿ ಪ್ರಣವಾದಿ ನಮೋಽಂತಾನ್ ಜಪಿತ್ವಾ ಪುಷ್ಪಾಂ
ಜಲಿಂ ತ್ಯಜೇನ್ಮಂತ್ರ ಶುದ್ಧಿರಿತ್ಥಂ ॥೧೯॥
ಅಗ್ರೇ ಸಾಮಾನ್ಯಾರ್ಘ್ಯ ಪಾತ್ರಂ ಪಯಸಾಽಽಪೂರ್ಯ ಗಂಧ,
ಪುಷ್ಪಾದಿನಾ ಸಂಹಿತಯಾಽಭಿ ಮಂತ್ರ್ಯ, ಧೇನುಮುದ್ರಾಂ ದತ್ವಾ,
ಕವಚೇನಾ ವಗುಂಠ್ಯಾಸ್ತ್ರೇಣ ರಕ್ಷಯೇತ್. ಪೂಜಾಪರ್ಯುಷಿತಾಂ
ಗಾಯತ್ರ್ಯಾ ಸಮಭ್ಯರ್ಚ್ಯ, ಸಾಮಾನ್ಯಾರ್ಘ್ಯಂ ದತ್ವಾ, ಗಂಧಪುಷ್ಪ
ಧೂಪಾಚಮನೀಯಂ ಸ್ವಧಾಽಂತಂ ನಮೋಽಂತಂ ವಾ ದತ್ವಾ,

---

೧೮. ಬೇರೆಬೇರೆ ಯಾಗಿ ಪಂಚಾಕ್ಷರ ಮಂತ್ರದಿಂದ ಅರ್ಘ್ಯಧೂಪ ಆಚಮನೀಯಗಳನ್ನು ಸಮರ್ಪಿಸಿ ಧೇನು ಮುದ್ರೆಯನ್ನು ತೋರಿಸಿ ಕವಚ ಮುದ್ರೆಯಿಂದ ಮುಚ್ಚಿ ಅಸ್ತ್ರ ಮುದ್ರೆಯಿಂದ ರಕ್ಷಣೆಯನ್ನು ಮಾಡಿ ದ್ರವ್ಯ ಶುದ್ಧಿಯನ್ನು ಮಾಡಬೇಕು.

೧೯. ಮೊದಲು ಹೃದಯಮಂತ್ರದಿಂದ ಅರ್ಘ್ಯ ಪಾತ್ರೆಯ ನೀರನ್ನೂ ಗಂಧವನ್ನೂ ತೆಗೆದುಕೊಂಡು, ಅಸ್ತ್ರಮುದ್ರೆಯಿಂದ ಶೋಧಿಸಿ, ಪೂಜೆಗೆ ಪ್ರಾರಂಭಮಾಡಿ ದಾಗಿನಿಂದ ರಕ್ಷಾಂತವಾಗಿ ದ್ರವ್ಯಶುದ್ಧಿಯನ್ನು ಮಾಡಿ, ಪೂಜಾಸಮರ್ಪಣೆಯನ್ನು ಮಾಡುವವರೆಗೂ ಮೌನವಾಗಿದ್ದು ಪುಷ್ಪಾಂಜಲಿಯನ್ನು ಸಮರ್ಪಿಸಿ ಸಮಸ್ತ ಪೂಜಾ ಮಂತ್ರಗಳನ್ನೂ ಪ್ರಣವಾದಿಯಾಗಿ ನಮೋಽಂತವಾಗಿ ಉಚ್ಚರಿಸಿ ಜಪಮಾಡಿ ಪುಷ್ಪಾಂಜಲಿಯನ್ನು ಸಮರ್ಪಿಸಬೇಕು. ಇದೇ ಮಂತ್ರಶುದ್ಧಿಯು.

೨೦. ಮೊದಲು ಸಾಮಾನ್ಯಾರ್ಘ್ಯ ಪಾತ್ರೆಯಲ್ಲಿ ನೀರನ್ನು ತುಂಬಿ, ಗಂಧಪುಷ್ಪಗಳಿಂದಲೂ ಮಂತ್ರಗಳಿಂದಲೂ ಅಭಿಮಂತ್ರಿಸಿ,ಧೇನುಮುದ್ರೆ

ಬ್ರಹ್ಮಭಿಃ ಪೃಥಕ್ಪೃಥಕ್ಪುಷ್ಪಾಂಜಲಿಂ ದತ್ವಾ ಫಡಂತಾಸ್ತ್ರೇಣ ನಿರ್ಮಾಲ್ಯಂ ವ್ಯಪೋಹ್ಯ ಈಶಾನ್ಯಾಂ ಚಂಡಮಭ್ಯರ್ಚ್ಯಾ ಸನಮಾ ತ್ರಿಂ ಚಂಡಂ ಸಾಮಾನ್ಯಾಸ್ತ್ರೇಣ ಲಿಂಗಪೀಠಂ ಶಿವಂ ಪಾಶುಪತಾಸ್ತ್ರೇಣ ವಿಶೋಧ್ಯ, ಮೂರ್ಧ್ನಿ ಪುಷ್ಪಂ ನಿಧಾಯ ಪೂಜಯೇಲ್ಲಿಂಗ ಶುದ್ಧಿಃ ॥೨೦॥

ಆಸನಂ ಕೂರ್ಮಶಿಲಾಯಾಂ ಬೀಜಾಂಕುರಂ ತದುಪರಿ ಬ್ರಹ್ಮ ಶಿಲಾಯಾಮನಂತ ನಾಲಸುಷಿರೇ ಸೂತ್ರಪತ್ರ ಕಂಟಕ ಕರ್ಣಿಕಾ ಕೇಸರ ಧರ್ಮಜ್ಞಾನ ವೈರಾಗ್ಯೈಶ್ವರ್ಯ ಸೂರ್ಯಸೋಮಾಗ್ನಿ ಕೇಸರಶಕ್ತಿಂ ಮನೋನ್ಮನೀಂ ಕರ್ಣಿಕಾಯಾ ಮನೋನ್ಮನೇನಾನಂ ತಾಸನಾಯೇತಿ ಸಮಾಸೇನಾಸನಂ ಪರಿಕಲ್ಪ್ಯ ತದುಪರಿ ನಿವೃತ್ತ್ಯಾದಿ ಕಲಾಮಯಂ ಷಡ್ವಿಧ ಸಹಿತಂ ಕರ್ಮಕಲಾಂಗದೇಹಂ ಸದಾಶಿವಂ ಭಾವಯೇತ್ ॥೨೧॥

---

ಯನ್ನು ತೋರಿಸಿ ಕವಚದಿಂದ ಮುಚ್ಚಿ, ಅಸ್ತ್ರಮುದ್ರೆಯಿಂದ ರಕ್ಷಿಸ ಬೇಕು. ಪೂಜೆ ಮಾಡಿ ಮಿಕ್ಕ ಪುಷ್ಪಾದಿಗಳನ್ನು ಗಾಯತ್ರಿಯಿಂದ ಪೂಜಿಸಿ ಸಾಮಾನ್ಯವಾದ ಅರ್ಘ್ಯವನ್ನು ಸಮರ್ಪಿಸಿ, ಗಂಧ ಪುಷ್ಪ ಧೂಪ ಆಚಮನೀಯಗಳನ್ನು ಸ್ವಧಾಂತವಾಗಿಯಾಗಲಿ ನಮೋಂತವಾಗಿಯಾ ಗಲಿ ಮಂತ್ರಸಹಿತವಾಗಿ ಸಮರ್ಪಿಸಿ, ಪಂಚಬ್ರಹ್ಮ ಮಂತ್ರಗಳಿಂದ ಬೇರೆ ಬೇರೆಯಾಗಿ ಪುಷ್ಪಾಂಜಲಿಯನ್ನು ಸಮರ್ಪಿಸಿ, ಫಟ್ ಎಂಬ ಅಸ್ತ್ರಮಂತ್ರ ದಿಂದ ನಿರ್ಮಾಲ್ಯವನ್ನು ತೆಗೆದು ಈಶಾನ್ಯ ದಿಕ್ಕಿನಲ್ಲಿರುವ ಚಂಡೀಶ್ವರನನ್ನು ಪೂಜಿಸಿ ಸಾಮಾನ್ಯಾಸ್ತ್ರದಿಂದ ಚಂಡೀಶ್ವರನನ್ನೂ ಪಾಶುಪತಾಸ್ತ್ರದಿಂದ ಲಿಂಗ ಪೀಠಸಹಿತನಾದ ಶಿವನನ್ನೂ ಶುದ್ಧಿಮಾಡಿ, ಲಿಂಗದ ನೆತ್ತಿಯಲ್ಲಿ ಪುಷ್ಪವನ್ನಿಟ್ಟು ಪೂಜೆಮಾಡಬೇಕು. ಇದೇ ಲಿಂಗಶುದ್ಧಿಯು.

೨೧. ಮುಂದೆ ಪೂಜಾವಿಧಿಯನ್ನು ಹೇಳಲಾಗುವುದು. ಕೂರ್ಮ ಶಿಲೆಯಮೇಲೆ ಆಸನವನ್ನೂ, ಅದರಮೇಲೆ ಬೀಜಾಂಕುರವನ್ನೂ, ಅದರ ಮೇಲೆ ಬ್ರಹ್ಮಶಿಲೆಯಲ್ಲಿ ಅನಂತಾಸನವನ್ನೂ, ನಾಳರಂಧ್ರಗಳನ್ನೂ, ಸೂತ್ರ

ಉಭಾಭ್ಯಾಂ ಸಪುಷ್ಪಾಭ್ಯಾಂ ಹಸ್ತಾಭ್ಯಾ ಮಂಗುಷ್ಠೇನ ಪುಷ್ಪಮಾಪೀಡ್ಯ ಆವಾಹನ ಮುದ್ರಯಾ ಶನೈಃ ಶನೈಃ ಹೃದಯಾದಿ ಮಸ್ತಕಾಂತಮಾರೋಪ್ಯ ಹೃದಾ ಸಹ ಮೂಲಂ ಪ್ಲುತಮುಚ್ಚಾರ್ಯ ಸದ್ಯೇನ ಬಿಂದುಸ್ಥಾನಾ ದಭ್ಯಧಿಕಂ ದೀಪಶಿಖಾಕಾರಂ ಸರ್ವತೋಮುಖಹಸ್ತಂ ವ್ಯಾಪ್ಯ ವ್ಯಾಪಕ ಮಾವಾಹ್ಯ ಸ್ಥಾಪಯೇತ್ ॥೨೨॥

ಪೂರ್ವಂಹೃದಾ ಶಿವಶಕ್ತಿಸಮವಾಯೇನ ಪರಮೀಕರಣ ಮಮೃತೀಕರಣಂ ಹೃದಯಾದಿ ಮೂಲೇನ ಸದ್ಯೇನಾವಾಹನಂ ಹೃದಾ ಮೂಲೋಪರಿ ವಾಮೇನ ಸ್ಥಾಪನಂ ಹೃದಾ ಮೂಲೋಪರಿ ಅಘೋರೇಣ ಸನ್ನಿರೋಧಂ ಹೃದಾ ಮೂಲೋಪರಿ ಪುರುಷೇಣ ಸಾನ್ನಿಧ್ಯಂ ಹೃದಾ ಮೂಲೇನ ಈಶಾನೇನ ಪೂಜಯೇದಿತಿ ಉಪದೇಶಃ ॥೨೩॥

---

ಅದರಲ್ಲಿ ನೂಲನ್ನೂ, ಎಲೆ, ಮುಳ್ಳು, ಕರ್ಣಿಕೆ, ಕೇಸರ ಇವನ್ನೂ, ಜ್ಞಾನ, ವೈರಾಗ್ಯ, ಐಶ್ವರ್ಯ, ಸೂರ್ಯ, ಚಂದ್ರ, ಅಗ್ನಿ ಈ ಸಮುದಾಯ ರೂಪವಾದುದನ್ನಾಗಿ ಭಾವಿಸುತ್ತಾ, ವಾಮಾ ಮುಂತಾದ ಹಿಂದೆ ಹೇಳಿದ ಎಂಟು ಶಕ್ತಿಗಳನ್ನೂ, ಕರ್ಣಿಕೆಯಲ್ಲಿ ಮನೋನ್ಮನೀ ಶಕ್ತಿಯನ್ನೂ, ಧ್ಯಾನಮಾಡಿ, ಸಂಗ್ರಹವಾಗಿ ಅನಂತಾಸನಾಯನಮಃ ಎಂದು ಹೇಳಿ ಆಸನವನ್ನು ಕಲ್ಪಿಸಿ, ಅದರ ಮೇಲೆ ನಿವೃತ್ತಿಯೇ ಮುಂತಾದ ಹಿಂದೆ ಹೇಳಿದ ಕಲೆಗಳೆಂಬ, ಆರು ಕೋಶಗಳುಳ್ಳ, ಕರ್ಮಗತಿಗಳೇ ಅಂಗಗಳಾಗಿರುವ, ವೇದಗಳೇ ಶರೀರವಾಗಿ ಉಳ್ಳ, ಸದಾಶಿವನನ್ನು ಭಾವಿಸಬೇಕು.

೨೨. ಆ ಮೇಲೆ ಎರಡು ಕೈಗಳಲ್ಲಿಯೂ ಹೂಗಳನ್ನು ತೆಗೆದುಕೊಂಡು ಹೆಬ್ಬೆರಳುಗಳಿಂದ ಆ ಹೂಗಳನ್ನು ಒತ್ತಿ ಹಿಡಿದು ಆವಾಹನ ಮುದ್ರೆಯಿಂದ ಮೆಲ್ಲಮೆಲ್ಲಗೆ ಹೃದಯದಿಂದ ತಲೆಯ ಕೊನೆಯವರೆಗೆ ಏರಿಸಿ, ಹೃದಯ ಮಂತ್ರದೊಡನೆ ಮೂಲಮಂತ್ರವನ್ನು ಉಚ್ಚ ಸ್ವರದಿಂದ ಹೇಳಿ, ಸದ್ಯೋಜಾತ ಮಂತ್ರದಿಂದ ಬಿಂದುಸ್ಥಾನಕ್ಕಿಂತ ಮೇಲೆ ದೀಪ ಶಿಖಾಕಾರವಾದ ಸರ್ವತೋ ಮುಖವಾದ ಹಸ್ತದಿಂದ ವ್ಯಾಪಿಸಿ ವ್ಯಾಪಕನ್ಯಾಸವನ್ನು ಮಾಡಿ ಆವಾಹನವನ್ನೂ ಸ್ಥಾಪನೆಯನ್ನೂ ಮಾಡಬೇಕು.

೨೩. ಮೊದಲು ಹೃದಯ ಮಂತ್ರದಿಂದ ಶಿವಶಕ್ತಿಗಳತಾದಾತ್ಮ್ಯದಿಂದ ಏಕೀಕರಣವೂ ಅಮೃತೀಕರಣವೂ, ಹೃದಯಮಂತ್ರ ಮೂಲ

**ಪಂಚಮಂತ್ರ ಸಹಿತೇನ ಯಥಾಪೂರ್ವಮಾತ್ಮನೋ ದೇಹ**
**ನಿರ್ಮಾಣಂ ತಥಾ ದೇವಸ್ಯಾಪಿ ವಹ್ನೇಶ್ಚೈವ ಮುಪದೇಶಃ ॥೨೪॥**
**ರೂಪಕಧ್ಯಾನಂ ಕೃತ್ವಾ ಮೂಲೇನ ನಮಸ್ಕಾರಾಂತ ಮಾಪಾದ್ಯ,**
**ಸ್ವಧಾಂತ ಮಾಚಮನೀಯಂ ಸರ್ವಂ ನಮಸ್ಕಾರಾಂತಂ ವಾ,**
**ಸ್ವಾಹಾಕಾರಾಂತಮರ್ಘ್ಯಂ ಮೂಲೇನ ಪುಷ್ಪಾಂ ಜಲಿಂ ವೌಷಡಂ**
**ತೇನ ಸರ್ವಂ ನಮಸ್ಕಾರಾಂತಂ ಹೃದಾ ವಾ ಈಶಾನೇನ ವಾ ರುದ್ರ**
**ಗಾಯತ್ರ್ಯಾ ವಾ ಓಂ ನಮಃ ಶಿವಾಯೇತಿ ಮೂಲಮಂತ್ರೇಣ ವಾ**
**ಪೂಜಯೇತ್ ॥೨೫॥**

---

ಮಂತ್ರ ಸದ್ಯೋಜಾತ ಮಂತ್ರಗಳಿಂದ ಆವಾಹನ, ಹೃದಯ ಮಂತ್ರ ಮೂಲಮಂತ್ರವಾದಮೇಲೆ ವಾಮದೇವ ಮಂತ್ರದಿಂದ ಸ್ಥಾಪನ, ಹೃದಯ ಮಂತ್ರ ಮೂಲಮಂತ್ರ ಅಘೋರ ಮಂತ್ರಗಳಿಂದ ಸನ್ನಿರೋಧ, ಹೃದಯ ಮೂಲ ತತ್ಪುರುಷ ಮಂತ್ರಗಳಿಂದ ಸಾನ್ನಿಧ್ಯ, ಹೃದಯ ಮೂಲ ಈಶಾನ ಮಂತ್ರಗಳಿಂದ ಪೂಜೆ, ಇವುಗಳನ್ನು ಮಾಡಬೇಕೆಂದು ಉಪದೇಶಮಾಡಿರುವುದು.

೨೪. ಪಂಚಬ್ರಹ್ಮ ಮಂತ್ರಗಳಿಂದ ಮೊದಲು ತನ್ನ ದೇಹವನ್ನು ನಿರ್ಮಾಣಮಾಡಿದಂತೆಯೇ ದೇವನ ಶರೀರವನ್ನೂ ಅಗ್ನಿಯ ಶರೀರವನ್ನೂ ನಿರ್ಮಾಣಮಾಡಬೇಕೆಂದು ಉಪದೇಶಿಸಿರುವುದು.

೨೫. ಪ್ರತಿಬಿಂಬ ಧ್ಯಾನವನ್ನು ಮಾಡಿ ಮೂಲಮಂತ್ರದಿಂದ ನಮಸ್ಕಾರಾಂತವಾಗಿ ಪೂಜಿಸಿ, ಅಥವಾ ಆಚಮನವನ್ನು ಸ್ವಧಾಕಾರಾಂತವಾಗಿಯೂ ಮಿಕ್ಕುದನ್ನು ಎಲ್ಲವನ್ನೂ ನಮಸ್ಕಾರಾಂತವಾಗಿ ಯಾಗಲಿ ಸ್ವಾಹಾಕಾರಾಂತವಾಗಿ ಅರ್ಘ್ಯವನ್ನೂ ಮೂಲಮಂತ್ರದಿಂದ ಪುಷ್ಪಾಂಜಲಿಯನ್ನೂ ಎಲ್ಲವನ್ನೂ ವೌಷಡಂತವಾಗಿ ಯಾಗಲಿ ನಮಸ್ಕಾರಾಂತವಾಗಿ ಯಾಗಲಿ ಹೃದಯ ಮಂತ್ರಾಂತವಾಗಿ ಯಾಗಲಿ ಈಶಾನ ಮಂತ್ರ ರುದ್ರ ಗಾಯತ್ರೀ ಓಂ ನಮಃಶಿವಾಯ ಎಂಬ ಮೂಲಮಂತ್ರ ಇವುಗಳಲ್ಲೊಂದರಿಂದಲಾಗಲಿ ಪೂಜೆಯನ್ನು ಮಾಡಬೇಕು.

ಪುಷ್ಪಾಂ ಜಲಿಂ ದತ್ವಾ ಪುನರ್ಧೂಪಾಚಮನೀಯಂ ಷಷ್ಠೇನ ಪುಷ್ಪಾಪಸರಣಂ ವಿಸರ್ಜನಂ ಮಂತ್ರೋದಕೇನ ಮೂಲೇನ ಸಂಸ್ನಾಪ್ಯ ಸರ್ವದ್ರವ್ಯಾಭಿಷೇಕ ಮೀಶಾನೇನ ಪ್ರತಿದ್ರವ್ಯ ಮಷ್ಟ ಪುಷ್ಪಂ ದತ್ವೈವ ಮರ್ಘ್ಯಂ ಚ ಗಂಧಪುಷ್ಪ ಧೂಪಾಚಮನೀಯಂ ಫಡಂತಾಸ್ತ್ರೇಣ ಪೂಜಾಪಸರಣಂ ಶುದ್ಧೋದಕೇನ ಮೂಲೇನ ಸಂಸ್ನಾಪ್ಯ ಪಿಷ್ಟಾಮಲಕಾದಿಭಿಃ ॥೨೬॥

ಉಷ್ಣೋದಕೇನ ಹರಿದ್ರಾದ್ಯೇನ ಲಿಂಗಮೂರ್ತಿಂ ಪೀಠಸಹಿತಾಂ ವಿಶೋಧ್ಯ ಗಂಧೋದಕ ಹಿರಣ್ಯೋದಕ ಮಂತ್ರೋದಕೇನ ರುದ್ರಾಧ್ಯಾಯಂ ಪಠಮಾನಃ ನೀಲರುದ್ರ ತ್ವರಿತರುದ್ರಂ ಪಂಚಬ್ರಹ್ಮಾದಿಭಿಃ ನಮಃ ಶಿವಾಯೇತಿ ಸ್ನಾಪಯೇತ್ ॥೨೭॥

---

೨೬. ಬಳಿಕ ಮೊದಲು ಮಾಡಿದ ಪೂಜೆಗೆ ಪುಷ್ಪಾಂಜಲಿಯನ್ನು ಸಮರ್ಪಿಸಿ ಮತ್ತೆ ಧೂಪ ಆಚಮನೀಯಗಳನ್ನು ಸಮರ್ಪಿಸಿ, ನಮೋ ಹಿರಣ್ಯಬಾಹವೇ ಎಂಬ ಮಂತ್ರದಿಂದ ಪುಷ್ಪಗಳನ್ನು ತೆಗೆದು ಪೂಜಾವಿಸರ್ಜನೆಯನ್ನು ಮಾಡಿ, ಪಂಚಾಕ್ಷರೀ ಮಂತ್ರದಿಂದ ಅಭಿಮಂತ್ರಿಸಿದ ನೀರಿನಿಂದ ಸ್ನಾನಮಾಡಿಸಿ, ಈಶಾನಮಂತ್ರದಿಂದ ಸಮಸ್ತ ಪಂಚಾಮೃತ ದ್ರವ್ಯಗಳಿಂದ ಅಭಿಷೇಕವನ್ನು ಮಾಡಿ, ಪ್ರತಿಯೊಂದು ಪದಾರ್ಥವನ್ನೂ ಅಭಿಷೇಕಮಾಡಿದಾಗಲೂ ಅಷ್ಟಪುಷ್ಪಗಳನ್ನೂ ಅರ್ಘ್ಯಗಳನ್ನೂ ಸಮರ್ಪಿಸಿ, ಗಂಧಪುಷ್ಪ ಧೂಪಾಚಮನೀಯಗಳನ್ನೂ ಸಮರ್ಪಿಸಿ, ಫಟ್ ಎಂಬ ಅಸ್ತ್ರ ಮಂತ್ರದಿಂದ ಪೂಜೆಮಾಡಿದ ಹೂಗಳನ್ನು ತೆಗೆದು, ನೆಲ್ಲಿ ಚಿಟ್ಟಿನ ಹುಡಿಯಿಂದ ಮೂಲಮಂತ್ರವನ್ನುಚ್ಚರಿಸಿ ಶುದ್ಧೋದಕ ಸ್ನಾನವನ್ನು ಮಾಡಿಸಬೇಕು.

೨೭. ಪಂಚಾಮೃತಾಭಿಷೇಕವಾದಮೇಲೆ ಬಿಸಿ ನೀರಿನಿಂದಲೂ ಅರಿಶಿನದಹುಡಿಯಿಂದಲೂ ಪೀಠಸಹಿತವಾದ ಲಿಂಗಮೂರ್ತಿಯನ್ನು ಸ್ನಾನಮಾಡಿಸಿ ಗಂಧೋದಕ ಹಿರಣ್ಯೋದಕ ಮಂತ್ರೋದಕಗಳಿಂದಲೂ ರುದ್ರಾಧ್ಯಾಯವನ್ನು ಹೇಳುತ್ತಾ ನೀಲರುದ್ರ ತ್ವರಿತರುದ್ರ ಪಂಚಬ್ರಹ್ಮ

ಮೂರ್ಧ್ನಿ ಪುಷ್ಪಂ ನಿಧಾಯೈವಂ ನ ಶೂನ್ಯಂ ಲಿಂಗಮಸ್ತಕಂ
ಕುರ್ಯಾದತ್ರಶ್ಲೋಕಃ ॥೨೮॥

ಯಸ್ಯ ರಾಷ್ಟ್ರೇ ತು ಲಿಂಗಸ್ಯ ಮಸ್ತಕಂ ಶೂನ್ಯಲಕ್ಷಣಂ ।
ತಸ್ಯಾಲಕ್ಷ್ಮೀರ್ಮಹಾರೋಗೋ ದುರ್ಭಿಕ್ಷಂ ವಾಹನಕ್ಷಯಃ ॥
ತಸ್ಮಾತ್ಪರಿಹರೇದ್ರಾಜಾ ಧರ್ಮಕಾಮಾರ್ಥಮುಕ್ತಯೇ ।
ಶೂನ್ಯೇ ಲಿಂಗೇ ಸ್ವಯಂ ರಾಜಾ ರಾಷ್ಟ್ರಂ ಚೈವ ಪ್ರಣಶ್ಯತಿ ॥೩೦॥

ಏವಂ ಸುಸ್ನಾಪ್ಯಾರ್ಘ್ಯಂ ಚ ದತ್ವಾ ಸಂಮೃಜ್ಯ ವಸ್ತ್ರೇಣ ಗಂಧಪುಷ್ಪ
ವಸ್ತ್ರಾಲಂಕಾರಾದೀಂಶ್ಚ ಮೂಲೇನ ದದ್ಯಾತ್ ॥೩೧॥

---

ಮಂತ್ರಗಳಿಂದ ನಮಃ ಶಿವಾಯ ಎಂಬ ಮಂತ್ರದೊಡನೆ ಸ್ನಾನವನ್ನು ಮಾಡಿಸಬೇಕು.

೨೮. ಶಿವಲಿಂಗಕ್ಕೆ ಪ್ರತಿಯೊಂದು ದ್ರವ್ಯದ ಅಭಿಷೇಕವನ್ನು ಮಾಡುವಾಗಲೂ ನೆತ್ತಿಯಮೇಲೆ ಹೂವನ್ನಿಟ್ಟು ಅಭಿಷೇಕಮಾಡಬೇಕು. ಲಿಂಗದ ನೆತ್ತಿಯನ್ನು ಯಾವಾಗಲೂ ಬರಿದಾಗಿ ಮಾಡಬಾರದು. ಈ ವಿಷಯದಲ್ಲಿ ಮುಂದೆ ಹೇಳುವ ಶ್ಲೋಕಾರ್ಥವನ್ನು ಗಮನಿಸಬೇಕು.

೨೯-೩೦. ಯಾವ ರಾಜ್ಯದಲ್ಲಿ ಲಿಂಗದ ನೆತ್ತಿಯು ಪೂಜೆಯಿಲ್ಲದೆ ಬರಿದಾಗಿರುವುದೋ ಆ ರಾಜ್ಯಕ್ಕೆ ಅಮಂಗಳವೂ ಮಹಾರೋಗವೂ ದುರ್ಭಿಕ್ಷವೂ ಕುದುರೆ ಆನೆ ಮುಂತಾದ ವಾಹನಗಳ ನಾಶವೂ ಉಂಟಾಗುವುದು. ಆದುದರಿಂದ ರಾಜನು ಧರ್ಮ ಅರ್ಥ ಕಾಮ ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳ ಸಿದ್ಧಿಗಾಗಿ ಲಿಂಗದ ಶೂನ್ಯಮಸ್ತಕ ದೋಷವನ್ನು ಪರಿಹಾರಮಾಡಬೇಕು. ಲಿಂಗದ ನೆತ್ತಿಯು ಬರಿದಾಗಿದ್ದರೆ ರಾಜನೂ ರಾಜ್ಯವೂ ನಾಶವಾಗುವುದು.

೩೧. ಹೀಗೆ ಲಿಂಗಕ್ಕೆ ಅಭಿಷೇಕವನ್ನು ಮಾಡಿ ವಸ್ತ್ರದಿಂದ ಒರಸಿ ಗಂಧ ಹೂವು ವಸ್ತ್ರಾಲಂಕಾರಾದಿಗಳನ್ನು ಮೂಲಮಂತ್ರದಿಂದ ಸಮರ್ಪಿಸಬೇಕು.

**ಧೂಪಾಚಮನೀಯು ದೀಪ ನೈವೇದ್ಯಾದೀಂಶ್ಚ ಮೂಲೇನ ಪ್ರಧಾನೇನೋಪರಿ ಪೂಜನಂ ಪವಿತ್ರೀಕರಣ ಮಿತ್ಯುಕ್ತಂ ॥೩೨॥**

**ಆರಾರ್ತಿದೀಪಾದೀಂಶ್ಚೈವ ಧೇನುಮುದ್ರಾಮುದ್ರಿತಾನಿ ಕವಚೇನಾವಗುಂಠಿತಾನಿ ಷಷ್ಠೇನ ರಕ್ಷಿತಾನಿ ಲಿಂಗೋಪರಿ ಲಿಂಗೇ ಚ ಲಿಂಗಸ್ಯಾಧಃ ಸಾಧಾರಣಂ ಚ ದರ್ಶಯೇತ್ ॥೩೩॥**

**ಮೂಲೇನ ನಮಸ್ಕಾರಂ ವಿಜ್ಞಾಪ್ಯ ವಾಹನಸ್ಥಾಪನ ಸನ್ನಿರೋಧ ಸಾನ್ನಿಧ್ಯ ಪಾದ್ಯಾಚಮನೀಯಾರ್ಘ್ಯಾಂ ಗಂಧಪುಷ್ಪಧೂಪ ದೀಪ ನೈವೇದ್ಯಾಚಮನೀಯು ಹಸ್ತೋದ್ವರ್ತನ ಮುಖವಾಸಾದ್ಯುಪಚಾರ ಯುಕ್ತಂ ಬ್ರಹ್ಮಾಂಗಭೋಗ ಮಾರ್ಗೇಣ ಪೂಜಯೇತ್ ॥**

**ಸಕಲಧ್ಯಾನಂ ನಿಷ್ಕಲಸ್ಮರಣಂ ಪರಾವರಧ್ಯಾನಂ ಮೂಲ ಮಂತ್ರ ಜಪಃ, ದಶಾಂಶಂ ಬ್ರಹ್ಮಾಂಗ ಜಪಸಮರ್ಪಣ ಮಾತ್ಮನಿವೇದನ ಸ್ತುತಿನಮಸ್ಕಾರಾದಯಶ್ಚ ಗುರು ಪೂಜಾ ಚ ಪೂರ್ವತೋ ದಕ್ಷಿಣೇ ವಿನಾಯಕಸ್ಯ ॥೩೫॥**

---

೩೨. ಧೂಪ ಆಚಮನ ದೀಪನೈವೇದ್ಯಾದಿಗಳನ್ನು ಪಂಚಾಕ್ಷರೀ ಮಂತ್ರದಿಂದ ಸಮರ್ಪಿಸಿದ ಬಳಿಕ ಲಿಂಗದ ನೆತ್ತಿಯಮೇಲೆ ಓಂಕಾರ ದಿಂದ ಪೂಜೆಯು ಪವಿತ್ರೀಕರಣವೆನಿಸುವುದು.

೩೩. ಆರತಿ ದೀಪಾದಿಗಳನ್ನು ಧೇನುಮುದ್ರೆಯನ್ನು ತೋರಿಸಿ ಕವಚದಿಂದ ಮುಚ್ಚಿ ನಮೋಹಿರಣ್ಯಬಾಹವೇ ಎಂಬ ಮಂತ್ರದಿಂದ ರಕ್ಷಿಸಿ ಲಿಂಗದ ನೆತ್ತಿ ಮಧ್ಯ ಪ್ರದೇಶ ಕೆಳಭಾಗಗಳಲ್ಲಿ ಸಮಾನವಾಗಿ ತೋರಿಸಬೇಕು.

೩೪. ಮೂಲಮಂತ್ರವಾದ ಪಂಚಾಕ್ಷರ ಮಂತ್ರದಿಂದ ನಮಸ್ಕಾರ ವನ್ನು ಮಾಡಿದಮೇಲೆ ಆವಾಹನೆ ಸ್ಥಾಪನ ಇವುಗಳನ್ನು ಮೊದಲುಮಾಡಿ ಕೊಂಡು ಮುಖವಾಸ ಸಮರ್ಪಣಾಂತವಾದ ಉಪಚಾರಗಳನ್ನು ನಿವೇದ ನಮಾಡಿ ಪಂಚಬ್ರಹ್ಮ ಮಂತ್ರರೂಪವಾದ ಅಂಗಗಳಿಗೆ ಉಪಚಾರ ಮಾಡುವ ಕ್ರಮದಿಂದ ಪೂಜೆಯನ್ನು ಮಾಡಬೇಕು.

**೩೫.** ಆಮೇಲೆ ಸಕಲವಾದ ಲಿಂಗಮೂರ್ತ್ಯಾದಿಗಳ ಧ್ಯಾನವನ್ನೂ

**ಆದೌ ಚಾಂತೇ ಚ ಸಂಪೂಜ್ಯೋ ವಿಘ್ನೇಶೋ ಜಗದೀಶ್ವರಃ ।**
**ದೈವತೈಶ್ಚ ದ್ವಿಜೈಶ್ಚೈವ ಸರ್ವಕಾಮಾರ್ಥ ಸಿದ್ಧಯೇ ॥೩೬॥**
**ಯಃ ಶಿವಂ ಪೂಜಯೇದ್ದೇವಂ ಲಿಂಗೇ ವಾ ಸ್ಥಂಡಿಲೇಽಪಿ ವಾ ।**
**ಸ ಯಾತಿ ಶಿವ ಸಾಯುಜ್ಯಂ ವರ್ಷಮಾತ್ರೇಣ ಕರ್ಮಣಾ ॥೩೭॥**
**ಲಿಂಗಾರ್ಚಕಶ್ಚ ಷಣ್ಮಾಸಾನ್ಮಾತ್ರ ಕಾರ್ಯಾ ವಿಚಾರಣಾ ।**
**ಸಪ್ತ ಪ್ರದಕ್ಷಿಣಾಃ ಕೃತ್ವಾ ದಂಡವತ್ಪ್ರಣಮೇದ್ಬುಧಃ ॥೩೮॥**
**ಪ್ರದಕ್ಷಿಣಕ್ರಮ ಪಾದೇನ ಅಶ್ವಮೇಧಫಲಂ ಶತಂ ।**
**ತಸ್ಮಾತ್ಸಂ ಪೂಜಯೇನ್ನಿತ್ಯಂ ಸರ್ವಕಾಮಾರ್ಥ ಸಿದ್ಧಯೇ ॥೩೯॥**

---

ನಿರ್ವಿಕಲ್ಪವಾದ ಆತ್ಮಸ್ವರೂಪದ ಸ್ಮರಣೆಯನ್ನೂ ಪರಾಪರ ವಸ್ತುವಾದ ಸದಾಶಿವನ ಧ್ಯಾನವನ್ನೂ ಮೂಲಮಂತ್ರ ಜಪವನ್ನೂ ಮಾಡಬೇಕು. ಮೂಲಮಂತ್ರ ಜಪಸಂಖ್ಯೆಯ ಹತ್ತನೆಯ ಒಂದು ಭಾಗದಷ್ಟು ಬ್ರಹ್ಮಾಂಗ ಜಪವನ್ನು ಮಾಡಿ ಜಪ ಸಮರ್ಪಣೆಯನ್ನು ಮಾಡಬೇಕು. ತರುವಾಯ ಆತ್ಮನಿವೇದನ ಸ್ತೋತ್ರ ನಮಸ್ಕಾರಾದಿಗಳನ್ನು ಮಾಡಿದಮೇಲೆ ಪೂರ್ವ ದಿಕ್ಕಿನಲ್ಲಿ ಗುರುಪೂಜೆಯನ್ನೂ ದಕ್ಷಿಣದಿಕ್ಕಿನಲ್ಲಿ ವಿನಾಯಕನ ಪೂಜೆಯನ್ನೂ ಮಾಡಬೇಕು. ಇದೇ ಉತ್ತರಾಂಗ ಪೂಜೆಯು.

೩೬. ಜಗದೀಶ್ವರನಾದ ವಿಘ್ನೇಶ್ವರನನ್ನು ಶಿವಪೂಜೆಯ ಆದಿಯಲ್ಲಿಯೂ ಅಂತ್ಯದಲ್ಲಿಯೂ ಅವಶ್ಯಕವಾಗಿ ಮಾಡಬೇಕು. ದೇವತೆಗಳಾಗಲಿ ದ್ವಿಜರಾಗಲಿ ಹೀಗೆ ಗಣಪತಿಯ ಪೂಜೆಯನ್ನು ಮಾಡಿದರೆ ಅವರ ಸಮಸ್ತ ಇಷ್ಟಾರ್ಥಗಳೂ ಸಿದ್ಧಿಸುವುವು.

೩೭. ಯಾವ ಮನುಜನು ಲಿಂಗದಲ್ಲಿಯಾಗಲಿ ನೆಲದಮೇಲೆ ಮಂಡಲಗಳನ್ನು ರಚಿಸಿಯಾಗಲಿ ದೇವನಾದ ಶಿವನ ಪೂಜೆಯನ್ನು ಮಾಡುವನೋ ಅವನು ಒಂದು ವರ್ಷ ಈ ಕರ್ಮವನ್ನು ಆಚರಿಸಿದ ಮಾತ್ರದಿಂದಲೇ ಶಿವಸಾಯುಜ್ಯ ರೂಪವಾದ ಮೋಕ್ಷವನ್ನು ಪಡೆಯುವನು.

೩೮-೩೯. ಲಿಂಗವನ್ನು ಪೂಜೆಮಾಡಿದವನಿಗೆ ಆರು ತಿಂಗಳಲ್ಲಿಯೇ ಮೇಲೆ ಹೇಳಿದ ಫಲವು ಪ್ರಾಪ್ತವಾಗುವುದರಲ್ಲಿ ಸಂದೇಹವಿಲ್ಲ. ಏಳು

ಭೋಗಾರ್ಥೀ ಭೋಗಮಾಪ್ನೋತಿ ರಾಜ್ಯಾರ್ಥೀ ರಾಜ್ಯಮಾಪ್ನು
ಯಾತ್। ಪುತ್ರಾರ್ಥೀ ತನಯಂ ಶ್ರೇಷ್ಠಂ ರೋಗೀ ರೋಗಾತ್ಪ್ರ
ಮುಚ್ಯತೇ॥ ॥೪೦॥

ಯಾನ್ಯಾಂಶ್ಚಿಂತಯತೇ ಕಾಮಾಂಸ್ತಾಂಸ್ತಾನ್
ಪ್ರಾಪ್ನೋತಿ ಮಾನವಃ ॥೪೧॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ಚತುರ್ವಿಂಶತಿ
ತಮೋಽಧ್ಯಾಯಃ

---

ಪ್ರದಕ್ಷಿಣೆಯನ್ನು ಮಾಡಿ ಭೂಮಿಯಮೇಲೆ ಸಾಷ್ಟಾಂಗ ನಮಸ್ಕಾರ ವನ್ನು ಮಾಡಬೇಕು. ವಿದ್ವಾಂಸನಾದವನು ಶಿವಲಿಂಗಕ್ಕೆ ಪ್ರದಕ್ಷಿಣೆ ಯನ್ನು ಮಾಡುವಾಗ ಒಂದೊಂದು ಹೆಜ್ಜೆಗೂ ನೂರು ಅಶ್ವಮೇಧ ಯಜ್ಞವನ್ನು ಮಾಡಿದುದಕ್ಕೆ ಸಮವಾದ ಫಲವನ್ನು ಹೊಂದುವನು. ಆ ಕಾರಣದಿಂದ ಸಮಸ್ತವಾದ ಇಷ್ಟಾರ್ಥಗಳ ಸಿದ್ಧಿಗಾಗಿ ಪ್ರತಿದಿನವೂ ಲಿಂಗಪೂಜೆಯನ್ನು ಮಾಡಬೇಕು.

೪೦. ಸುಖಾಪೇಕ್ಷೆಯುಳ್ಳವನು ಸುಖವನ್ನೂ ರಾಜ್ಯಾಪೇಕ್ಷೆಯುಳ್ಳ ವನು ರಾಜ್ಯವನ್ನೂ ಪುತ್ರಾಪೇಕ್ಷೆಯುಳ್ಳವನು ಉತ್ತಮನಾದ ಪುತ್ರನನ್ನೂ ರೋಗವುಳ್ಳವನು ರೋಗದ ಬಿಡುಗಡೆಯನ್ನೂ ಪಡೆವರು.

೪೧. ಲಿಂಗಪೂಜೆಯಿಂದ ಮನುಷ್ಯನು ಯಾವಯಾವ ಇಷ್ಟಾರ್ಥ ಗಳನ್ನು ಬಯಸುವನೋ ಅವುಗಳೆಲ್ಲವನ್ನೂ ಪಡೆಯುವನು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಇಪ್ಪತ್ತುನಾಲ್ಕನೆಯ
ಅಧ್ಯಾಯವು ಮುಗಿದುದು

## ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
## ಪಂಚವಿಂಶತಿತಮೋಽಧ್ಯಾಯಃ

॥ ಶೈಲಾದಿ ರುವಾಚ ॥

**ಶಿವಾಗ್ನಿಕಾರ್ಯಂ ವಕ್ಷ್ಯಾಮಿ ಶಿವೇನ ಪರಿಭಾಷಿತಂ ।**
**ಜನಯಿತ್ವಾಽಗ್ರತಃ ಪ್ರಾಚೀಂ ಶುಭೇ ದೇಶೇ ಸುಸಂಸ್ಕೃತೇ ॥ ೧ ॥**
**ಪೂರ್ವಾಗ್ರಮುತ್ತರಾಗ್ರಂ ಚ ಕುರ್ಯಾತ್ಸೂತ್ರತ್ರಯಂ ಶುಭಂ ।**
**ಚತುರಸ್ರೇ ಕೃತೇ ಕ್ಷೇತ್ರೇ ಕುರ್ಯಾತ್ಕುಂಡಾನಿ ಯತ್ನತಃ ॥**
**ನಿತ್ಯಹೋಮಾಗ್ನಿ ಕುಂಡಂ ಚ ತ್ರಿಮೇಖಲ ಸಮಾಯುತಂ ।**
**ಚತುಸ್ತ್ರಿದ್ವ್ಯಂಗುಲಾ ಯಾಮಾ ಮೇಖಲಾ ಹಸ್ತ ಮಾತ್ರತಃ ॥ ೩ ॥**

---

### ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಇಪ್ಪತ್ತೈದನೆಯ ಅಧ್ಯಾಯವು

೧–೨. ನಂದೀಶ್ವರನು ಹೇಳಿದನು :—ಎಲೈ ಸನತ್ಕುಮಾರ ಮುನಿಯೇ, ಶಿವನೇ ಹೇಳಿದ ಶಿವಾಗ್ನಿ ಕಾರ್ಯದ ಕ್ರಮವನ್ನು ಹೇಳುವೆನು. ಚೆನ್ನಾಗಿ ಶುದ್ಧಿಮಾಡಿದ ಮಂಗಳಕರವಾದ ಪ್ರದೇಶದಲ್ಲಿ ಪೂರ್ವ ದಿಕ್ಕಿನಲ್ಲಿ ಯಜಮಾನನ ಮುಂಭಾಗದಲ್ಲಿ ಒಂದು ಸ್ಥಳವನ್ನು ಗೊತ್ತು ಮಾಡಿ ಪೂರ್ವಾಗ್ರವಾಗಿಯೂ ಉತ್ತರಾಗ್ರವಾಗಿಯೂ ಮಂಗಳಕರವಾದ ಮೂರು ದಾರಗಳನ್ನು ಇಟ್ಟು ಚೌಕವಾದ ನಾಲ್ಕು ಮೂಲೆಗಳುಳ್ಳ ಒಂದು ಪ್ರದೇಶದಲ್ಲಿ ಪ್ರಯತ್ನ ಪೂರ್ವಕವಾಗಿ ಮುಂದೆ ಹೇಳುವಂತೆ ಅಗ್ನಿಕುಂಡಗಳನ್ನು ಮಾಡಬೇಕು.

೩. ಪ್ರತಿದಿನವೂ ಹೋಮವನ್ನು ಮಾಡುವುದಕ್ಕಾಗಿ ಇರಬೇಕಾದ ಅಗ್ನಿಕುಂಡವು ಮೂರುಮೇಖಲೆ (ಆವರಣ) ಗಳಿಂದ ಕೂಡಿರಬೇಕು. ಆ ಮೇಖಲೆಯು ಒಂದು ಮೊಳ ಉದ್ದ ಮತ್ತು ಅಂಗುಲಗಳಲ್ಲಿ ನಾಲ್ಕು ಮೂರು ಎರಡು ಅಂಗುಲಗಳ ವಿಸ್ತಾರವುಳ್ಳದಾಗಿರಬೇಕು.

ಹಸ್ತಮಾತ್ರಂ ಭವೇತ್ಕುಂಡಂ ಯೋನಿಃ ಪ್ರಾದೇಶಮಾತ್ರತಃ ।
ಅಶ್ವತ್ಥ ಪತ್ರವದ್ಯೋನಿಂ ಮೇಖಲೋಪರಿ ಕಲ್ಪಯೇತ್ ॥ ೪ ॥
ಕುಂಡ ಮಧ್ಯೇ ತು ನಾಭಿಃ ಸ್ಯಾದಷ್ಟ ಪತ್ರಂ ಸಕರ್ಣಿಕಂ ।
ಪ್ರಾದೇಶಮಾತ್ರಂ ವಿಧಿನಾ ಕಾರಯೇದ್ಬ್ರಹ್ಮಣಃ ಸುತ ॥ ೫ ॥
ಷಷ್ಠೇನೋಲ್ಲೇಖನಂ ಪ್ರೋಕ್ತಂ ಪ್ರೋಕ್ಷಣಂ ವರ್ಮಣಾ ಸ್ಮೃತಂ।
ನೇತ್ರೇಣಾ ಲೋಕ್ಯ ವೈ ಕುಂಡಂ ಷಡ್ರೇಖಾಃ ಕಾರಯೇದ್ಬುಧಃ ॥
ಪ್ರಾಗಾಯತೇನ ವಿಪ್ರೇಂದ್ರ ಬ್ರಹ್ಮವಿಷ್ಣು ಮಹೇಶ್ವರಾಃ ।
ಉತ್ತರಾಗ್ರಾಃ ಶಿವಾ ರೇಖಾಃ ಪ್ರೋಕ್ಷಯೇದ್ವರ್ಮಣಾ ಪುನಃ ॥
ಶಮೀಪಿಪ್ಪಲ ಸಂಭೂತಾ ಮರಣಿಂ ಷೋಡಶಾಂಗುಲಾಂ ।
ಮಥಿತ್ವಾ ವಹ್ನಿಬೀಜೇನ ಶಕ್ತಿನ್ಯಾಸಂ ಹೃದೈವ ತು ॥ ೮ ॥

---

೪. ಅಗ್ನಿಕುಂಡವು ಒಂದು ಮೊಳ ಮಾತ್ರ ಆಳವಿರಬೇಕು. ಯೋನಿಯು ಒಂದು ಚೋಟು ಇರಬೇಕು. ಮೇಖಲೆಯಮೇಲೆ ಅರಳಿಯ ಎಲೆಯ ಆಕಾರವಾಗಿ ಯೋನಿಯನ್ನು ಕಲ್ಪಿಸಬೇಕು.

೫. ಬ್ರಹ್ಮಪುತ್ರನಾದ ಸನತ್ಕುಮಾರನೇ, ಅಗ್ನಿಕುಂಡದ ನಡುವೆ ಒಂದು ಚೋಟು ವಿಸ್ತಾರವಾಗಿ ಎಂಟು ಪತ್ರಗಳು ಕರ್ಣಿಕೆ ಸಹ ಇರುವ ನಾಭಿ ಎಂಬ ಮಧ್ಯ ಪ್ರದೇಶವನ್ನು ರಚಿಸಬೇಕು.

೬. ಅಸ್ತ್ರಮಂತ್ರವಾದ ಫಟ್ ಎಂಬುದರಿಂದ ಉಲ್ಲೇಖನವನ್ನೂ ಕವಚ ಮಂತ್ರವಾದ ಹುಂ ಎಂಬುದರಿಂದ ಪ್ರೋಕ್ಷಣವನ್ನು ಮಾಡಿ ಕುಂಡವನ್ನು ಕಣ್ಣಿನಿಂದ ನೋಡಿ ಆರು ರೇಖೆಗಳನ್ನು ಮಾಡಬೇಕು.

೭. ಪಶ್ಚಿಮದಿಂದ ಪೂರ್ವಕ್ಕೂ ದಕ್ಷಿಣದಿಂದ ಉತ್ತರಕ್ಕೂ ಬ್ರಹ್ಮಾ, ವಿಷ್ಣು, ಮಹೇಶ್ವರ ಸ್ವರೂಪವಾದ ಮೂರುಮೂರು ರೇಖೆಗಳನ್ನು ಬರೆದು ಮತ್ತೆ ಹುಂ ಎಂಬ ಕವಚಮಂತ್ರದಿಂದ ಪ್ರೋಕ್ಷಿಸಬೇಕು.

೮. ಬನ್ನಿ ಮತ್ತು ಅರಳಿಯ ಮರಗಳಿಂದ ಮಾಡಿದ ಹದಿನಾರು ಅಂಗುಲ ಅಗಲವಾದ ಅರಣಿಯನ್ನು ಅಗ್ನಿಬೀಜಾಕ್ಷರವಾದ ರಂ ಎಂಬ

ಪ್ರಕ್ಷಿಪೇದ್ವಿಧಿನಾ ವಹ್ನಿಮನ್ವಾಧಾಯ ಯಥಾವಿಧಿ ।
ತೂಷ್ಣೀಂ ಪ್ರಾದೇಶ ಮಾತ್ರೈಸ್ತು ಯಾಜ್ಞಿಕೈಃ ಶಕಲೈಃ ಶುಭೈಃ ॥
ಪರಿಸಂಮೋಹನಂ ಕುರ್ಯಾಜ್ಜಲೇನಾಷ್ಟಸು ದಿಕ್ಷ್ವಪಿ ।
ಪರಿಸ್ತೀರ್ಯ ವಿಧಾನೇನ ಪ್ರಾಗಾದ್ಯೇವ ಮನುಕ್ರಮಾತ್ ॥೧೦॥
ಉತ್ತರಾಗ್ರಂ ಪುರಸ್ತಾದ್ಧಿ ಪ್ರಾಗಗ್ರಂ ದಕ್ಷಿಣೇ ಪುನಃ ।
ಪಶ್ಚಿಮೇ ಚೋತ್ತರಾಗ್ರಂ ತು ಸೌಮ್ಯೇ ಪೂರ್ವಾಗ್ರಮೇವ ತು ॥
ಐಂದ್ರೇ ಚೈಂದ್ರಾಗ್ನಮಾವಾಹ್ಯ ಯಾಮ್ಯ ಏವಂ ವಿಧೀಯತೇ ।
ಸೌಮ್ಯಸ್ಯೋಪರಿ ಚಾಂದ್ರಾಗ್ನಂ ವಾರುಣಾಗ್ನಮಧಸ್ತತಃ ॥೧೨॥

---

ಮಂತ್ರವನ್ನುಚ್ಚರಿಸುತ್ತ ಕಡೆದು ಹೃದಯ ಮಂತ್ರದಿಂದ ಶಕ್ತಿನ್ಯಾಸವನ್ನು ಮಾಡಬೇಕು.

೯. ವಿಧಿಗನುಸಾರವಾಗಿ ಅಗ್ನಿಕುಂಡದಲ್ಲಿ ಅಗ್ನಿಯನ್ನು ಪ್ರತಿಷ್ಠೆ ಮಾಡಿ ಒಂದು ಚೋಟು ಉದ್ದದ, ಯಜ್ಞಕ್ಕೆ ಉಪಯೋಗಿಸುವ, ಸಮಿತ್ತುಗಳಿಂದ ಅನ್ವಾಧಾನವನ್ನು ಮಾಡಬೇಕು.

೧೦. ನೀರಿನಿಂದ ಅಗ್ನಿಕುಂಡದ ಎಂಟು ದಿಕ್ಕುಗಳಲ್ಲಿಯೂ ಪರಿಸಮೂಹನವನ್ನು ಮಾಡಿ ಪೂರ್ವಾದಿಯಾಗಿ ಮುಂದೆ ಹೇಳುವ ಮಂತ್ರದಿಂದ ಪರಿಸ್ತರಣವನ್ನು ಹಾಕಬೇಕು.

೧೧. ಪೂರ್ವದಿಕ್ಕಿನಲ್ಲಿ ಉತ್ತರಾಗ್ರವಾಗಿಯೂ ದಕ್ಷಿಣದಿಕ್ಕಿನಲ್ಲಿ ಪೂರ್ವಾಗ್ರವಾಗಿಯೂ ಪಶ್ಚಿಮದಲ್ಲಿ ಉತ್ತರಾಗ್ರವಾಗಿಯೂ ಉತ್ತರದಲ್ಲಿ ಪೂರ್ವಾಗ್ರವಾಗಿಯೂ ದರ್ಭೆಗಳಿಂದ ಪರಿಸ್ತರಣಗಳನ್ನು ಹಾಕಬೇಕು.

೧೨. ಪೂರ್ವದಿಕ್ಕಿನಲ್ಲಿ ಐಂದ್ರಾಗ್ನಿಯನ್ನೂ ದಕ್ಷಿಣದಲ್ಲಿ ಯಾಮ್ಯಾಗ್ನಿಯನ್ನೂ ಉತ್ತರದಿಕ್ಕಿನಲ್ಲಿ ಚಾಂದ್ರಾಗ್ನಿಯನ್ನೂ ಪಶ್ಚಿಮದಿಕ್ಕಿನಲ್ಲಿ ವಾರುಣಾಗ್ನಿಯನ್ನೂ ದಿಗ್ದೇವತಾವಾಹನೆಯನ್ನೂ ಮಾಡಬೇಕು.

ದ್ವಂದ್ವರೂಪೇಣ ಪಾತ್ರಾಣಿ ಬರ್ಹಿಷ್ಯಾಸಾದ್ಯ ಸುವ್ರತ ।
ಅಧೋಮುಖಾನಿ ಸರ್ವಾಣಿ ದ್ರವ್ಯಾಣಿ ಚ ತಥೋತ್ತರೇ ॥೧೩॥
ತಸ್ಯೋಪರಿ ನ್ಯಸೇದ್ದರ್ಭಾನ್ ಶಿವಂ ದಕ್ಷಿಣತೋ ನ್ಯಸೇತ್ ।
ಪೂಜಯೇನ್ಮೂಲ ಮಂತ್ರೇಣ ಪಶ್ಚಾದ್ಧೋಮಂ ಸಮಾಚರೇತ್ ॥
ಪ್ರೋಕ್ಷಣೀ ಪಾತ್ರಮಾದಾಯ ಪೂರಯೇದಂಬುನಾ ಪುನಃ ।
ಪ್ರಾದೇಶಮಂತ್ರೌ ತು ಕುಶೌ ಸ್ಥಾಪಯೇದುದಕೋಪರಿ ॥೧೫॥
ಪ್ಲಾವಯೇಚ್ಚ ಕುಶಾಗ್ರಂ ತು ವಸೋಃ ಸೂರ್ಯಸ್ಯರಶ್ಮಿಭಿಃ ।
ವಿಕೀರ್ಯ ಸರ್ವಪಾತ್ರಾಣಿ ಸುಸಂಪ್ರೋಕ್ಷ್ಯ ವಿಧಾನತಃ ॥೧೬॥
ಪ್ರಣೀತಾಪಾತ್ರ ಮಾದಾಯ ಪೂರಯೇದಂಬುನಾ ಪುನಃ ।
ಅನ್ಯೋದಕ ಕುಶಾಗ್ರೈಸ್ತು ಸಮ್ಯಗಾಚ್ಛಾದ್ಯ ಸುವ್ರತ ॥೧೭॥

---

೧೩–೧೪. ಉತ್ತರದಿಕ್ಕಿನಲ್ಲಿ ಹಾಕಿದ ದರ್ಭೆಯಮೇಲೆ ಎರಡೆರಡು ಪಾತ್ರೆಗಳನ್ನು ಅಧೋಮುಖವಾಗಿ ಇಟ್ಟು ಅವುಗಳಮೇಲೆ ದರ್ಭೆಯನ್ನು ಹಾಕಬೇಕು. ದಕ್ಷಿಣದಿಕ್ಕಿನಲ್ಲಿ ಶಿವಲಿಂಗವನ್ನಿಟ್ಟು ಪಂಚಾಕ್ಷರ ಮಂತ್ರದಿಂದ ಪೂಜೆಯನ್ನು ಮಾಡಿದಮೇಲೆ ಹೋಮವನ್ನು ಮಾಡಬೇಕು.

೧೫–೧೬. ಪ್ರೋಕ್ಷಣಪಾತ್ರೆಯನ್ನು ' ತೆಗೆದುಕೊಂಡು ನೀರನ್ನು ತುಂಬಿ ಅದರಮೇಲೆ ಚೋಟು ಉದ್ದದ ಎರಡು ದರ್ಭೆಗಳನ್ನಿಟ್ಟು, ವಸೋಃ ಸೂರ್ಯಸ್ಯರಶ್ಮಿಭಿಃ'' ಎಂಬ ಮಂತ್ರದಿಂದ ಆ ನೀರನ್ನು ದರ್ಭೆಯಿಂದ ಎಲ್ಲ ಪಾತ್ರೆಗಳ ಮೇಲೂ ಪ್ರೋಕ್ಷಿಸಬೇಕು.

೧೭. ಪ್ರಣೀತಾ ಪಾತ್ರೆಯನ್ನು ತೆಗೆದುಕೊಂಡು ಪ್ರೋಕ್ಷಣ ಪಾತ್ರೆಯ ನೀರನ್ನು ತುಂಬಿ ದರ್ಭೆಗಳಿಂದ ಮುಚ್ಚಿ ಎರಡು ಕೈಗಳಿಂದಲೂ ಮೂಗಿನ ಪರ್ಯಂತವಾಗಿ ಎತ್ತಿ ಆ ಪಾತ್ರೆಯನ್ನು ಈಶಾನ್ಯ ದಿಕ್ಕಿನಲ್ಲಿ ಇರಿಸಬೇಕು.

ಹಸ್ತಾಭ್ಯಾಂ ನಾಸಿಕಂ ಪಾತ್ರಮೈಶಾನ್ಯಾಂ ದಿಶಿ ವಿನ್ಯಸೇತ್ ।
ಆಜ್ಯಾಧಿಶ್ರಯಣಂ ಕುರ್ಯಾತ್ಪಶ್ಚಿಮೋತ್ತರತಃ ಶುಭಂ ॥೧೮॥
ಭಸ್ಮಮಿಶ್ರಾಂಸ್ತಥಾಽಂಗಾರಾನ್ ಗ್ರಾಹಯೇತ್ಸಕಲೇನ ವೈ ।
ಪಶ್ಚಿಮೋತ್ತರ ತೋ ನೀತ್ವಾ ತತ್ರ ಚಾಜ್ಯಂ ಪ್ರತಾಪಯೇತ್ ॥
ಕುಶಾನಗ್ನೌ ತು ಪ್ರಜ್ವಾಲ್ಯ ಪರ್ಯಗ್ನಿಂ ತ್ರಿಭಿರಾಚರೇತ್ ।
ತಾನ್ಸರ್ವಾಂಸ್ತತ್ರ ನಿಕ್ಷಿಪ್ಯ ಚಾಗ್ರೇ ಚಾಜ್ಯಂ ನಿಧಾಪಯೇತ್ ॥
ಅಂಗುಷ್ಠಮಾತ್ರೌ ತು ಕುಶೌ ಪ್ರಕ್ಷಾಲ್ಯ ವಿಧಿನೈವ ತು ।
ಪರ್ಯಗ್ನಿಂ ಚ ತತಃ ಕುರ್ಯಾತ್ತೈರೇವ ನವಭಿಃ ಪುನಃ ॥೨೧॥
ಪರ್ಯಗ್ನಿಂ ಚ ಪುನಃ ಕುರ್ಯಾತ್ತದಾಜ್ಯಮವರೋಪಯೇತ್ ।
ಅಥಾಪಕರ್ಷಯೇತ್ಪಾತ್ರಂ ಕ್ರಮೇಣೋತ್ತರ ಪಶ್ಚಿಮೇ ॥೨೨॥
ಸಂಯುಜ್ಯ ಚಾಗ್ನಿಂ ಕಾಷ್ಠೇನ ಪ್ರಕ್ಷಾಲ್ಯಾರೋಪ್ಯ ಪಶ್ಚಿಮೇ ।
ಆಜ್ಯಸ್ಯೋತ್ಪವನಂ ಕುರ್ಯಾತ್ಪವಿತ್ರಾಭ್ಯಾಂ ಸಹೈವ ತು ॥೨೩॥

---

೧೮–೧೯. ಬಳಿಕ ಮಂಗಳಕರವಾಗಿ ವಾಯುವ್ಯದಿಕ್ಕಿನಲ್ಲಿ ಬೂದಿಯೊಡನೆ ಮಾಡಿದ ಕೆಂಡವನ್ನಿಟ್ಟು ಅದರಮೇಲೆ ತುಪ್ಪದ ಪಾತ್ರೆಯನ್ನಿಟ್ಟು ತುಪ್ಪವನ್ನು ಕರಗಿಸಬೇಕು.

೨೦. ದರ್ಭೆಗಳನ್ನು ಅಗ್ನಿಯಲ್ಲಿ ಹತ್ತಿಸಿ ತುಪ್ಪದ ಪಾತ್ರೆಯ ಸುತ್ತಲೂ ಮೂರಾವೃತ್ತಿ •ಪರ್ಯಗ್ನಿಕರಣವನ್ನು ಮಾಡಿ ಅಗ್ನಿಯ ಸಮೀಪದಲ್ಲಿ ತುಪ್ಪದ ಪಾತ್ರೆಯನ್ನಿಡಬೇಕು.

೨೧. ಹೆಬ್ಬೆರಳಿನ ಅಳತೆಯ ಎರಡು ದರ್ಭಾಗ್ರಗಳನ್ನು ನೀರಿನಲ್ಲಿ ತೊಳೆದು ತುಪ್ಪದ ಪಾತ್ರೆಯೊಳಕ್ಕೆ ಹಾಕಿ ಹಿಂದಿನ ಒಂಬತ್ತು ದರ್ಭೆಗಳಿಂದ ಪರ್ಯಗ್ನಿಕರಣವನ್ನು ಪುನಃ ಮಾಡಿ ತುಪ್ಪದ ಪಾತ್ರೆಯನ್ನು ಆ ಕೆಂಡದಮೇಲಿನಿಂದ ಇಳಿಸಬೇಕು.

೨೨–೨೪. ಆ ತುಪ್ಪದ ಪಾತ್ರೆಯನ್ನು ವಾಯುವ್ಯಕ್ಕೆ ಎಳೆದು ಕರಗಿಸುವುದಕ್ಕಾಗಿ ಹಾಕಿದ್ದ ಕೆಂಡವನ್ನು ಮತ್ತೆ ಅಗ್ನಿಯ ಪಶ್ಚಿಮ

ಪೃಥಗಾದಾಯ ಹಸ್ತಾಭ್ಯಾಂ ಪ್ರವಾಹೇಣ ಯಥಾ ಕ್ರಮಂ ।
ಅಂಗುಷ್ಠಾನಾಮಿಕಾಭ್ಯಾಂ ತು ಉಭಾಭ್ಯಾಂ ಮೂಲವಿದ್ಯಯಾ ॥

ಅಭ್ಯುಕ್ಷ್ಯ ದಾಪಯೇದಗ್ನೌ ಪವಿತ್ರೇ ಘೃತಪಂಕಿಲೇ ।
ಸೌವರ್ಣಂ ಸ್ರುಕ್ಸ್ರುವಂ ಕುರ್ಯಾದ್ರತ್ನಿ ಮಾತ್ರೇಣ ಸುವ್ರತ ॥

ರಾಜತಂ ವಾ ಯಥಾನ್ಯಾಯಂ ಸರ್ವಲಕ್ಷಣ ಸಂಯುತಂ ।
ಅಥವಾ ಯಾಜ್ಞಿಕೈರ್ವೃಕ್ಷೈಃ ಕರ್ತವ್ಯೌ ಸ್ರುಕ್ಸ್ರುವಾವುಭೌ ॥

ಅರತ್ನಿಮಾತ್ರಮಾಯಾಮಂ ತತ್ಪೋತ್ರೇ ತು ಬಿಲಂ ಭವೇತ್ ।
ಷಡಂಗುಲ ಪರೀಣಾಹಂ ದಂಡಮೂಲಂ ಮಹಾಮುನೇ ॥೨೭॥

ತದರ್ಧಂ ಕಂಠನಾಲಂ ಸ್ಯಾತ್ಪುಷ್ಕರಂ ಮೂಲವದ್ಭವೇತ್ ।
ಗೋವಾಲ ಸದೃಶಂ ದಂಡಂ ಸ್ರುವಾಗ್ರಂ ನಾಸಿಕಾಸಮಂ ॥೨೮॥

---

ದಿಕ್ಕಿನಲ್ಲಿ ಹಾಕಿ ಎರಡು ದರ್ಭೆಗಳಿಂದ ತುಪ್ಪವನ್ನು ಕಲಿಸಬೇಕು. ಹೇಗೆಂದರೆ:—ಎರಡು ಕೈಗಳ ಹೆಬ್ಬೆರಳು ಮತ್ತು ಅನಾಮಿಕ ಬೆರಳುಗಳಿಂದ ದರ್ಭೆಗಳ ತುದಿಯನ್ನು ಹಿಡಿದುಕೊಂಡು ಮೂಲಮಂತ್ರವಾದ ಪಂಚಾಕ್ಷರ ಮಂತ್ರದಿಂದ ತುಪ್ಪವನ್ನು ಕಲೆಸಬೇಕು.

ತುಪ್ಪವು ಬಳಿದುಕೊಂಡಿರುವ ಆ ಎರಡು ದರ್ಭೆಗಳನ್ನು ನೀರಿನಲ್ಲಿ ತೊಳೆದು ಅಗ್ನಿಯಲ್ಲಿ ಹೋಮಮಾಡಬೇಕು.

೨೫–೨೮. ತುಪ್ಪವನ್ನು ಹೋಮಮಾಡುವುದಕ್ಕೆ ಬೇಕಾದ ಸ್ರುಕ್ಕುಸ್ರುವ ಎಂಬೆರಡು ಪಾತ್ರೆಗಳನ್ನು ಚಿನ್ನ ಬೆಳ್ಳಿಗಳಲ್ಲಿ ಮಾಡಬೇಕು. ಅಥವಾ ಯಜ್ಞಕ್ಕೆ ಉಪಯೋಗವಾದ ಅತ್ತಿ ಅರಳಿ ಮುತ್ತುಗ ಮುಂತಾದ ಮರಗಳಲ್ಲಿ ಮಾಡಬೇಕು. ಆ ಪಾತ್ರೆಗಳು ಸೌಟನಂತೆ ಒಂದು ಮೊಳ ಉದ್ದವಿರಬೇಕು. ಆದರ ಮುಖಗಳು ಹಳ್ಳವಾಗಿರಬೇಕು. ಹಿಂದಿನ ಕಾವು ಒಂಬತ್ತಂಗುಲ ಉದ್ದ, ಮುಖವು ಆರಂಗುಲ ಉದ್ದವಿದ್ದು ಹಸುವಿನ, ಬಾಲದ ಆಕಾರದಲ್ಲಿ ದಂಡವೂ, ಮುಖವು ಮೂಗಿನ ಆಕಾರದಲ್ಲಿಯೂ ಇರಬೇಕು. ಎರಡಕ್ಕೂ ಬಟ್ಟಲುಗಳಿರಬೇಕು. ಮತ್ತು ಅವನ್ನು ಮುತ್ತು ಮುಂತಾದ ಮಂಗಳ ದ್ರವ್ಯಗಳಿಂದ ತುಂಬಿರಬೇಕು.

ಪುಟದ್ವಯ ಸಮಾಯುಕ್ತಂ ಮುಕ್ತಾದ್ಯೇನ ಪ್ರಪೂರಿತಂ ।
ಷಟ್ತ್ರಿಂಶದಂಗುಲಾಯಾಮ ಮಷ್ಟಾಂಗುಲ ಸವಿಸ್ತರಂ ॥೨೯॥
ಉತ್ಸೇಧಸ್ತು ತದರ್ಧಂ ಸ್ಯಾತ್ಸ್ರೂತ್ರೇಣ ಸಮಿತಂ ತತಃ ।
ಸಪ್ತಾಂಗುಲಂ ಭವೇದಾಸ್ಯಂ ವಿಸ್ತರಾಯಾಮತಃ ಪುನಃ ॥೩೦॥
ತ್ರಿಭಾಗೈಕಂ ಭವೇದಗ್ರಂ ಕೃತ್ವಾ ಶೇಷಂ ಪರಿತ್ಯಜೇತ್ ।
ಕಂಠಂ ಚ ದ್ವ್ಯಂಗುಲಾಯಾಮಂ ವಿಸ್ತಾರಂ ಚತುರಂಗುಲಂ ॥೩೧॥
ವೇದಿರಷ್ಟಾಂಗುಲಾಯಾಮಾ ವಿಸ್ತಾರಸ್ತತ್ಪ್ರಮಾಣತಃ ।
ತಸ್ಯ ಮಧ್ಯೇ ಬಿಲಂ ಕುರ್ಯಾಚ್ಚತುರಂಗುಲಮಾನತಃ ॥೩೨॥
ಬಿಲಂ ಸುವರ್ತಿತಂ ಕುರ್ಯಾದಷ್ಟಪತ್ರಂ ಸುಕರ್ಣಿಕಂ ।
ಪರಿತೋ ಬಿಲ ಬಾಹ್ಯೇ ತು ಪಟ್ಟಿಕಾರ್ಧಾಂಗುಲೇನ ತು ॥೩೩॥

---

೨೯-೩೧. ಪೂರ್ಣಾಹುತಿ ಮುಂತಾದುವುಗಳಿಗೆ ಉಪಯೋಗಿಸುವ ದೊಡ್ಡ ಸ್ರುವಗಳು ಉದ್ದ ಮೂವತ್ತಾರಂಗುಲವೂ ಅಗಲವು ಎಂಟಂಗುಲವೂ ಎತ್ತರವು ನಾಲ್ಕಂಗುಲವೂ ಇರಬೇಕು. ಅದರ ಬಟ್ಟಲಿನ ಉದ್ದ ಅಗಲಗಳು ಏಳಂಗುಲವಿರಬೇಕು. ಅಥವಾ ಒಟ್ಟನಲ್ಲಿ ಮೂರನೆಯ ಒಂದು ಭಾಗ ಅಂದರೆ ಹನ್ನೆರಡಂಗುಲ ಮುಖಭಾಗವನ್ನು ಮಾಡಿ ಮಿಕ್ಕುದನ್ನು ಬಿಡಬಹುದು. ಆಗ ಅದರ ಕುತ್ತಿಗೆಯು ಎರಡಂಗುಲ ಉದ್ದವೂ ನಾಲ್ಕು ಅಂಗುಲ ಅಗಲವೂ ಇರಬೇಕು.

೩೨-೩೪. ಅಗ್ನಿಕುಂಡದ ಜಗಲಿಯು ಎಂಟಂಗುಲ ಉದ್ದವಾಗಿ ಅಷ್ಟೇ ಅಗಲವಾಗಿ ಇರಬೇಕು. ಆ ವೇದಿಯ ನಡುವೆ ಒಂದು ರಂಧ್ರವನ್ನು ನಾಲ್ಕಂಗುಲ ಆಳತೆಯು ಇರುವಂತೆ ಮಾಡಬೇಕು. ಆ ರಂಧ್ರವು ಗುಂಡಾಗಿ ಎಂಟುದಳಕಮಲದಂತೆಯೂ ನಡುವೆ ಕರ್ಣಿಕೆ ಇರುವಂತೆಯೂ ಮಾಡಿರಬೇಕು. ಆ ರಂಧ್ರದ ಹೊರಗೆ ಸುತ್ತಲೂ ಅರ್ಧಂಗುಲದ ಪಟ್ಟಿ ಇರಬೇಕು. ಅದರ ಹೊರಗೆ ಕಮಲದಳವು ಅರಳಿದಂತೆ ವಿಚಿತ್ರವಾಗಿರಬೇಕು. ಅದರ ಹೊರಭಾಗದಲ್ಲಿ ಎರಡು ಗೋಧಿಯ ಕಾಳಿನ ಆಳತೆಯ ಪಟ್ಟಿಯು ಇರಬೇಕು.

ತದ್ಬಾಹ್ಯೇ ಚ ವಿನಿದ್ರಂ ತು ಪದ್ಮಪತ್ರವಿಚಿತ್ರಿತಂ ।
ಯುವದ್ವಯ ಪ್ರಮಾಣೇನ ತದ್ಬಾಹ್ಯೇ ಪಟ್ಟಿಕಾ ಭವೇತ್ ॥೩೪॥
ವೇದಿಕಾಮಧ್ಯತೋ ರಂಧ್ರಂ ಕನಿಷ್ಠಾಂಗುಲಮಾನತಃ ।
ಖಾತಂ ಯಾವನ್ಮುಖಾಂತಃ ಸ್ಯಾದ್ಬಿಲಮಾನಂ ತು ನಿಮ್ನಗಂ ॥೩೫॥
ದಂಡಂ ಷಡಂಗುಲಂ ನಾಲಂ ದಂಡಾಗ್ರೇ ದಂಡಿಕಾತ್ರಯಂ ।
ಅರ್ಧಾಂಗುಲಂ ವಿವೃದ್ಧ್ಯಾ ತು ಕರ್ತವ್ಯಂ ಚತುರಂಗುಲಂ ॥೩೬॥
ತ್ರಯೋದಶಾಂಗುಲಾಯಾಮಂ ದಂಡಮೂಲೇ ಘಟಂ ಭವೇತ್ ।
ದ್ವ್ಯಂಗುಲಸ್ತು ಭವೇತ್ಕುಂಭೋ ನಾಭಿಂ ವಿದ್ಯಾದ್ದಶಾಂಗುಲಂ ॥೩೭॥
ವೇದಿಮಧ್ಯೇ ತಥಾ ಕೃತ್ವಾ ಪಾದಂ ಕುರ್ಯಾಚ್ಚ ದ್ವ್ಯಂಗುಲಂ ।
ಪದ್ಮಪುಷ್ಪಸಮಾಕಾರಂ ಪಾದಂ ವೈ ಕರ್ಣಿಕಾಽಽಕೃತಿಂ ॥೩೮॥

---

೩೫. ವೇದಿಯ ಮಧ್ಯದಲ್ಲಿರುವ ರಂಧ್ರವು ಕಿರುಬೆರಳಿನ ಅಗಲವಿದ್ದು ಮುಖದಕಡೆಗೆ ಇಳಿಜಾರಾಗಿರಬೇಕು.

೩೬. ಸ್ರುವದ ಹಿಡಿಯು ಆರಂಗುಲ ವಿರಬೇಕು. ತುದಿಯು ನಾಲ್ಕಂಗುಲ ವಿರಬೇಕು. ಆ ನಾಲ್ಕಂಗುಲದಲ್ಲಿ ಅರ್ಧ ಅಂಗುಲ ಅಂತರದ ಮೂರು ಬಳ್ಳಿಗಳಿರಬೇಕು.

೩೭. ಹಿಡಿಯ ಬುಡದಲ್ಲಿ ಸ್ರುವದ ತಲೆಯು ಹದಿಮೂರು ಅಂಗುಲ ವಿಸ್ತಾರವಾಗಿರಬೇಕು. ಅದರ ಕುತ್ತಿಗೆಯು ಎರಡಂಗುಲ ವಿರಬೇಕು. ಮಧ್ಯಪ್ರದೇಶವು ಹತ್ತು ಅಂಗುಲವಿರಬೇಕು.

೩೮. ವೇದಿಯ ಮಧ್ಯಪ್ರದೇಶದಲ್ಲಿಯೂ ಹತ್ತು ಅಂಗುಲದ ಮಧ್ಯಪ್ರದೇಶವನ್ನು ಪದ್ಮದ ಆಕಾರವನ್ನು ಮಾಡಿ ಅದರ ಪಾದವನ್ನು ಎರಡಂಗುಲದ ಆಳತೆಯಲ್ಲಿ ಕರ್ಣಿಕೆಯಂತೆ ಮಾಡಬೇಕು. ಸ್ರುವದ

ಗಜೋಷ್ಠಸದೃಶಾಕಾರಂ ತಸ್ಯ ಪೃಷ್ಠಾಕೃತಿರ್ಭವೇತ್ ।
ಅಭಿಚಾರಾದಿ ಕಾರ್ಯೇಷು ಕುರ್ಯಾತ್ಕೃಷ್ಣಾಯಸೇನ ತು ॥೩೯॥

ಪಂಚವಿಂಶತ್ಕುಶೇನೈವ ಸ್ರುಕ್ ಸ್ರುವೌ ಮಾರ್ಜಯೇತ್ಪುನಃ ।
ಅಗ್ರಮಗ್ರೇಣ ಸಂಶೋಧ್ಯ ಮಧ್ಯಂ ಮಧ್ಯೇನ ಸುವ್ರತ ॥೪೦॥

ಮೂಲಂ ಮೂಲೇನ ವಿಧಿನಾ ಅಗ್ನೌ ತಾಪ್ಯ ಹೃದಾ ಪುನಃ ।
ಆಜ್ಯಸ್ಥಾಲೀ ಪ್ರಣೀತಾ ಚ ಪ್ರೋಕ್ಷಣೀ ತಿಸ್ರ ಏವ ಚ ॥೪೧॥

ಸೌವರ್ಣೀ ರಾಜತೀ ವಾಽಪಿ ತಾಮ್ರೀ ವಾ ಮೃಣ್ಮಯೀ ತು ವಾ ।
ಅನ್ಯಥಾ ನೈವ ಕರ್ತವ್ಯಂ ಶಾಂತಿಕೇ ಪೌಷ್ಟಿಕೇ ಶುಭೇ ॥೪೨॥

---

ತಲಭಾಗದ ಆಕೃತಿಯು ಆನೆಯ ತುಟಿಗೆ ಸಮಾನವಾದ ಆಕಾರ ಉಳ್ಳದ್ದಾಗಿರಬೇಕು.

೩೯. ಮಾರಣ ಹೋಮ ಮುಂತಾದ ಅಭಿಚಾರ ಕರ್ಮಗಳಲ್ಲಿ ಕಬ್ಬಿಣದಿಂದ ಮಾಡಿದ ಸ್ರುವವನ್ನು ಉಪಯೋಗಿಸಬೇಕು.

೪೦. ಇಪ್ಪತ್ತೈದು ದರ್ಭೆಗಳನ್ನು ತೆಗೆದುಕೊಂಡು ಪ್ರೋಕ್ಷಣ ಪಾತ್ರೆಯ ನೀರಿನಿಂದ ಸ್ರುಕ್ ಮತ್ತು ಸ್ರುವಗಳನ್ನು ಪ್ರೋಕ್ಷಿಸಿ ಅವುಗಳ ತುದಿಯನ್ನು ದರ್ಭೆಗಳ ತುದಿಯಿಂದಲೂ ಮಧ್ಯವನ್ನು ಮಧ್ಯದಿಂದಲೂ ಬುಡವನ್ನು ಬುಡದಿಂದಲೂ ಶೋಧಿಸಿ ಮತ್ತೆ ಅಗ್ನಿಯಲ್ಲಿ ಕಾಯಿಸಬೇಕು.

೪೧–೪೨. ತುಪ್ಪವನ್ನು ಹಾಕುವ ಪಾತ್ರೆ ಪ್ರಣೀತಾ ಪಾತ್ರೆ ಪ್ರೋಕ್ಷಣ ಪಾತ್ರೆ ಈ ಮೂರು ಪಾತ್ರೆಗಳೂ ಶುಭವಾದ ಶಾಂತಿಕ ಪೌಷ್ಟಿಕ ಕರ್ಮಗಳಲ್ಲಿ ಚಿನ್ನ ಬೆಳ್ಳಿ ತಾಮ್ರ ಮಣ್ಣು ಇವುಗಳಿಂದ ಮಾಡಿದುವಾಗಿರಬೇಕು. ಅಭಿಚಾರಕರ್ಮದಲ್ಲಿ ಕಬ್ಬಿಣದ ಪಾತ್ರೆಗಳನ್ನು ಉಪಯೋಗಿಸಬೇಕು. ಶಾಂತಿಕರ್ಮಗಳಲ್ಲಿ ಮಣ್ಣಿನಿಂದ ಮಾಡಿದವುಗಳನ್ನೇ ಉಪಯೋಗಿಸಬೇಕು.

ಆಯಸೀ ತ್ವಭಿಚಾರೇ ತು ಶಾಂತಿಕೇ ಮೃಣ್ಮಯೀ ತು ವಾ ।
ಷಡಂಗುಲಂ ಸುವಿಸ್ತೀರ್ಣ ಪಾತ್ರಾಣಾಂ ಮುಖಮುಚ್ಯತೇ ॥೪೩॥
ಪ್ರೋಕ್ಷಣೀ ದ್ವ್ಯಂಗುಲೋತ್ಸೇಧಾ ಪ್ರಣೀತಾ ದ್ವ್ಯಂಗುಲಾಧಿಕಾ ।
ಆಜ್ಯಸ್ಥಾಲೀ ತತಸ್ತಸ್ಯಾ ಉತ್ಸೇಧೋ ದ್ವ್ಯಂಗುಲಾಧಿಕಃ ॥೪೪॥
ಯೈಃ ಸಮಿದ್ಭಿರ್ಹುತಂ ಪ್ರೋಕ್ತಂ ತೈರೇವ ಪರಿಧಿರ್ಭವೇತ್ ।
ಮಧ್ಯಾಂಗುಲ ಪರೀಣಾಹಾ ಅವಕ್ರಾ ನಿರ್ವ್ರಣಾಃ ಸಮಾಃ ॥೪೫॥
ದ್ವಾತ್ರಿಂಶದಂಗುಲಾಯಾಮಾಸ್ತಿಸ್ರಃ ಪರಿಧಯಃ ಸ್ಮೃತಾಃ ।
ದ್ವಾತ್ರಿಂಶದಂಗುಲಾಯಾಮೈ ಸ್ತ್ರಿಂಶದ್ದರ್ಭೈಃ ಪರಿಸ್ತರೇತ್ ॥೪೬॥
ಚತುರಂಗುಲ ಮಧ್ಯೇ ತು ಗ್ರಥಿತಂ ತು ಪ್ರದಕ್ಷಿಣಂ ।
ಅಭಿಚಾರಾದಿಕಾರ್ಯೇಷು ಶಿವಾಗ್ನ್ಯಾಧಾನವರ್ಜಿತಂ ॥೪೭॥

---

೪೩–೪೪. ಆ ಮೂರು ಪಾತ್ರೆಗಳ ಬಾಯಿಗಳು ಆರಂಗುಲ ಅಗಲವಾಗಿರಬೇಕು. ಪ್ರೋಕ್ಷಣ ಪಾತ್ರೆಯು ಎರಡಂಗುಲ ಎತ್ತರವಿರಬೇಕು ಪ್ರಣೀತಾ ಪಾತ್ರೆಯು ನಾಲ್ಕಂಗುಲ ಎತ್ತರವಿರಬೇಕು. ಆಜ್ಯಪಾತ್ರೆಯು ಆರಂಗುಲ ಎತ್ತರವಿರಬೇಕು.

೪೫. ಯಾವ ಸಮಿತ್ತುಗಳಿಂದ ಹೋಮಮಾಡಬೇಕೆಂದು. ಹೇಳಿದೆಯೋ ಅದೇ ಸಮಿತ್ತುಗಳನ್ನೇ ಪರಿಧಿಗೆ ಉಪಯೋಗಿಸಬೇಕು. ಪರಿಧಿಯೂ ಸಮಿತ್ತುಗಳ ನಡುಬೆರಳಿನಗಾತ್ರವೂ ಮೂವತ್ತೆರಡಂಗುಲ ಉದ್ದವೂ ಇದ್ದು ಪತ್ರವಿಲ್ಲದೆ ಸಮವಾಗಿ ಮುಳುಕಿಲ್ಲದೆ ಇರಬೇಕು. ಇಂತಹ ಮೂರು ಸಮಿತ್ತುಗಳು ಪರಿಧಿಯಾಗಿರಬೇಕು

೪೬. ಪರಿಸ್ತರಣಕ್ಕೆ ಮೂವತ್ತೆರಡು ಅಂಗುಲ ಉದ್ದವಾದ ಮೂವತ್ತು ದರ್ಭೆಗಳನ್ನು ಉಪಯೋಗಿಸಬೇಕು. ಆ ದರ್ಭೆಗಳನಡುವೆ ನಾಲ್ಕಂಗುಲ ಪ್ರಮಾಣದಲ್ಲಿ ಪ್ರದಕ್ಷಿಣಾಕಾರವಾದ ಗಂಟನ್ನು ಹಾಕಿರಬೇಕು.

೪೭. ಎಲೈ ಸನತ್ಕುಮಾರನೇ, ಅಭಿಚಾರ ಕರ್ಮವಾದ ಮಾರಣ ಉಚ್ಚಾಟನ ಸ್ತಂಭನ ಮುಂತಾದವುಗಳನ್ನು ಮಾಡುವಾಗ ಶಿವಾಗ್ನಿಯನ್ನು

ಅಕೋಟಮಲಾಃ ಸ್ಥಿರಾ ವಿಪ್ರ ಸಂಗ್ರಾಹ್ಯಾಸ್ತ್ವಭಿಚಾರಿಕೇ ।
ಸಮಗ್ರಾಃ ಸುಸಮಾಃ ಸ್ಥೂಲಾಃ ಕನಿಷ್ಠಾಂಗುಲ ಸಂಮಿತಾಃ ॥೪೮॥
ಅವಕ್ರಾ ನಿರ್ವ್ರಣಾಃ ಸ್ನಿಗ್ಧಾ ದ್ವಾದಶಾಂಗುಲ ಸಂಮಿತಾಃ ।
ಸಮಿಧಸ್ಥಂ ಪ್ರಮಾಣಂ ಹಿ ಸರ್ವಕಾರ್ಯೇಷು ಸುವ್ರತ ॥೪೯॥
ಗವ್ಯಂ ಘೃತಂ ತತಃ ಶ್ರೇಷ್ಠಂ ಕಾಪಿಲಂ ತು ತತೋಽಧಿಕಂ ।
ಆಹುತೀನಾಂ ಪ್ರಮಾಣಾಂ ತು ಸ್ರುವಂ ಪೂರ್ಣಂ ಯಥಾ ಭವೇತ್ ॥
ಅನ್ನಮಕ್ಷ ಪ್ರಮಾಣಂ ಸ್ಯಾಚ್ಛುಕ್ತಿ ಮಾತ್ರೇಣ ವೈ ತಿಲಾಃ ।
ಯವಾನಾಂ ಚ ತದರ್ಧಂ ಸ್ಯಾತ್ಫಲಾನಾಂ ಸ್ವಪ್ರಮಾಣತಃ ॥೫೦॥

---

ಪ್ರತಿಷ್ಠಿಸಬಾರದು. ಆ ಕಾರ್ಯಗಳಿಗೆ ಗಟ್ಟಿಯಾಗಿ ಒರಟಾಗಿರುವ ಸಮಿತ್ತುಗಳನ್ನು ಉಪಯೋಗಿಸಬೇಕು. ಸರಳವಾದುವುಗಳನ್ನು ಉಪಯೋಗಿಸಬಾರದು.

೪೮–೪೯. ಮಿಕ್ಕ ಸಮಸ್ತ ಕಾರ್ಯಗಳಿಗೂ ಸಂಪೂರ್ಣವಾಗಿ ಸಮವಾಗಿಯೂ ಕಿರುಬೆರಳಿನಗಾತ್ರವಾಗಿಯೂ ಡೊಂಕಿಲ್ಲದೆಯೂ ಸಾರವಾದುದಾಗಿ ಹುಳುಕಿಲ್ಲದೆ ಹತ್ತುಂಗಲ ಉದ್ದವಾಗಿಯೂ ಇರುವ ಸಮಿತ್ತುಗಳನ್ನು ಉಪಯೋಗಿಸಬೇಕು

೫೦. ಹೋಮಕ್ಕೆ ಹಸುವಿನತುಪ್ಪವೇ ಶ್ರೇಷ್ಠವಾದುದು. ಕಪಿಲ ವರ್ಣದ ಹಸುವಿನ ತುಪ್ಪವು ಮತ್ತೂ ಶ್ರೇಷ್ಠವು. ಒಂದೊಂದು ಆಹುತಿಗೆ ಸ್ರುವದಲ್ಲಿ ತುಂಬುವಷ್ಟು ತುಪ್ಪವನ್ನು ಹೋಮಮಾಡಬೇಕು. ಇದೇ ಅಳತೆಯು.

೫೧. ಹೋಮಕ್ಕೆ ಅನ್ನವು ತಾರೆಯಕಾಯಿಗಾತ್ರವೂ, ಎಳ್ಳು ಒಂದು ಕಪ್ಪೆಯ ಚಿಪ್ಪಿನಲ್ಲಿ ತುಂಬುವಷ್ಟೂ, ಯವೆಯು ಇದರ ಅರ್ಧವೂ. ಹಣ್ಣುಗಳು ಅದರದರಗಾತ್ರವೂ, ಹಾಲು ಜೇನು ಮೊಸರು ಇವು ತುಪ್ಪದಷ್ಟೇ ಅಳತೆಯಲ್ಲಿಯೂ ಇರಬೇಕು.

ಕ್ಷೀರಸ್ಯ ಮಧುನೋ ದಧ್ನಃ ಪ್ರಮಾಣಂ ಘೃತವದ್ಭವೇತ್ ।
ಚತುಃ ಸ್ರುವಪ್ರಮಾಣೇನ ಸ್ರುಚಾ ಪೂರ್ಣಾಹುತಿರ್ಭವೇತ್ ॥೫೨॥

ತದರ್ಧಂ ಸ್ವಿಷ್ಟಕೃತ್ಪ್ರೋಕ್ತಂ ಶೇಷಂ ಸರ್ವಮಥಾಪಿ ವಾ ।
ಶಾಂತಿಕಂ ಪೌಷ್ಟಿಕಂ ಚೈವ ಶಿವಾಗ್ನೌ ಜುಹುಯಾತ್ಸದಾ ॥೫೩॥

ಲೌಕಿಕಾಗ್ನೌ ಮಹಾಭಾಗ ಮೋಹನೋಚ್ಚಾಟನಾದಯಃ ।
ಶಿವಾಗ್ನಿಂ ಜನಯಿತ್ವಾ ತು ಸರ್ವಕರ್ಮಾಣಿ ಸುವ್ರತ ॥೫೪॥

ಸಪ್ತ ಜಿಹ್ವಾಃ ಪ್ರಕಲ್ಪ್ಯೈವ ಸರ್ವಕಾರ್ಯಾಣಿ ಕಾರಯೇತ್ ।
ಅಥವಾ ಸರ್ವಕಾರ್ಯಾಣಿ ಜಿಹ್ವಾಮಾತ್ರೇಣ ಸಿಧ್ಯತಿ ॥೫೫॥

ಶಿವಾಗ್ನಿರಿತಿ ವಿಪ್ರೇಂದ್ರಾ ಜಿಹ್ವಾಮಾತ್ರೇಣ ಸಾಧಕಃ ॥೫೬॥

---

೫೨. ನಾಲ್ಕು ಸ್ರುವಗಳಲ್ಲಿ ತುಂಬುವಷ್ಟು ತುಪ್ಪವನ್ನು ಸ್ರುಕ್ಕಿನಲ್ಲಿ ತುಂಬಿ ಪೂರ್ಣಾಹುತಿಯನ್ನು ಮಾಡಬೇಕು. ಸ್ವಿಷ್ಟಕೃತು ಹೋಮಕ್ಕೆ ಅದರ ಅರ್ಧಭಾಗ ತುಪ್ಪವು ಸಾಕಾಗುವುದು. ಅಥವಾ ಹೋಮಮಾಡಿ ಮಿಕ್ಕುದೆಲ್ಲವನ್ನೂ ಉಪಯೋಗಿಸಬಹುದು.

೫೩. ಮಹಾಮಹಿಮನಾದ ಸನತ್ಕುಮಾರನೇ, ಶಾಂತಿಕ ಪೌಷ್ಟಿಕ ಕರ್ಮಗಳಲ್ಲಿ ಶಿವಾಗ್ನಿಯಲ್ಲಿ ಹೋಮವನ್ನು ಮಾಡಬೇಕು. ಮೋಹನ ಉಚ್ಚಾಟನ ಮುಂತಾದ ಕರ್ಮಗಳಲ್ಲಿ ಲೌಕಿಕಾಗ್ನಿಯಲ್ಲಿ ಹೋಮವನ್ನು ಮಾಡಬೇಕು

೫೪–೫೬. ಶಾಂತಿಕ ಪೌಷ್ಟಿಕ ಮುಂತಾದ ಸಮಸ್ತ ಶುಭಕರ್ಮಗಳನ್ನೂ ಅರಣಿಯಲ್ಲಿ ಶಿವಾಗ್ನಿಯನ್ನು ಕಡೆದು ಹುಟ್ಟಿಸಿ ಆ ಅಗ್ನಿಯಲ್ಲಿ ಸಪ್ತ ಜಿಹ್ವೆಗಳನ್ನು ಕಲ್ಪಿಸಿ ಅವುಗಳಲ್ಲಿ ಹೋಮಮಾಡಿ ಕರ್ಮಸಿದ್ಧಿಯನ್ನು ಪಡೆಯಬೇಕು. ಅಗ್ನಿಯಲ್ಲಿ ಜಿಹ್ವೆಗಳನ್ನು ಕಲ್ಪಿಸದೆ ಹೋಮಮಾಡಿದರೆ ಕಾರ್ಯಸಿದ್ಧಿಯಾಗುವುದಿಲ್ಲ. ಆ ಕಾರಣದಿಂದ ಜಿಹ್ವೆಗಳನ್ನು ಕಲ್ಪಿಸಿ ಹೋಮಮಾಡುವುದನ್ನೇ ಶಿವಾಗ್ನಿಯೆಂದು ಹೇಳಿರುವುದು.

ಓಂ ಬಹುರೂಪಾಯೈ ಮಧ್ಯಜಿಹ್ವಾಯೈ, ಅನೇಕ ವರ್ಣಾಯೈ ದಕ್ಷಿಣೋತ್ತರ ಮಧ್ಯಗಾಯೈ ಶಾಂತಿಕ ಪೌಷ್ಟಿಕ ಮೋಕ್ಷಾದಿ ಫಲ ಪ್ರದಾಯೈ ಸ್ವಾಹಾ ॥೫೭॥

ಓಂ ಹಿರಣ್ಯಾಯೈ ಚಾಮೀಕರಾಭಾಯೈ ಈಶಾನ ಜಿಹ್ವಾಯೈ ಜ್ಞಾನ ಪ್ರದಾಯೈ ಸ್ವಾಹಾ ॥೫೮॥

ಓಂ ಕನಕಾಯೈ ಕನಕನಿಭಾಯೈ ರಮ್ಯಾಯೈ ಐಂದ್ರಜಿಹ್ವಾಯೈ ಸ್ವಾಹಾ ॥೫೯॥

ಓಂ ರಕ್ತಾಯೈ ರಕ್ತವರ್ಣಾಯೈ ಆಗ್ನೇಯಜಿಹ್ವಾಯೈ ಅನೇಕ ವರ್ಣಾಯೈ ವಿದ್ವೇಷಣಮೋಹನಾಯೈ ಸ್ವಾಹಾ ॥೬೦॥

ಓಂ ಕೃಷ್ಣಾಯೈ ನೈಋರ್ತಜಿಹ್ವಾಯೈ ಮಾರಣಾಯೈ ಸ್ವಾಹಾ ॥೬೧॥

ಓಂ ಸುಪ್ರಭಾಯೈ ಪಶ್ಚಿಮ ಜಿಹ್ವಾಯೈ ಮುಕ್ತಾಫಲಾಯೈ ಶಾಂತಿಕಾಯೈ ಪೌಷ್ಟಿಕಾಯೈ ಸ್ವಾಹಾ ॥೬೨॥

ಓಂ ಅಭಿವ್ಯಕ್ತಾಯೈ ವಾಯವ್ಯ ಜಿಹ್ವಾಯೈ ಶತ್ರೂಚ್ಚಾಟನಾಯೈ ಸ್ವಾಹಾ ॥೬೩॥

ಓಂ ವಹ್ನಯೇ ತೇಜಸ್ವಿನೇ ಸ್ವಾಹಾ ॥೬೪॥

---

೫೭. ಅಗ್ನಿಯಲ್ಲಿ ಜಿಹ್ವಾ ಕಲ್ಪನೆಯನ್ನು ಮಾಡುವ ಕ್ರಮವನ್ನು ಹೇಳಲಾಗುವುದು. ಅಗ್ನಿಸ್ಥಾಪನೆಯನ್ನು ಮಾಡಿದಮೇಲೆ ಈ ಒಂದೊಂದು ಮಂತ್ರಗಳಿಂದ ಸ್ವಾಹಾಕಾರಾಂತವಾಗಿ ಹೋಮಮಾಡುವುದೇ ಜಿಹ್ವಾ ಕಲ್ಪನೆಯು. ಮೇಲೆ ಹೇಳಿದ ಮಂತ್ರದಿಂದ ದಕ್ಷಿಣೋತ್ತರ ದಿಕ್ಕುಗಳಿಗೆ ನಡುವೆ ಇರುವ ಮಧ್ಯ ಜಿಹ್ವೆಗಾಗಿ ಹೋಮವನ್ನು ಮಾಡತಕ್ಕದ್ದು. ಮುಂದಿನ ಮಂತ್ರಗಳು ಮಿಕ್ಕ ಜಿಹ್ವಾ ಹೋಮಕ್ಕೆ ಸಂಬಂಧಪಟ್ಟವುಗಳು.

೫೮–೬೪. ಸಪ್ತಜಿಹ್ವಾ ಹೋಮವಾದಮೇಲೆ ಕೊನೆಯದು ಪ್ರಧಾನ ಮಂತ್ರ ಹೋಮವು.

ಏತಾವದ್ವಹ್ನಿಸಂಸ್ಕಾರ ಮಥವಾ ವಹ್ನಿಕರ್ಮಸು ।
ನೈಮಿತ್ತಿಕೇ ಚ ವಿಧಿನಾ ಶಿವಾಗ್ನಿಂ ಕಾರಯೇತ್ಪುನಃ ॥೬೫॥

ನಿರೀಕ್ಷಣಂ ಪ್ರೋಕ್ಷಣಂ ತಾಡನಂ ಚ ಷಷ್ಠೇನ ಘಡಂತೇನ ಅಭ್ಯುಕ್ಷಣಂ, ಚತುರ್ಥೇನ ಖನನೋತ್ಕಿರಣಂ ಷಷ್ಠೇನ ಪೂರಣಂ, ಸಮೀಕರಣ ಮಾದ್ಯೇನ ಸೇಚನಂ ವೌಷಡಂತೇನ ಕುಟ್ಟನಂ ಷಷ್ಠೇನ ಸಂಮಾರ್ಜನೋಪಲೇಪನೇ ತುರೀಯೇಣ, ಕುಂಡಪರಿಕಲ್ಪನಂ ನಿವೃತ್ತ್ಯಾತ್ರಿಭಿರೇವ ಕುಂಡಪರಿಧಾನಂ, ಚತುರ್ಥೇನ ಕುಂಡಾರ್ಚನ ಮಾದ್ಯೇನ ರೇಖಾಚತುಷ್ಟಯ ಸಂಪಾದನಂ ಷಷ್ಠೇನ ಘಡಂತೇನ ವಜ್ರೀಕರಣಂ, ಚತುಷ್ಪದಾಪಾದನ ಮಾದ್ಯೇನ ಏವಂ ಕುಂಡ ಸಂಸ್ಕಾರ ಮಷ್ಟಾದಶವಿಧಂ ॥೬೬॥

---

೬೫. ಶಾಂತಿಕ ಪೌಷ್ಟಿಕ ಕರ್ಮಗಳಲ್ಲಿ ಹಿಂದೆ ಹೇಳಿದ ಅಗ್ನಿ ಸಂಸ್ಕಾರಗಳನ್ನು ಮಾಡಬೇಕು. ಅಥವಾ ನೈಮಿತ್ತಿಕ ಕರ್ಮಗಳಲ್ಲಿಯೂ ಹೋಮಾದಿಗಳನ್ನು ಮಾಡಬೇಕಾದರೆ ಮತ್ತೆ ಶಿವಾಗ್ನಿಯನ್ನು ಸ್ಥಾಪಿಸಿ ಹೋಮಗಳನ್ನು ಮಾಡಬೇಕು.

೬೬. ಶಿವಾಗ್ನಿವಿಧಿಯಲ್ಲಿ ಕುಂಡಸಂಸ್ಕಾರವು ಹದಿನೆಂಟು ಬಗೆಯಾಗಿರುವುದು. ಅವಾವುವೆಂದರೆ—ನಿರೀಕ್ಷಣ, ಪ್ರೋಕ್ಷಣ, ತಾಡನ, ಇವುಗಳನ್ನು ಆರನೆಯದಾದ ನಮೋಹಿರಣ್ಯಬಾಹವೇ ಎಂಬ ಮಂತ್ರದ ಕೊನೆಯಲ್ಲಿ ಫಟ್ ಎಂಬ ಮಂತ್ರವನ್ನುಚ್ಚರಿಸಿ ಮಾಡಬೇಕು. ನೀರಿನಿಂದ ಚುಮುಕಿಸವುದು ಅಭ್ಯುಕ್ಷಣವೆನಿಸುವುದು. ಇದನ್ನು ತತ್ಪುರುಷ ಮಂತ್ರದ ಕೊನೆಯಲ್ಲಿ ಹುಂ, ಎಂಬುದನ್ನುಚ್ಚರಿಸಿ ಮಾಡಬೇಕು. ಮಣ್ಣನ್ನು ಅಗೆಯುವುದೂ, ಮೇಲಕ್ಕೆ ಎತ್ತಿಹಾಕುವುದೂ, ಖನನೋತ್ಕಿರಣವೆನಿಸುವುದು. ಇದನ್ನು ಆರನೆಯದಾದ ನಮೋಹಿರಣ್ಯಬಾಹವೇ ಎಂಬ ಮಂತ್ರದಿಂದ ಮಾಡಬೇಕು. ಮಣ್ಣನ್ನು ತುಂಬುವುದು ಸಮ ಮಾಡುವುದು. ಪೂರಣಸಮೀಕರಣಗಳು. ಇವುಗಳನ್ನು ಸದ್ಯೋಜಾತ ಮಂತ್ರದಿಂದಲೂ, ಮಣ್ಣನ್ನು ನೀರಿನಲ್ಲಿ ನೆನಸುವುದು ಸೇಚನವು.

**ಕುಡಂಸಂಸ್ಕಾರಾನಂತರ ಮುಕ್ಷಪಾಟನಂ ಷಷ್ಠೇನ ವಿಷ್ಟರನ್ಯಾಸ ಮಾದ್ಯೇನ ವಜ್ರಾಸನೇ ವಾಗೀಶ್ವರ್ಯಾ ವಾಹನಂ ॥೬೭॥**

**ಓಂ ಹ್ರೀಂವಾಗೀಶ್ವರೀಂ ಶ್ಯಾಮವರ್ಣಾಂ ವಿಶಾಲಾಕ್ಷೀಂ ಯೌವ ನೋನ್ಮತ್ತ ವಿಗ್ರಹಾಂ । ಋತುಮತೀಂ ವಾಗೀಶ್ವರಶಕ್ತಿ ಮಾವಾಹ ಯಾಮಿ ॥೬೮॥ ವಾಗೀಶ್ವರೀಂ ಪೂಜಯಾಮಿ ॥೬೯॥**

---

ಇದನ್ನು ವೌಷಟ್ ಎಂಬ ಮಂತ್ರದಿಂದಲೂ, ಮಣ್ಣನ್ನು ಕಲೆಯಿಸುವುದು ಕುಟ್ಟುವುದು ಕುಟ್ಟನವೆನಿಸುವುದು. ಇದನ್ನು ನಮೋಹಿರಣ್ಯಬಾಹವೇ ಮಂತ್ರದಿಂದಲೂ, ಕಸವನ್ನು ಗುಡಿಸಿ ಸಾರಿಸುವುದು ಸಂಮಾರ್ಜನೋಪ ಲೇಪನಗಳು. ಇವುಗಳನ್ನು ನಾಲ್ಕನೆಯ ತತ್ಪುರುಷ ಮಂತ್ರದಿಂದಲೂ, ಕುಂಡವನ್ನು ಮಾಡುವುದು ಕುಂಡಸಂಕಲ್ಪನೆಯು. ಇದನ್ನು ಪ್ರತಿಲೋಮ ವಾಗಿ ಅಘೋರ ವಾಮದೇವ ತತ್ಪುರುಷ ಮಂತ್ರಗಳಿಂದಲೂ ಮಾಡ ಬೇಕು. ಕುಂಡದ ಸುತ್ತಲೂ ಆವರಣರೂಪವಾದ ಮೇಖಲೆಯನ್ನು ಮಾಡು ವುದು ಕುಂಡಪರಿಧಾನವೆನಿಸುವುದು. ಇದನ್ನು ನಾಲ್ಕನೆಯ ತತ್ಪುರುಷ ಮಂತ್ರ ದಿಂದಲೂ, ಕುಂಡಾರ್ಚನೆಯನ್ನು ಸದ್ಯೋಜಾತ ಮಂತ್ರ ದಿಂದಲೂ, ರೇಖಾತುಷ್ಟಯ ಸಂಪಾದನೆಯನ್ನು ಆರನೆಯ ನಮೋಹಿರಣ್ಯ ಬಾಹವೇ ಎಂಬ ಮಂತ್ರದ ಕೊನೆಯಲ್ಲಿ ಫಟ್ ಎಂಬ ಮಂತ್ರದಿಂದಲೂ ವಜ್ರೀಕರಣವೂ, ಚತುಷ್ಪದಾ ಸಾದನೆಯೂ ಅಂದರೆ ಕುಂಡವನ್ನು ದೃಢಪಡಿಸುವುದು, ನಾಲ್ಕು ದಿಕ್ಕುಗಳಲ್ಲಿಯೂ ಇಂದ್ರಾದಿ ದೇವತೆ ಗಳನ್ನು ಸ್ಥಾಪಿಸುವುದು, ಇವುಗಳನ್ನು ಮೊದಲನೆಯದಾದ ಸದ್ಯೋಜಾತ ಮಂತ್ರದಿಂದಲೂ ಮಾಡಬೇಕು. ಹೀಗೆ ಕುಂಡ ಸಂಸ್ಕಾರವು ಹದಿನೆಂಟು ಬಗೆಯಾಗಿರುವುದು.

೬೭. ಕುಂಡಸಂಸ್ಕಾರವಾದಮೇಲೆ ಆ ಕುಂಡವನ್ನು ಹೊಟ್ಟಿನಿಂದ ಮುಚ್ಚುವುದು ಅಕ್ಷಪಾಟನವೆನಿಸುವುದು. ಇದನ್ನು ನಮೋಹಿರಣ್ಯ ಬಾಹವೇ ಮಂತ್ರದಿಂದ ಮಾಡಬೇಕು. ಬಳಿಕ ಸದ್ಯೋಜಾತ ಮಂತ್ರ ದಿಂದ ಭದ್ರಾಸನವನ್ನಿಟ್ಟು ಆ ವಜ್ರಾಸನದಲ್ಲಿ ವಾಗೀಶ್ವರೀದೇವಿಯ ಆವಾಹನೆಯನ್ನು ಮಾಡಬೇಕು.

೬೮-೬೯. ಈ ಮಂತ್ರದಿಂದ ವಾಗೀಶ್ವರನ ಶಕ್ತಿಯಾದ, ಋತು

ಪುನರ್ವಾಗೀಶ್ವರಾವಾಹನಂ ॥೭೦॥ ಏಕ ವಕ್ತ್ರಂ ಚತುರ್ಭುಜಂ ಶುದ್ಧಸ್ಫಟಿಕಾಭಂ ವರದಾಭಯ ಹಸ್ತಂ ಪರಶುಮೃಗಧರಂ ಜಟಾ ಮುಕುಟಮಂಡಿತಂ ಸರ್ವಾಭರಣ ಭೂಷಿತ ಮಾವಾಹಯಾಮಿ ॥

ಓಂ ಈಂವಾಗೀಶ್ವರಾಯನಮಃ । ಆವಾಹನಸ್ಥಾಪನ ಸನ್ನಿಧಾನ ಸನ್ನಿರೋಧ ಪೂಜಾಂತಂ ವಾಗೀಶ್ವರೀಂ ಸಂಭಾವ್ಯ ಗರ್ಭಾಧಾನ ವಹ್ನಿಸಂಸ್ಕಾರಂ ॥೭೨॥

ಅರಣೀಜನಿತಂ ಕಾಂತೋದ್ಭವಂ ವಾ ಅಗ್ನಿಹೋತ್ರಜಂ ವಾ ತಾಮ್ರ ಪಾತ್ರೇ ಶರಾವೇ ವಾ ಆನೀಯ ನಿರೀಕ್ಷಣ ತಾಡನಾಭ್ಯುಕ್ಷಣ ಪ್ರಕ್ಷಾ ಲನಮಾದ್ಯೇನ, ಕ್ರವ್ಯಾದಾಶಿವ ಪರಿತ್ಯಾಗೋಽಪಿ ಪ್ರಥಮೇನ, ವಹ್ನೇ ಸ್ತ್ರ್ಯಕಾರಣಂ ಜಠರಭ್ರೂಮಧ್ಯಾದಾವಾಹ್ಯಾಗ್ನಿಂ ವೈ ಕಾ ರ ಣ ಮೂರ್ತಾವಾಗ್ನೇಯೇನ ಉದ್ದೀಪನಂ ಆದ್ಯೇನ ಪುರುಷೇಣ ಸಂಹಿ ತಯಾಧಾರಣಾ(ಂ)ಧೇನುಮುದ್ರಾಂ ತುರೀಯೇಣಾವಕುಂಠ್ಯ ಜಾನು ಭ್ಯಾಮವನಿಂ ಗತ್ವಾ ಶರಾವೋತ್ಥಾಪನಂ ಕುಂಡೋಪರಿ ನಿಧಾಯ

---

ಸ್ನಾನಮಾಡಿದ, ಯೌವನದಿಂದ ಮದಿಸಿದ ಶರೀರವುಳ್ಳ, ವಿಸ್ತಾರವಾದ ಕಣ್ಣುಗಳುಳ್ಳ, ಮೇಘವರ್ಣದ ಕಾಂತಿಯಿಂದ ಕೂಡಿದ ವಾಗೀಶ್ವರೀ ದೇವಿಯನ್ನು ಆವಾಹನೆಮಾಡಬೇಕು. ಬಳಿಕ ವಾಗೀಶ್ವರೀಂ ಪೂಜ ಯಾಮಿ ಎಂಬ ಮಂತ್ರದಿಂದ ಪೂಜಿಸಬೇಕು.

೭೦–೭೧. ಆ ಮೇಲೆ ಈ ಮಂತ್ರದಿಂದ ವಾಗೀಶ್ವರನನ್ನು ಆವಾ ಹನೆಮಾಡಬೇಕು. ಒಂದು ಮುಖ, ನಾಲ್ಕು ತೋಳು, ವರದ ಅಭಯ ಹಸ್ತಗಳು, ಪರಶುಮೃಗಧರ, ಜಟೆ ಕಿರೀಟಗಳ ಅಲಂಕಾರ ಮುಂತಾದ ಸಮಸ್ತ ಆಭರಣಗಳಿಂದ ಅಲಂಕೃತನಾದ ವಾಗೀಶ್ವರನನ್ನು ಆವಾಹನೆ ಮಾಡುವೆನು ಎಂಬುದೇ ಮಂತ್ರಾರ್ಥವು.

೭೨. ಈ ಮಂತ್ರದಿಂದ ವಾಗೀಶ್ವರನನ್ನು ಆವಾಹನಾದಿ ಪೂಜಾಂತ ವಾಗಿ ಪೂಜಿಸಿ, ವಾಗೀಶ್ವರಿಯನ್ನೂ ಪೂಜಿಸಿ, ಗರ್ಭಾಧಾನರೂಪವಾದ ಅಗ್ನಿ ಸಂಸ್ಕಾರವನ್ನು ಮಾಡಬೇಕು. ಆ ಸಂಸ್ಕಾರವಿಧಿ ಹೇಗೆಂದರೆ,

ಪ್ರದಕ್ಷಿಣ ಮಾವರ್ತ್ಯ ತುರೀಯೇಣಾತ್ಮ ಸಮ್ಮುಖಾಂ ವಾಗೀಶ್ವರೀಂ ಗರ್ಭನಾಡ್ಯಾಂ ಗರ್ಭಾಧಾನಾಂತರೀಯೇಣ ಕಮಲ ಪ್ರದಾನ ಮಧ್ಯೇನ ವೌಷಡಂತೇನ ಕುಶಾರ್ಘ್ಯಂ ದತ್ವಾ ಇಂಧನ ಪ್ರಧಾನ ಮಾದ್ಯೇನ ಪ್ರಜ್ವಾಲನಂ ಗರ್ಭಾಧಾನಂ ಚ ಸದ್ಯೇನಾದ್ಯೇನ ಪೂಜನಂ ಪುಂಸವನಂ ವಾಮೇನ ಪೂಜನಂ ದ್ವಿತೀಯೇನ ಸೀಮಂತೋನ್ನಯನ ಮಘೋರೇಣ ತೃತೀಯೇನ ಪೂಜನಂ ॥೭೩॥

---

೭೩. ಅರಣಿಯಲ್ಲಿ ಹುಟ್ಟಿದ ಅಗ್ನಿಯು ಉತ್ತಮವು. ಸೂರ್ಯಕಾಂತ ಶಿಲೆಯಿಂದ ಹುಟ್ಟಿದುದು ಮಧ್ಯಮವು. ಅಗ್ನಿ ಹೋತ್ರವನ್ನು ಮಾಡಿದ ಶ್ರೋತ್ರಿಯನ ಮನೆಯ ಅಗ್ನಿಯು ಅಧಮವು. ಈ ಅಗ್ನಿಗಳಲ್ಲಿ ಒಂದನ್ನು ತಾಮ್ರದ ಪಾತ್ರೆಯಲ್ಲಾಗಲಿ ಮಣ್ಣಿನ ಶ್ರಾವೆಯಲ್ಲಾಗಲಿ ತಂದು ಮೊದಲನೆಯದಾದ ಸದ್ಯೋಜಾತ ಮಂತ್ರದಿಂದ ನಿರೀಕ್ಷಣತಾಡನ ಅಭ್ಯುಕ್ಷಣ ಪ್ರಕ್ಷಾಳನಗಳನ್ನೂ, ಅಗ್ನಿಗೆ ಕ್ರವ್ಯಾದಾಗ್ನಿಯೆಂಬ ಅಮಂಗಳ ಪರಿತ್ಯಾಗವನ್ನು ಮಾಡಿ, ತ್ರಿವರ್ಗಸಾಧನವಾದ ಆ ಅಗ್ನಿಯನ್ನು ಜಠರ ಭ್ರೂಮಧ್ಯ ಮುಂತಾದ ಪ್ರದೇಶದಲ್ಲಿ ಆವಾಹನವನ್ನು ಮಾಡಿ, ಆವಾಹಿತ ಮೂರ್ತಿಯಲ್ಲಿ ಅಗ್ನಿ ಮಂತ್ರದಿಂದ ಉದ್ದೀಪನಮಾಡಿ ಸದ್ಯೋಜಾತ ತತ್ಪುರುಷ ಮಂತ್ರಗಳಿಂದ ಧಾರಣೆಯನ್ನು ಮಾಡಿ, ಧೇನುಮುದ್ರೆಯನ್ನು ತೋರಿಸಿ ತತ್ಪುರುಷ ಮಂತ್ರದಿಂದ ಮತ್ತೊಂದು ಪಾತ್ರೆಯಿಂದ ಮುಚ್ಚಿ, ಎರಡು ಮಂಡಿಗಳನ್ನೂರಿ ಅಗ್ನಿಯನ್ನು ತಂದ ಶ್ರಾವೆಯನ್ನು ಕುಂಡದ ಮೇಲಿಟ್ಟು, ತತ್ಪುರುಷ ಮಂತ್ರದಿಂದ ಪ್ರದಕ್ಷಿಣಾಕಾರವಾಗಿ ತಿರುಗಿಸಿ ವಾಗೀಶ್ವರಿಯನ್ನು ಧ್ಯಾನಿಸಿ, ಆತ್ಮಾಭಿಮುಖವಾಗಿ ಗರ್ಭನಾಳದಲ್ಲಿ ಗರ್ಭಾಧಾನ ಮಧ್ಯದಲ್ಲಿ ಸದ್ಯೋಜಾತ ಮಂತ್ರವನ್ನೂ ವೌಷಟ್ ಎಂಬ ಮಂತ್ರವನ್ನೂ ಉಚ್ಚರಿಸಿ ಕಮಲಪ್ರದಾನವನ್ನು ಮಾಡಿ, ಕುಶಸಹಿತವಾದ ಅರ್ಘ್ಯವನ್ನು ಕೊಟ್ಟು, ಸದ್ಯೋಜಾತ ಮಂತ್ರದಿಂದ ಇಂಧನ (ಚಕ್ಕೆಗಳು) ಗಳನ್ನು ಹಾಕಿ, ಅಗ್ನಿರೂಪವಾದ ಗರ್ಭಾಧಾನವನ್ನೂ ಪ್ರಜ್ವಲನೆಯನ್ನೂ ಪೂಜೆಯನ್ನೂ ಮಾಡಿ, ವಾಮದೇವ ಮಂತ್ರದಿಂದ ಪುಂಸವನವನ್ನೂ

**ಅವಯವವ್ಯಾಪ್ತಿರ್ವಕ್ತ್ರೋದ್ಘಾಟನಂ ವಕ್ತ್ರನಿಷ್ಕೃತಿರಿತಿ ತೃತೀಯೇನ ಗರ್ಭಜಾತಕರ್ಮ ಪುರುಷೇಣ ಪೂಜನಂ ತುರೀಯೇಣ ಷಷ್ಠೇನ ಪ್ರೋಕ್ಷಣಂ ಸೂತಕ ಶುದ್ಧಯೇ ಚಾಗ್ನಿಸೂನುರಕ್ಷಾ ಕುಶಾಸ್ತ್ರೇಣ ವಕ್ತ್ರೇಣಾಗ್ನೌ ಮೂಲಮೀಶಾಗ್ರಂ ನೈರ್ಋತಿಮೂಲಂ ವಾಯುವ್ಯಾಗ್ರಂ ವಾಯುವ್ಯಮೂಲ ಮೀಶಾಗ್ರಮಿತಿ ಕುಶಾಸ್ತರಣಮಿತಿ ಪೂರ್ವೋಕ್ತ ಮಿಧ್ಮ ಮಗ್ರಮೂಲಘೃತಾಕ್ತಂ ಲಾಲಾಪನೋದಾಯ ಷಷ್ಠೇನ ಜುಹುಯಾತ್ ॥೭೪॥**

**ಪಂಚಪೂರ್ವಾತಿಕ್ರಮೇಣ ಪರಿಧಿವಿಷ್ಟರನ್ಯಾಸೋಽಪಿ ಆದ್ಯೇನ ವಿಷ್ಟರೋಪರಿ ಹಿರಣ್ಯಗರ್ಭ ಹರನಾರಾಯಣಾನಪಿ ಪೂಜಯೇತ್ ॥೭೫॥**

---

ಪೂಜೆಯನ್ನೂ, ಮೂರನೆಯದಾದ ಅಘೋರ ಮಂತ್ರದಿಂದ ಸೀಮಂತೋನ್ನಯನವನ್ನೂ ಪೂಜೆಯನ್ನೂ ಮಾಡಬೇಕು.

೭೪. ತರುವಾಯ ಅಘೋರ ಮಂತ್ರದಿಂದ ಅಗ್ನಿಯ ಅವಯವ ವ್ಯಾಪ್ತಿ ಎಂದರೆ ಮುಖವನ್ನು ತೆರೆಯುವುದು ತತ್ಪುರುಷ ಮಂತ್ರದಿಂದ ಗರ್ಭಪೂಜೆಯನ್ನೂ ಜಾತ ಕರ್ಮವನ್ನೂ ಪೂಜೆಯನ್ನೂ ಮಾಡಬೇಕು. ಮತ್ತೆ ಆರನೆಯ ನಮೋಹಿರಣ್ಯಬಾಹವೇ ಎಂಬ ಮಂತ್ರದಿಂದ ಸೂತಕದ ಶುದ್ಧಿಗಾಗಿ ಪ್ರೋಕ್ಷಣೆಯನ್ನು ಮಾಡಿ ಕುಶಸಹಿತವಾಗಿ ಅಸ್ತ್ರಮಂತ್ರವನ್ನು ಉಚ್ಚರಿಸಿ, ಅಗ್ನಿಯೆಂಬ ಪುತ್ರನ ರಕ್ಷೆಯನ್ನು ಮುಖಮಂತ್ರದಿಂದಲೇ ಮಾಡಬೇಕು. ಬಳಿಕ ಆಗ್ನೇಯ ದಿಕ್ಕಿನಲ್ಲಿ ಬುಡವೂ ಈಶಾನ್ಯದಲ್ಲಿ ಆಗ್ರವೂ ನೈರುತ್ಯದಲ್ಲಿ ಬುಡವೂ ವಾಯುವ್ಯದಲ್ಲಿ ಆಗ್ರವೂ ವಾಯುವ್ಯನಲ್ಲಿ ಬುಡವೂ ಈಶಾನ್ಯದಲ್ಲಿ ಆಗ್ರವೂ ಇರುವಂತೆ ಗರ್ಭೆಯನ್ನು ಪರಿಸ್ತರಣವಾಗಿ ಹಾಸಬೇಕು. ಹಿಂದೆ ಹೇಳಿದ ಇಧ್ಮವನ್ನು ತುದಿಯಲ್ಲಿಯೂ ಬುಡದಲ್ಲಿಯೂ ತುಪ್ಪದಲ್ಲಿ ನೆನಸಿ ಆರನೆಯದಾದ ನಮೋಹಿರಣ್ಯಬಾಹವೇ ಎಂಬ ಮಂತ್ರದಿಂದ ಲಾಲಾದೋಷ ಪರಿಹಾರಕ್ಕಾಗಿ ಹೋಮವನ್ನು ಮಾಡಬೇಕು.

೭೫. ಸದ್ಯೋಜಾತಾದಿ ಐದು ಮಂತ್ರಗಳಲ್ಲಿ ಮೊದಲನೆಯ ಮಂತ್ರವನ್ನು ಬಿಟ್ಟು ವಾಮದೇವಾದಿ ನಾಲ್ಕು ಮಂತ್ರಗಳಿಂದ ನಾಲ್ಕು

ಇಂದ್ರಾದಿಲೋಕ ಪಾಲಾಂಶ್ಚ ಪೂಜಯೇತ್ ॥೭೬॥
ವಜ್ರಾವರ್ತಪರ್ಯಂತಾನಪಿ ಪೂಜಯೇತ್ ॥೭೭॥
ವಾಗೀಶ್ವರವಾಗೀಶ್ವರೀ ಪೂಜಾದ್ಯೇನ ಮುದ್ವಾಸ್ಯ ಹುತಂ ವಿಸರ್ಜಯೇತ್ ॥೭೮॥
ಸ್ರುಕ್ ಸ್ರುವಸಂಸ್ಕಾರ ಮಥೋ ನಿರೀಕ್ಷಣ ಪ್ರೋಕ್ಷಣ ತಾಡನಾಭ್ಯುಕ್ಷಣಾದೀನಿ ಪೂರ್ವವತ್ ಸ್ರುವಂ ಚ ಹಸ್ತದ್ವಯೋ ಗೃಹೀತ್ವಾ ಸಂಸ್ಥಾಪನ ಮಾದ್ಯೇನ ತಾಡನಮಪಿ ಸ್ರುಕ್ ಸ್ರುವೋಪರಿ ದರ್ಭಾನುಲೇಖನ ಮೂಲಮಧ್ಯಮಾಗ್ರೇಣ ತ್ರಿತ್ವೇನ ಸ್ರುಕ್ ಶಕ್ತಿಂ ಸ್ರುವಮಪಿ ಶಂಭುಂ ದಕ್ಷಿಣ ಪಾರ್ಶ್ವೇ ಕುಶೋಪರಿ ಶಕ್ತ್ಯಯೋ ನಮಃ ಶಂಭವೇ ನಮಃ ॥೭೯॥

---

ದಿಕ್ಕುಗಳಲ್ಲಿಯೂ ಪರಿಧಿಸಹಿತವಾದ ವಿಷ್ಟರವನ್ನೂ ಹಾಕಬೇಕು. ಮೊದಲನೆಯದಾದ ಸದ್ಯೋಜಾತ ಮಂತ್ರದಿಂದ ಭದ್ರಾಸನದಮೇಲೆ ಬ್ರಹ್ಮ, ರುದ್ರ, ನಾರಾಯಣರನ್ನು ಪೂಜಿಸಬೇಕು.

೭೬-೭೭. ಆಮೇಲೆ ಇಂದ್ರಾದಿ ಅಷ್ಟದಿಕ್ಪಾಲಕರನ್ನೂ ವಜ್ರಾದಿ ತ್ರಿಶೂಲಪರ್ಯಂತವಾಗಿ ಅವರ ಆಯುಧಗಳನ್ನೂ ಪೂಜಿಸಬೇಕು.

೭೮. ವಾಗೀಶ್ವರ ವಾಗೀಶ್ವರೀದೇವೀ ಇವರನ್ನು ಪೂಜಿಸಿ ವಾಗೀಶ್ವರನನ್ನು ಉದ್ವಾಸನೆಮಾಡಿ ಹೋಮ ದ್ರವ್ಯಗಳ ಹೋಮವನ್ನು ಮಾಡಬೇಕು.

೭೯. ಅನಂತರದಲ್ಲಿ ಹಿಂದಿನಂತೆ ಸ್ರುಕ್‌ಸ್ರುವಗಳನ್ನು ನಿರೀಕ್ಷಣ ಪ್ರೋಕ್ಷಣ ತಾಡನ ಅಭ್ಯುಕ್ಷಣ ರೂಪಸಂಸ್ಕಾರಗಳನ್ನು ಮಾಡಿ ಎರಡು ಕೈಗಳಲ್ಲಿ ಸ್ರುಕ್‌ಸ್ರುವಗಳನ್ನು ತೆಗೆದುಕೊಂಡು ಸದ್ಯೋಜಾತ ಮಂತ್ರದಿಂದ ಸ್ಥಾಪಿಸಿ ಒಂದರಮೇಲೊಂದನ್ನು ಅಂದರೆ ಸ್ರುವದಮೇಲೆ ಸ್ರುಕ್ಕನ್ನು ಬಡಿದು ದರ್ಭೆಯ ಮೂಲಮಧ್ಯ ಅಗ್ರಗಳಿಂದ ಅವುಗಳ ಮೇಲೆ ಮೂರಾವೃತ್ತಿ ಅನುಲೇಖನಮಾಡಿ ಸ್ರುಕ್ಕನ್ನು ಶಕ್ತಿದೇವಿ

ತತೋಽಹ್ಯಂತಿ ಸೂತ್ರೇಣ ಸ್ರುಕ್ ಸ್ರುವೌ ತುರೀಯೇಣ ವೇಷ್ಟ
ಯೇದರ್ಚಯೇಚ್ಚ ॥೮೦॥

ಧೇನುಮುದ್ರಾಂ ದರ್ಶಯಿತ್ವಾ ತುರೀಯೇಣಾವಗುಂಠ್ಯ ಷಷ್ಠೇನ
ರಕ್ಷಾಂ ವಿಧಾಯ ಸ್ರುಕ್ ಸ್ರುವಸಂಸ್ಕಾರಃ ಪೂರ್ವಮೇವೋಕ್ತಃ ॥

ಪುನರಾಜ್ಯಸಂಸ್ಕಾರಃ ಪೂರ್ವಮೇವೋಕ್ತಃ ನಿರೀಕ್ಷಣ ಪ್ರೋಕ್ಷಣ
ತಾಡನಾಭ್ಯುಕ್ಷಣಾದೀನಿ ಪೂರ್ವವತ್ ॥೮೨॥

ಆಜ್ಯಪ್ರತಾಪನ ಮೈಶಾನ್ಯಾಂ ವಾ ಷಷ್ಠೇನ ವೇದ್ಯುಪರಿ ವಿನ್ಯಸ್ಯ
ಘೃತಪಾತ್ರಂ ವಿತಸ್ತಿಮಾತ್ರಂ ಕುಶಪವಿತ್ರಂ ವಾಮಹಸ್ತಾಂ
ಗುಷ್ಠಾನಾಮಿಕಾಗ್ರಂ ಗೃಹೀತ್ವಾ ದಕ್ಷಿಣಾಂಗುಷ್ಠಾನಾಮಿಕಾ
ಮೂಲಂ ಗೃಹೀತ್ವಾಽಗ್ನಿಜ್ವಾಲೋತ್ಪವನಂ ಸ್ವಾಹಾಂತೇನ ತುರೀ
ಯೇಣ ಪುನಃ ಷಟ್ ದರ್ಭಾನ್ ಗೃಹೀತ್ವಾ ಪೂರ್ವವತ್ ಸ್ವಾತ್ಮ
ಸಂಪ್ಲವನಂ ಸ್ವಾಹಾಂತೇನಾದ್ಯೇನ ಕುಶದ್ವಯ ಪವಿತ್ರಬಂಧನಂ
ಚಾದ್ಯೇನ ಘೃತೇ ನ್ಯಸೇದಿತಿ ಪವಿತ್ರೀಕರಣಂ ॥೮೩॥

---

ಎಂದೂ ಸ್ರುವವನ್ನು ಶಂಭುವೆಂದೂ ಭಾವಿಸಿ ದಕ್ಷಿಣದಿಕ್ಕಿನಲ್ಲಿ ದರ್ಭೆಯ ಮೇಲೆ ಶಕ್ತ್ಯೈ ನಮಃ ಶಂಭವೇ ನಮಃ ಎಂಬ ಮಂತ್ರದಿಂದ ಇರಿಸಬೇಕು.

೮೦. ಆ ಮೇಲೆ ಸಮೀಪದಲ್ಲಿರುವ ದಾರದಿಂದ ಸ್ರುಕ್‌ಸ್ರುವ ಗಳನ್ನು ನಾಲ್ಕನೆಯ ತತ್ಪುರುಷ ಮಂತ್ರದಿಂದ ಸುತ್ತಿ ಪೂಜೆಯನ್ನು ಮಾಡಬೇಕು.

೮೧. ಧೇನುಮುದ್ರೆಯನ್ನು ತೋರಿಸಿ ತತ್ಪುರುಷ ಮಂತ್ರದಿಂದ ಅವಗುಂಠನವನ್ನು ಮಾಡಿ ನಮೋಹಿರಣ್ಯ ಬಾಹವೇ ಎಂಬ ಮಂತ್ರದಿಂದ ರಕ್ಷೆಯನ್ನು ಮಾಡಬೇಕು. ಮಿಕ್ಕ ಸಂಸ್ಕಾರಗಳನ್ನು ಹಿಂದೆ ಹೇಳಿದಂತೆ ಮಾಡುವುದು.

೮೨. ಆ ಮೇಲೆ ಆಜ್ಯಸಂಸ್ಕಾರವನ್ನು ಮಾಡಬೇಕು. ಇದನ್ನು ಹಿಂದೆಯೇ ಹೇಳಿದೆ. ನಿರೀಕ್ಷಣಾದಿಕಾರ್ಯಗಳನ್ನು ಹಿಂದೆ ಹೇಳಿ ದಂತೆಯೇ ಮಾಡುವುದು.

೮೩. ವಾ ಎಂಬದರಿಂದ ಆಜ್ಯಸಂಸ್ಕಾರಕ್ರಮವನ್ನು ಮತ್ತೊಂದು

**ದರ್ಭದ್ವಯಂ ಪ್ರಗೃಹ್ಯಾಗ್ನಿ ಪ್ರಜ್ವಾಲನಂ ಘೃತಂ ತ್ರಿಧಾ ವರ್ತಯೇತ್ । ಸಂಪ್ರೋಕ್ಷ್ಯಾಗ್ನೌ ನಿಧಾಪಯೇದಿತಿ ನೀರಾಜನಂ ॥೮೪॥**

**ಪುನರ್ದರ್ಭಾನ್ ಗೃಹೀತ್ವಾ ಕೀಟಕಾದಿ ನಿರೀಕ್ಷ್ಯ ಘೃತ್ಯೇಣ ಸಂಪ್ರೋಕ್ಷ್ಯ ದರ್ಭಾನಗ್ನೌ ನಿಧಾಯ ಇತ್ಯವದ್ಯೋತನಂ ॥೮೫॥**

---

ಬಗೆಯಲ್ಲಿ ಹೇಳಲಾಗುವುದು. ಆಜ್ಯಪಾತ್ರೆಯನ್ನು ಈಶಾನ್ಯದಿಕ್ಕಿನಲ್ಲಿ ನಮೋಹಿರಣ್ಯಬಾಹವೇ ಮಂತ್ರದಿಂದ ವೇದಿಯ ಮೇಲಿಟ್ಟು, ತುಪ್ಪವನ್ನು ಕಾಯಿಸಬೇಕು. ಒಂದು ಗೇಣುದ್ದದ ದರ್ಭೆಯ ಪವಿತ್ರದ ಅಗ್ರವನ್ನು ಎಡಗೈ ಹೆಬ್ಬೆರಳು ಮತ್ತು ಅನಾಮಿಕಗಳಿಂದ ಹಿಡಿದು ಅದರ ಬುಡವನ್ನು ಬಲಗೈಯ್ಯ ಹೆಬ್ಬೆರಳು ಮತ್ತು ಅನಾಮಿಕಗಳಿಂದ ಹಿಡಿದು ತತ್ಪುರುಷ ಮಂತ್ರವನ್ನು ಸ್ವಾಹಾಂತವಾಗಿ ಉಚ್ಚರಿಸಿ ಅಗ್ನಿಜ್ವಾಲೆಯೊಳಕ್ಕೆ ಆ ತುಪ್ಪವನ್ನು ಪವಿತ್ರದಲ್ಲಿ ನೆನಸಿ ಮೇಲಕ್ಕೆ ಎರಚಬೇಕು. ಪುನಃ ಆರು ದರ್ಭೆಗಳನ್ನು ತೆಗೆದುಕೊಂಡು ಸ್ವಾಹಾಂತವಾದ ಸದ್ಯೋಜಾತ ಮಂತ್ರದಿಂದ ಹಿಂದಿನಂತೆ ತನ್ನಮೇಲೆ ಎರಚಿಕೊಳ್ಳಬೇಕು. ಎರಡು ದರ್ಭೆಯ ಪವಿತ್ರ ಕಟ್ಟಿದ ಭಾಗವನ್ನು ಸದ್ಯೋಜಾತ ಮಂತ್ರದಿಂದ ಆ ತುಪ್ಪದಪಾತ್ರೆಯೊಳಗೆ ಹಾಕಬೇಕು. ಇದು ಘೃತಪವಿತ್ರೀಕರಣವು.

೮೪. ಬಳಿಕ ಎರಡು ದರ್ಭೆಗಳನ್ನು ತೆಗೆದುಕೊಂಡು ಅಗ್ನಿಯಲ್ಲಿ ಹತ್ತಿಸಿ ತುಪ್ಪದ ಪಾತ್ರೆಯನ್ನು ಮೂರಾವೃತ್ತಿ ಸುತ್ತಿಸಿ ನೀರಿನಿಂದ ಆ ದರ್ಭೆಯನ್ನು ಪ್ರೋಕ್ಷಿಸಿ ಅಗ್ನಿಯಲ್ಲಿ ಹಾಕಬೇಕು. ಇದು ನೀರಾಜನ ಕರ್ಮವು.

೮೫. ಮತ್ತೆ ದರ್ಭೆಗಳನ್ನು ತೆಗೆದುಕೊಂಡು ತುಪ್ಪದಲ್ಲಿ ಹುಳುಗಳು ಮುಂತಾದುವು ಇವೆಯೋ ಎಂದು ನೋಡಿ ನೀರಿನಿಂದ ಆ ದರ್ಭೆಯನ್ನು ಪ್ರೋಕ್ಷಿಸಿ ಅಗ್ನಿಗೆ ಹಾಕುವುದು ಇದನ್ನು ಅವದ್ಯೋತನವೆಂದು ಹೇಳುವರು.

ದರ್ಭದ್ವಯಂ ಗೃಹೀತ್ವಾಽಗ್ನಿಜ್ವಾಲಯಾ ಘೃತಂ ನಿರೀಕ್ಷಯೇತ್ ॥
ದರ್ಭೇಣ ಗೃಹೀತ್ವಾ ತೇನಾಗ್ರದ್ವಯೇನ ಶುಕ್ಲಪಕ್ಷದ್ವಯೇನಾ ದ್ಯೇನೇತಿ ಕೃಷ್ಣಪಕ್ಷ ಸಂಪಾತನಂ ಘೃತಂ ತ್ರಿಭಾಗೇನ ವಿಭಜ್ಯ ಸ್ರುವೇಣೈಕ ಭಾಗೇನ ಆಜ್ಯೇನಾಗ್ನಯೇ ಸ್ವಾಹಾ ದ್ವಿತೀಯೇ ನಾಜ್ಯೇನ ಸೋಮಾಯ ಸ್ವಾಹಾ ಆಜ್ಯೇನ ಓಂ ಅಗ್ನೀಷೋಮಾಭ್ಯಾಂ ಸ್ವಾಹಾ ಆಜ್ಯೇನಾಗ್ನಯೇಸ್ವಿಷ್ಟಕೃತೇ ಸ್ವಾಹಾ ॥೮೭॥
ಪುನಃ ಕುಶೇನ ಗೃಹೀತ್ವಾ ಸಂಹಿತಾಽಭಿಮಂತ್ರೇಣ ನಮೋಽಂತೇನಾಭಿ ಮಂತ್ರಯೇತ್ ॥೮೮॥
ಅಭಿಮಂತ್ರ್ಯ ಧೇನುಮುದ್ರಾ ಪ್ರದರ್ಶನ ಕವಚಾವ ಗುಂಠನಾಸ್ತ್ರೇಣ ರಕ್ಷಾಂ ಅಥ ಸಂಸ್ಕೃತೇ ನಿಧಾಪಯೇತ್ ಆಜ್ಯಸಂಸ್ಕಾರಃ ॥

---

೮೬. ಎರಡು ದರ್ಭೆಗಳನ್ನು ಹಿಡಿದು ಬೆಂಕಿಯನ್ನು ಹತ್ತಿಸಿ ಅದರ ಉರಿಯಿಂದ ತುಪ್ಪವನ್ನು ನೋಡುವುದು ಇದು ನಿರೀಕ್ಷಣ ಕರ್ಮವು.

೮೭. ಮತ್ತೊಂದು ದರ್ಭೆಯಿಂದ ತುಪ್ಪ ದೊಳಗಿದ್ದ ಪವಿತ್ರವನ್ನು ತೆಗೆದುಕೊಂಡು ಆ ಪವಿತ್ರದ ದರ್ಭೆಯ ಎರಡು ಅಗ್ರಗಳಿಂದ ಸದ್ಯೋಜಾತ ಮಂತ್ರದಿಂದ ಶುಕ್ಲಪಕ್ಷದ ಎರಡು ಭಾಗವನ್ನು ಕೃಷ್ಣ ಪಕ್ಷ ಭಾಗದಿಂದ ಬೇರೆಯಾಗುವಂತೆ ಮೂರುಭಾಗಮಾಡಿ ಕೃಷ್ಣಪಕ್ಷ ಭಾಗವಾದ ಒಂದು ಭಾಗದಿಂದ ಸ್ರುವದಲ್ಲಿ ತುಪ್ಪವನ್ನು ತುಂಬಿ ಅಗ್ನಯೇ ಸ್ವಾಹಾ ಎಂದೂ, ಎರಡನೆಯದಾದ ಶುಕ್ಲಪಕ್ಷ ಭಾಗದಿಂದ ತುಂಬಿ ಸೋಮಾಯಸ್ವಾಹಾ ಎಂದೂ, "ಓಂ ಅಗ್ನೀ ಷೋಮಾಭ್ಯಾಂ ಸ್ವಾಹಾ" ಎಂದೂ, ಅಗ್ನಯೇಸ್ವಿಷ್ಟ ಕೃತೇ ಸ್ವಾಹಾ ಎಂದೂ ಹೋಮಗಳನ್ನು ಮಾಡಬೇಕು.

೮೮. ಮತ್ತೆ ದರ್ಭೆಯಿಂದ ಪವಿತ್ರವನ್ನು ಹಿಡಿದು ವೇದಮಂತ್ರವನ್ನು ನಮೋಽಂತವಾಗಿ ಹೇಳಿ ಅಭಿಮಂತ್ರಿಸಬೇಕು.

೮೯. ಹೀಗೆ ಅಭಿಮಂತ್ರಿಸಿ ಧೇನುಮುದ್ರೆಯನ್ನು ತೋರಿಸಿ

**ಆಜ್ಯೇನ ಸ್ರುಗ್ಸ್ವದನೇನ ಚಕ್ರಾಭಿಘಾರಣಂ ಶಕ್ತಿಬೀಜಾದೀಶಾನ ಮೂರ್ತಯೇ ಸ್ವಾಹಾ । ಪೂರ್ವವತ್ಪುರುಷವಕ್ತ್ರಾಯ ಸ್ವಾಹಾ ಅಘೋರ ಹೃದಯಾಯ ಸ್ವಾಹಾ ವಾಮದೇವಾಯ ಗುಹ್ಯಾಯ ಸ್ವಾಹಾ ಸದ್ಯೋಜಾತ ಮೂರ್ತಯೇ ಸ್ವಾಹಾ ॥ ಇತಿವಕ್ತ್ರೋದ್ಘಾಟನಂ ॥೯೦॥**

**ಈಶಾನ ಮೂರ್ತಯೇ ತತ್ಪುರುಷ ವಕ್ತ್ರಾಯ ಸ್ವಾಹಾ ತತ್ಪುರುಷ ವಕ್ತ್ರಾಯ ಅಘೋರಹೃದಯಾಯ ಸ್ವಾಹಾ ಅಘೋರಹೃದಯಾಯ ವಾಮ ಗುಹ್ಯಾಯ ಸದ್ಯೋಜಾತ ಮೂರ್ತಯೇ ಸ್ವಾಹಾ ಇತಿ ವಕ್ತ್ರಸಂಧಾನಂ ॥೯೧॥**

**ಈಶಾನ ಮೂರ್ತಯೇ ತತ್ಪುರುಷಾಯ ವಕ್ತ್ರಾಯ ಅಘೋರಹೃದಯಾಯ ವಾಮದೇವಾಯ ಗುಹ್ಯಾಯ ಸದ್ಯೋಜಾತಾಯ ಸ್ವಾಹಾ ಇತಿವಕ್ತ್ರೈಕ್ಯಕರಣಂ ॥೯೨॥**

---

ಕವಚ ಮಂತ್ರದಿಂದ ಅವಗುಂಠನವನ್ನೂ ಅಸ್ತ್ರಮಂತ್ರದಿಂದ ರಕ್ಷೆಯನ್ನೂ ಮಾಡಿ ಸಂಸ್ಕಾರಮಾಡಿದ ಪವಿತ್ರಗಳೆರಡನ್ನೂ ಅಗ್ನಿಯಲ್ಲಿ ಹಾಕಬೇಕು. ಈ ರೀತಿಯಲ್ಲಿ ಆಜ್ಯಸಂಸ್ಕಾರವನ್ನು ಮಾಡಬೇಕು

೯೦. ಹ್ರೀಂ ಎಂಬ ಶಕ್ತಿಬೀಜ ಮಂತ್ರದಿಂದ ಸ್ರುಕ್ಕಿನಲ್ಲಿ ತುಪ್ಪವನ್ನು ತುಂಬಿಕೊಂಡು ಹವಿಸ್ಸಿಗೆ ಚಕ್ರಾಕಾರವಾಗಿ ಅಭಿಘಾರವನ್ನು ಮಾಡಬೇಕು. ಹಿಂದಿನಂತೆ ಈಶಾನಮೂರ್ತಯೇ ಸ್ವಾಹಾ ಪುರುಷ ವಕ್ತ್ರಾಯಸ್ವಾಹಾ ಅಘೋರ ಹೃದಯಾಯಸ್ವಾಹಾ ವಾಮದೇವಾಯ ಗುಹ್ಯಾಯಸ್ವಾಹಾ ಸದ್ಯೋಜಾತ ಮೂರ್ತಯೇಸ್ವಾಹಾ ಎಂದು ಹೋಮಗಳನ್ನು ಮಾಡಬೇಕು. ಇದು ವಕ್ತ್ರೋದ್ಘಾಟನವೆನಿಸುವುದು.

೯೧. ಈ ಮೂರು ಸ್ವಾಹಾಂತವಾದ ಮಂತ್ರಗಳಿಂದ ಹೋಮಗಳನ್ನು ಮಾಡಬೇಕು. ಇದು ವಕ್ತ್ರಸಂಧಾನವೆನಿಸುವುದು.

೯೨. ಈ ಸ್ವಾಹಾಂತವಾದ ಒಂದು ಮಂತ್ರದಿಂದ ಹೋಮವನ್ನು ಮಾಡಿ ವಕ್ತ್ರೈಕ್ಯವನ್ನು ಮಾಡಬೇಕು.

ಶಿವಾಗ್ನಿಂ ಜನಯಿತ್ವೈವಂ ಸರ್ವಕರ್ಮಾಣಿ ಕಾರಯೇತ್ ।
ಕೇವಲಂ ಜಿಹ್ವಯಾ ವಾಽಪಿ ಶಾಂತಿಕಾದ್ಯಾನಿ ಸರ್ವದಾ ॥೯೩॥

ಗರ್ಭಾಧಾನಾದಿ ಕಾರ್ಯೇಷು ವಹ್ನೇಃ ಪ್ರತ್ಯೇಕಮಂವ್ಯಯ(ಯಾಃ) ।
ದಶ ಆಹುತಯೋ ದೇಯಾ ಯೋನಿ ಬೀಜೇನ ಪಂಚಧಾ ॥೯೪॥

ಶಿವಾಗ್ನೌ ಕಲ್ಪಯೇದ್ದಿವ್ಯಂ ಪೂರ್ವವತ್ಪರಮಾಸನಂ ।
ಆವಾಹನಂ ತಥಾ ನ್ಯಾಸಂ ಯಥಾ ದೇವೇ ತಥಾಽರ್ಚನಂ ॥೯೫॥

ಮೂಲಮಂತ್ರಂ ಸಕೃಜ್ಜಪ್ತ್ವಾ ದೇವದೇವಂ ಪ್ರಣಮ್ಯ ಚ ।
ಪ್ರಾಣಾಯಾಮತ್ರಯಂ ಕೃತ್ವಾ ಸಗರ್ಭಂ ಸರ್ವಸಂಮತಂ ॥೯೬॥

ಪರಿಷೇಚನ ಪೂರ್ವಂ ಚ ತದಿಧ್ಮಮಭಿಘಾರ್ಯ ಚ ।
ಜುಹುಯಾದಗ್ನಿ ಮಧ್ಯೇ ತು ಜ್ವಲಿತೇಽಥ ಮಹಾಮುನೇ ॥೯೭॥

---

೯೩. ಈ ರೀತಿಯಲ್ಲಿ ಶಿವಾಗ್ನಿಯನ್ನು ಹುಟ್ಟಿಸಿ ಆ ಅಗ್ನಿಯಲ್ಲಿ ಸಮಸ್ತ ಕರ್ಮಗಳನ್ನೂ ಮಾಡಬೇಕು. ಅಥವಾ ಹಿಂದೆಯೇ ಹೇಳಿದಂತೆ ಜಿಹ್ವಾ ಹೋಮಗಳನ್ನು ಮಾಡಿ ಶಾಂತಿಕ, ಪೌಷ್ಟಿಕ ಮುಂತಾದ ಕರ್ಮಗಳನ್ನು ಮಾಡಬೇಕು.

೯೪. ಗರ್ಭಾಧಾನಾದಿ ಕರ್ಮಗಳಲ್ಲಿ ಅಗ್ನಿಯಲ್ಲಿ ಬೇರೆಯಾಗಿ ಯೋನಿಬೀಜವಾದ ಹ್ರೀಂಕಾರ ಮಂತ್ರದಿಂದ ಹತ್ತು ಅಥವಾ ಐದು ಆಹುತಿಗಳನ್ನು ಹೋಮ ಮಾಡಬೇಕು.

೯೫. ಶಿವಾಗ್ನಿಕಾರ್ಯದಲ್ಲಿಯೂ, ಶಿವಪೂಜೆಯಲ್ಲಿ ಹೇಗೆ ಪೂಜೆಯನ್ನು ಮಾಡಿತೋ ಹಾಗೆಯೇ, ಅಗ್ನಿಗೂ ಆಸನ ಆವಾಹನ ನ್ಯಾಸ ಮುಂತಾದ ಪೂಜೆಗಳನ್ನು ಮಾಡಬೇಕು.

೯೬–೯೭. ಮಹಾಮುನಿಯಾದ ಸನತ್ಕುಮಾರನೇ, ಬಳಿಕ ಮೂಲ ಮಂತ್ರವಾದ ಪಂಚಾಕ್ಷರ ಮಂತ್ರವನ್ನು ಒಂದಾವೃತ್ತಿ ಜಪಿಸಿ ದೇವ ದೇವನಾದ ಶಿವನಿಗೆ ನಮಸ್ಕಾರವನ್ನು ಮಾಡಿ ಸಗರ್ಭವಾದ ಮೂರು ಪ್ರಾಣಾಯಾಮಗಳನ್ನುಮಾಡಿ ಇಧ್ಮಕ್ಕೆ ಪರಿಷೇಚನ ಅಭಿಘಾರಗಳನ್ನು ಮಾಡಿ ಉರಿಯುತ್ತಿರುವ ಅಗ್ನಿಯಲ್ಲಿ ಹೋಮಮಾಡಬೇಕು.

ಆಘಾರಾವಪಿ ಚಾದಾಯ ಚಾಜ್ಯೇನೈವ ತು ಷಣ್ಮುಖೇ ।
ಆಜ್ಯಭಾಗೌ ತು ಜುಹುಯಾದ್ವಿಧಿನೈವ ಘೃತೇನ ಚ ॥೯೮॥

ಚಕ್ಷುಷೀ ಚಾಜ್ಯಭಾಗೌ ತು ಚಾಗ್ನಯೇ ಚ ತಥೋತ್ತರೇ ।
ಆತ್ಮನೋ ದಕ್ಷಿಣೇ ಚೈವ ಸೋಮಾಯೇತಿ ದ್ವಿಜೋತ್ತಮ ॥೯೯॥

ಪ್ರತ್ಯಙ್ಮುಖಸ್ಯ ದೇವಸ್ಯ ಶಿವಾಗ್ನೇ ರ್ಬ್ರಹ್ಮಣಃ ಸುತ ।
ಅಕ್ಷ್ಣಿ ವ್ಯ ದಕ್ಷಿಣಂ ಚೈವ ಚೋತ್ತರಂ ಚೋತ್ತರಂ ತಥಾ ॥೧೦೦॥

ದಕ್ಷಿಣಂ ತು ಮಹಾಭಾಗ ಭವತ್ಯೇವ ನ ಸಂಶಯಃ ।
ಆಜ್ಯೇನಾಹುತಯಸ್ತತ್ರ ಮೂಲೇನೈವ ದಶೈವ ತು ॥೧೦೧॥

---

೯೮. ಸದ್ಯೋಜಾತಾದಿ ಆರು ಮಂತ್ರಗಳೇ ಮುಖದಂತಿರುವ ಅಗ್ನಿಯಲ್ಲಿ ತುಪ್ಪದಿಂದಲೇ ಆಘಾರ ಹೋಮವನ್ನು ಮಾಡಿ ಅದೇ ತುಪ್ಪದಿಂದ ವಿಧಿಗನುಸಾರವಾಗಿ ಆಜ್ಯಭಾಗ ಹೋಮವನ್ನು ಮಾಡಬೇಕು.

೯೯. ಅಗ್ನಯೇ ಸ್ವಾಹಾ ಎಂದು ಉತ್ತರದಲ್ಲೂ ಸೋಮಾಯ ಸ್ವಾಹಾ ಎಂದು ದಕ್ಷಿಣದಲ್ಲಿಯೂ ಹೋಮಮಾಡಬೇಕು. ಎಲೈ ಬ್ರಾಹ್ಮಣ ಶ್ರೇಷ್ಠನೇ, ಈ ಹೋಮವು ಆಜ್ಯಭಾಗವೆಂಬ ಚಕ್ಷುಸ್ಸಿನ ಹೋಮವು.

೧೦೦. ಮಹಾ ಮಹಿಮನಾದ ಬ್ರಹ್ಮ ಪುತ್ರನೇ, ಹೀಗೆ ಅಪಸವ್ಯವಾಗಿ ಚಕ್ಷುಹೋಮಕ್ಕೆ ಕಾರಣವೇನೆಂದರೆ ಅಗ್ನಿ ದೇವನು ಯಜಮಾನನ ಅಭಿಮುಖನಾಗಿರುವುದರಿಂದ ಆ ದೇವನ ಬಲಗಣ್ಣು ಉತ್ತರಕ್ಕೂ ಎಡಗಣ್ಣು ದಕ್ಷಿಣಕ್ಕೂ ಇರುವುದು. ಹೀಗೆ ಹೋಮಮಾಡಿದರೂ ಪೂರ್ವಾಭಿಮುಖನಾದ ಅಗ್ನಿದೇವನಿಗೆ ಪ್ರದಕ್ಷಿಣಾಕಾರವಾಗಿ ಹೋಮ ಮಾಡಿದಂತೆ ಆಯಿತು.

೧೦೧–೧೦೩. ಈ ಸಂದರ್ಭದಲ್ಲಿ ಪಂಚಾಕ್ಷರಮಂತ್ರದಿಂದ ಹತ್ತು ಆಜ್ಯಹೋಮವನ್ನು ಮಾಡಬೇಕು. ಚರುಹೋಮದಿಂದ ಎಷ್ಟು

ಚರುಣಾ ಚ ಯಥಾವದ್ಧಿ ಸಮಿದ್ಭಿಶ್ಚ ತಥಾ ಸ್ಮೃತಂ ।
ಪೂರ್ಣಾಹುತಿಂ ತತೋ ದದ್ಯಾನ್ಮೂಲ ಮಂತ್ರೇಣ ಸುವ್ರತ ॥೧೦೨॥

ಸರ್ವಾವರಣ ದೇವಾನಾಂ ಪಂಚ ಪಂಚೈವ ಪೂರ್ವವತ್ ।
ಈಶಾನಾದಿಕ್ರಮೇಣೈವ ಶಕ್ತಿಬೀಜಕ್ರಮೇಣ ಚ ॥೧೦೩॥

ಪ್ರಾಯಶ್ಚಿತ್ತಮಘೋರೇಣ ಸ್ವಿಷ್ಟಾಂತಂ ಪೂರ್ವವತ್ಸ್ಮೃತಂ ।
ತ್ರಿಪ್ರಕಾರಂ ಮಯಾ ಪ್ರೋಕ್ತಮಗ್ನಿಕಾರ್ಯಂ ಸುಶೋಭನಂ ॥

ಯಥಾಽವಸರಮೇವಂ ಹಿ ಕುರ್ಯಾನ್ನಿತ್ಯಂ ಮಹಾಮುನೇ ।
ಜೀವಿತಾಂತೇ ಲಭೇತ್ಸ್ವರ್ಗಂ ಲಭತೇ ಅಗ್ನಿದೀಪನಂ ॥೧೦೫॥

ನರಕಂ ಚೈವ ನಾಪ್ನೋತಿ ಯಸ್ಯ ಕಸ್ಯಾಪಿ ಕರ್ಮಣಃ ।
ಅಹಿಂಸಕಂ ಚರೇದ್ಧೀಮಂ ಸಾಧಕೋ ಮುಕ್ತಿಕಾಂಕ್ಷಕಃ ॥೧೦೬॥

---

ಫಲವೋ ಸಮಿತ್ತನ್ನು ಹೋಮ ಮಾಡಿದರೂ ಅಷ್ಟೇ ಫಲವು. ಈ ಹೋಮಗಳೆಲ್ಲವೂ ಆದ ಮೇಲೆ ಮೂಲ ಮಂತ್ರದಿಂದ ಪೂರ್ಣಾಹುತಿ ಹೋಮವನ್ನು ಮಾಡಬೇಕು

೧೦೩. ಸಮಸ್ತ ಆವರಣ ದೇವತೆಗಳಿಗೂ ಈಶಾನನ ಮಂತ್ರ ಕ್ರಮ ದಿಂದಲೂ ಶಕ್ತಿ ಬೀಜಕ್ರಮದಿಂದಲೂ ಐದೈದು ಹೋಮಗಳನ್ನು ಹಿಂದಿ ನಂತೆ ಮಾಡಬೇಕು. ಕೊನೆಗೆ ಅಘೋರ ಮಂತ್ರದಿಂದ ಪ್ರಾಯಶ್ಚಿತ್ತ ಹೋಮವನ್ನೂ ಸ್ವಿಷ್ಟಕೃತು ಹೋಮವನ್ನೂ ಮಾಡಬೇಕು

೧೦೪-೧೦೫. ಮಹಾ ಮುನಿಯಾದ ಸನತ್ಕುಮಾರನೇ, ಮಂಗಳಕರ ವಾದ ಮೂರು ವಿಧವಾದ ಅಗ್ನಿಕಾರ್ಯಕ್ರಮವನ್ನು ಹೇಳಿರುವೆನು. ಸಂದ ರ್ಭಾನುಸಾರವಾಗಿ ಮನುಜನು ತನ್ನ ಸೌಕರ್ಯಕ್ಕೆ ತಕ್ಕಂತೆ ಪ್ರತಿದಿನವೂ ಅಗ್ನಿಕಾರ್ಯವನ್ನು ಮಾಡಬೇಕು. ಹೀಗೆ ಮಾಡುವ ಮನುಷ್ಯನು ಇಹದಲ್ಲಿ ಅಜೀರ್ಣ ರೋಗಾದಿಗಳ ಬಾಧೆಯಿಲ್ಲದೆ ಆಹಾರ ಪಚನ ರೂಪವಾದ ಆರೋಗ್ಯವನ್ನು ಪಡೆಯುವನಲ್ಲದೆ ಜೀವಿತಾಂತ್ಯದಲ್ಲಿ ಸ್ವರ್ಗಸುಖವನ್ನೂ ಪಡೆಯುವನು.

೧೦೬. ಪ್ರತಿದಿನವೂ ಅಗ್ನಿಕಾರ್ಯವನ್ನು ಮಾಡುವ ಮನುಷ್ಯನು ಯಾವ ದುಷ್ಕರ್ಮವನ್ನು ಮಾಡಿದರೂ ಅದಕ್ಕೆ ನರಕ ದುಃಖವು ಪ್ರಾಪ್ತ

ಹೃದಿ ಸ್ಥಂ ಚಿಂತಯೇದಗ್ನಿಂ ಧ್ಯಾನ ಯಜ್ಞೇನ ಹೋಮಯೇತ್ ।
ದೇಹಸ್ಥಂ ಸರ್ವಭೂತಾನಾಂ ಶಿವಂ ಸರ್ವ ಜಗತ್ಪತಿಂ ॥೧೦೭॥
ತಂ ಜ್ಞಾತ್ವಾ ಹೋಮಯೇದ್ಭಕ್ತ್ಯಾ ಪ್ರಾಣಾಯಾಮೇನ ನಿತ್ಯಶಃ ।
ಬಾಹ್ಯಹೋಮ ಪ್ರದಾತಾ ತು ಪಾಷಾಣೇ ದರ್ದುರೋ ಭವೇತ್ ॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ಪಂಚವಿಂಶತಿ
ತಮೋಽಧ್ಯಾಯಃ

---

ವಾಗುವುದಿಲ್ಲ. ಮೋಕ್ಷಾಪೇಕ್ಷೆಯುಳ್ಳವನು ಅಹಿಂಸಾರೂಪವಾದ ಹೋಮವನ್ನು ಮಾಡಬೇಕು.

೧೦೭–೧೦೮. ಅಹಿಂಸಾರೂಪವಾದ ಹೋಮವಾವುದೆಂದರೆ, ಮೋಕ್ಷಾಪೇಕ್ಷೆಯಿಂದ ಮಾನುಜನು ತನ್ನ ಮನಸಿನಲ್ಲಿಯೇ ಶಿವಾಗ್ನಿಯು ಇರುವುದೆಂದು ಚಿಂತಿಸಿ ಧ್ಯಾನರೂಪವಾದಯಜ್ಞದಿಂದ ಹೋಮವನ್ನು ಮಾಡಬೇಕು. ಸಮಸ್ತಲೋಕಕ್ಕೂ ಸ್ವಾಮಿಯಾದ ಶಿವನು ಸಮಸ್ತ ಪ್ರಾಣಿಗಳ ದೇಹದಲ್ಲಿಯೂ ಅಗ್ನಿರೂಪನಾಗಿಯೂ ಇರುವನೆಂದು ತಿಳಿದು ಪ್ರತಿದಿನವೂ ಪ್ರಾಣಾಯಾಮವನ್ನು ಮಾಡಿ ಭಕ್ತಿಯಿಂದ ಧ್ಯಾನರೂಪವಾದ ಹೋಮವನ್ನು ಮಾಡಬೇಕು. ಮನಸ್ಸಿನಲ್ಲಿ ಶಿವನ ಧ್ಯಾನವನ್ನು ಮಾಡದೆ ಹೊರಗಿನ ಕಾರ್ಯಕಲಾಪಗಳಿಂದ ಹೋಮವನ್ನು ಮಾಡತಕ್ಕವನು ಕಲ್ಲಿನಲ್ಲಿ ವಾಸಮಾಡುವ ಕಪ್ಪೆಯಾಗಿ ಹುಟ್ಟುವನು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಇಪ್ಪತ್ತೈದನೆಯ
ಅಧ್ಯಾಯವು ಮುಗಿದುದು

ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
ಷಡ್ವಿಂಶತಿತಮೋಽಧ್ಯಾಯಃ

॥ ಶೈಲಾದಿ ರುವಾಚ ॥

**ಅಥವಾ ದೇವ ಮೀಶಾನಂ ಲಿಂಗೇ ಸಂಪೂಜಯೇಚ್ಛಿವಂ ।**
**ಬ್ರಾಹ್ಮಣಃ ಶಿವಭಕ್ತಶ್ಚ ಶಿವಧ್ಯಾನ ಪರಾಯಣಃ ॥ ೧ ॥**
**ಅಗ್ನಿರಿತ್ಯಾದಿನಾ ಭಸ್ಮ ಗೃಹೀತ್ವಾ ಅಗ್ನಿಹೋತ್ರಜಂ ।**
**ಉದ್ಧೂಲಯೇದ್ಧಿ ಸರ್ವಾಂಗ ಮಾಪಾದ ತಲ ಮಸ್ತಕಂ ॥ ೨ ॥**
**ಆಚಾಮೇ ದ್ಬ್ರಹ್ಮ ತೀರ್ಥೇನ ಬ್ರಹ್ಮಸೂತ್ರೀ ಹ್ಯುದಙ್ಮುಖಃ ।**
**ಅಥೋಂನಮಃ ಶಿವಾಯೇತಿ ತನುಂ ಕೃತ್ವಾಽಽತ್ಮನಃ ಪುನಃ ॥ ೩ ॥**

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಇಪ್ಪತ್ತಾರನೆಯ ಅಧ್ಯಾಯವು

೧. ನಂದಿಯು ಹೇಳಿದನು :— ಈ ಅಧ್ಯಾಯದಲ್ಲಿ ನಂದಿಯು ಅಘೋರಾರ್ಚನ ರೂಪವಾದ ಬೇರೆ ಪಕ್ಷವನ್ನು ಹೇಳುತ್ತಾರೆ. ಶಿವ ಭಕ್ತನಾಗಿರುವ, ಯಾವಾಗಲೂ ಶಿವನನ್ನು ಧ್ಯಾನಿಸತಕ್ಕ ಬ್ರಾಹ್ಮಣನು ದೇವನಾದ ಈಶಾನನೆಂಬ ಶಿವನನ್ನು ಲಿಂಗದಲ್ಲಿ ಪೂಜಿಸಬೇಕು.

೨. "ಅಗ್ನಿರಿತಿ ಭಸ್ಮ, ವಾಯುರಿತಿ ಭಸ್ಮ, ಜಲಮಿತಿ ಭಸ್ಮ, ಸ್ಥಲಮಿತಿ ಭಸ್ಮ, ವ್ಯೋಮೇತಿ ಭಸ್ಮ," ಇತ್ಯಾದಿ ಮಂತ್ರಗಳಿಂದ ಅಗ್ನಿಹೋತ್ರದ ಭಸ್ಮವನ್ನು ತೆಗೆದುಕೊಂಡು ಪಾದದಿಂದ ತಲೆಯವರೆಗಿನ ಸರ್ವಾಂಗಗಳಿಗೂ ಬಳಿದುಕೊಳ್ಳಬೇಕು.

೩. ಹೀಗೆ ಭಸ್ಮವನ್ನು ಲೇಪಿಸಿಕೊಂಡ ಬಳಿಕ ಉತ್ತರಾಭಿಮುಖ ವಾಗಿ ಯಜ್ಞೋಪವೀತವನ್ನು ಬ್ರಹ್ಮಸೂತ್ರವನ್ನಾಗಿ ಹಾಕಿಕೊಂಡು,

ದೇವಂ ಚ ತೇನ ಮಂತ್ರೇಣ ಪೂಜಯೇ ತ್ಪ್ರಣವೇನ ಚ ।
ಸರ್ವಸ್ಮಾ ದಧಿಕಾ ಪೂಜಾ ಅಘೋರೇಶಸ್ಯ ಶೂಲಿನಃ ॥ ೪ ॥

ಸಾಮಾನ್ಯಂ ಯಜನಂ ಸರ್ವ ಮಗ್ನಿಕಾರ್ಯಂ ಚ ಸುವ್ರತ ।
ಮಂತ್ರಭೇದಃ ಪ್ರಭೋಸ್ತಸ್ಯ ಅಘೋರಧ್ಯಾನ ಮೇವಚ ॥ ೫ ॥

ಮಂತ್ರ :— ಅಘೋರೇಭ್ಯೋಽಥ ಘೋರೇಭ್ಯೋ ಘೋರಘೋರ ತರೇಭ್ಯಃ । ಸರ್ವೇಭ್ಯಃ ಸರ್ವಶರ್ವೇಭ್ಯೋ ನಮಸ್ತೇ ಅಸ್ತು ರುದ್ರ ರೂಪೇಭ್ಯಃ ॥ ೬ ॥

ಅಘೋರೇಭ್ಯಃ ಪ್ರಶಾಂತ ಹೃದಯಾಯ ನಮಃ ।
ಅಥ ಘೋರೇಭ್ಯಃ ಸರ್ವಾತ್ಮಬ್ರಹ್ಮ ಶಿರಸೇ ಸ್ವಾಹಾ ॥
ಘೋರ ಘೋರತರೇಭ್ಯಃ ಜ್ವಾಲಾಮಾಲಿನೇ ಶಿಖಾಯೈ ವಷಟ್ ।
ಸರ್ವೇಭ್ಯಃ ಸರ್ವಶರ್ವೇಭ್ಯಃ ಪಿಂಗಲ ಕವಚಾಯ ಹುಂ ॥
ನಮಸ್ತೇ ಅಸ್ತು ರುದ್ರರೂಪೇಭ್ಯಃ ನೇತ್ರತ್ರಯಾಯ ವೌಷಟ್ ।
ಸಹಸ್ರಾಕ್ಷಾಯ ದುರ್ಭೇದಾಯ ಪಾಶುಪತಾಸ್ತ್ರಾಯ ಹುಂ ಫಟ್ ॥

---

ಬ್ರಹ್ಮಸೂತ್ರವೆಂಬ ಅಂಜಲಿ ವಿಶೇಷದಿಂದ ಆಚಮನಮಾಡಬೇಕು. ಅನಂತರ ''ಓಂ ನಮಃ ಶಿವಾಯ'' ಎಂಬ ಮಂತ್ರದಿಂದ ತನ್ನ ಶರೀರ ವನ್ನು ಸರಿಯಾಗಿಟ್ಟುಕೊಳ್ಳಬೇಕು. (ಶುದ್ಧಿಮಾಡಿಕೊಳ್ಳಬೇಕು)

೪. ''ಓಂ ನಮಃ ಶಿವಾಯ.'' ಎಂಬ ಮಂತ್ರದಿಂದಲೂ, ಓಂಕಾರದಿಂದಲೂ, ಶಿವನನ್ನು ಪೂಜಿಸಬೇಕು. ಶೂಲಾಯುಧ ಧಾರಿ ಯಾದ ಅಘೋರೇಶನೆಂಬ ಶಿವನ ಪೂಜೆಯು ಎಲ್ಲಕ್ಕಿಂತಲೂ ಬಹಳ ಉತ್ಕೃಷ್ಟವಾದುದು.

೫. ಸಮಸ್ತ ಪೂಜೆಯನ್ನೂ ಅಗ್ನಿಕಾರ್ಯವನ್ನೂ ಹಿಂದೆ ಹೇಳಿ ದಂತೆಯೇ ಮಾಡಬೇಕು. ಪ್ರಭುವಾದ ಅಘೋರೇಶನ ಮಂತ್ರ ಭೇದವೂ ಅಘೋರಧ್ಯಾನವೂ ಈಗ ಹೇಳಲ್ಪಡುತ್ತದೆ.

೬. ಇನ್ನು ನ್ಯಾಸವನ್ನು ಹೇಳುತ್ತಾನೆ.

ಈ ಮಂತ್ರಗಳಿಂದ ಕ್ರಮವಾಗಿ ಹೃದಯಾದಿ ನ್ಯಾಸಗಳನ್ನು ಆಚರಿಸಬೇಕು.

ಸ್ನಾತ್ವಾಽಽಚಮ್ಯ ತನುಂ ಕೃತ್ವಾ ಸಮಭ್ಯುಕ್ಷ್ಯಾಘಮರ್ಷಣಂ ।
ತರ್ಪಣಂ ವಿಧಿನಾ ಚಾರ್ಘ್ಯಂ ಭಾನವೇ ಭಾನು ಪೂಜನಂ ॥ ೭ ॥

ಸಮಂ ಚಾಘೋರ ಪೂಜಾಯಾಂ ಮಂತ್ರ ಮಾತ್ರೇಣ ಭೇದಿತಂ ।
ಮಾರ್ಗ ಶುದ್ಧಿ ಸ್ತಥಾ ದ್ವಾರಿ ಪೂಜಾಂ ವಾಸ್ತ್ವಧಿಪಸ್ಯ ಚ ॥ ೮ ॥

ಕೃತ್ವಾ ಕರಂ ವಿಶೋಧ್ಯಾಗ್ರೇ ಸ ಶುಭಾಸನ ಮಾಸ್ಥಿತಃ ।
ನಾಸಾಗ್ರ ಕಮಲೇ ಸ್ಥಾಪ್ಯ ದಗ್ಧ್ವಾಕ್ಷಃ ಕ್ಷ್ನಭಿಕಾಗ್ನಿನಾ ॥ ೯ ॥

ವಾಯುನಾ ಪ್ರೇರ್ಯ ತದ್ಭಸ್ಮ ವಿಶೋಧ್ಯ ಚ ಶುಭಾಂಭಸಾ ।
ಶಕ್ತ್ಯಾಽ ಮೃತಮಯೇ ಬ್ರಹ್ಮಕಲಾಂ ತತ್ರ ಪ್ರಕಲ್ಪಯೇತ್ ॥೧೦॥

ಅಘೋರಂ ಪಂಚಧಾ ಕೃತ್ವಾ ಪಂಚಾಂಗ ಸಹಿತಂ ಪುನಃ ।
ಇತ್ಥಂ ಜ್ಞಾನಕ್ರಿಯಾ ಮೇವಂ ವಿನ್ಯಸ್ಯ ಚ ವಿಧಾನತಃ ॥೧೧॥

---

೭–೮. ಪೂಜಾವಿಧಿಯನ್ನು ಹೇಳುತ್ತಾನೆ:—ಸ್ನಾನಾಚಮನಗಳನ್ನು ಮಾಡಿ, ಶರೀರವನ್ನು ಶುದ್ಧಿಮಾಡಿಕೊಂಡು ಭಾನುವಿಗೆ ಅಘಮರ್ಷಣಜಪವನ್ನೂ, ತರ್ಪಣವನ್ನೂ, ಅರ್ಘ್ಯವನ್ನೂ, ಪೂಜೆಯನ್ನೂ ಸಹ ವಿಧಿವತ್ತಾಗಿ ಮಾಡಬೇಕು. ಈ ಶರೀರ ಶುದ್ಧ್ಯಾದಿಗಳನ್ನು ಹಿಂದೆ ಹೇಳಿದ ಅಘೋರ ಪೂಜೆಯಂತೆಯೇ ಮಾಡಬೇಕು. ಮಂತ್ರ ಮಾತ್ರ ಬೇರೆ ಯಾಗಿರುತ್ತದೆ. ಮಾರ್ಗಶುದ್ಧಿ, ದ್ವಾರ ಪೂಜೆ, ವಾಸ್ತುಪೂಜೆ ಇವುಗಳನ್ನೂ ಆಚರಿಸಬೇಕು.

೯. ಪೂಜೆಯನ್ನು ಮಾಡುವವನು ಮುಂಭಾಗದಲ್ಲಿ ಹಸ್ತವನ್ನು ಶುದ್ಧವನ್ನಾಗಿ ಮಾಡಿಕೊಂಡು ಶುಭಕರವಾದ ಆಸನದಲ್ಲಿ ಕುಳಿತುಕೊಳ್ಳಬೇಕು. ಹಸ್ತಕಮಲದಲ್ಲಿ ಭಸ್ಮವನ್ನಿಟ್ಟು ವೈರಾಗ್ಯವೆಂಬ ಅಗ್ನಿಯಿಂದ ಸಮಸ್ತ ವ್ಯವಹಾರಗಳೆಂಬ ಕಟ್ಟಿಗೆಯನ್ನು ಸುಡಬೇಕು.

೧೦. ಆ ವ್ಯವಹಾರ ಭಸ್ಮವನ್ನು ಗಾಳಿಯಿಂದ ಊದಿ ಶುದ್ಧವಾದ ನೀರಿನಿಂದ ಅದನ್ನು ಶುದ್ಧಿಮಾಡಿ ಅಮೃತಮಯವಾದ ಅದರಲ್ಲಿ ಶಕ್ತಿಯಿಂದ ಬ್ರಹ್ಮಕಲೆಯನ್ನು ಸ್ಥಾಪಿಸಬೇಕು.

೧೧. "ಅಘೋರೇಭ್ಯಃ" ಎಂಬ ಮಂತ್ರವನ್ನು ಐದು ವಿಧವಾಗಿ

ನ್ಯಾಸ ಸ್ತ್ರಿನೇತ್ರ ಸಹಿತೋ ಹೃದಿ ಧ್ಯಾತ್ವಾ ವರಾಸನೇ ।
ನಾಭೌ ವಹ್ನಿಗತಂ ಸ್ಮೃತ್ವಾ ಭ್ರೂಮಧ್ಯೇ ದೀಪವತ್ಪ್ರಭುಃ ॥೧೨॥
ಶಾಂತ್ಯಾ ಬೀಜಾಂ ಕುರಾನಂತ ಧರ್ಮಾದ್ಯೈರಪಿ ಸಂಯುತೇ ।
ಸೋಮ ಸೂರ್ಯಾಗ್ನಿ ಸಂಪನ್ನೇ ಮೂರ್ತಿತ್ರಯ ಸಮನ್ವಿತೇ ॥೧೩॥
ವಾಮಾದಿಭಿಶ್ಚ ಸಹಿತೇ ಮನೋನ್ಮನ್ಯಾಃಪ್ಯಧಿಷ್ಠಿತೇ ।
ಶಿವಾಸನೇ ತ್ಮ ಮೂರ್ತಿ ಸ್ಥ ಮಕ್ಷಯಾ ಕಾರರೂಪಿಣಂ ॥೧೪॥
ಅಷ್ಟತ್ರಿಂಶತ್ಕಲಾ ದೇಹಂ ತ್ರಿತತ್ತ್ವ ಸಹಿತಂ ಶಿವಂ ।
ಅಷ್ಟಾದಶ ಭುಜಂ ದೇವಂ ಗಜಚರ್ಮೋತ್ತರೀಯಕಂ ॥೧೫॥
ಸಿಂಹಾಜಿ ನಾಂಬರಧರ ಮಘೋರಂ ಪರಮೇಶ್ವರಂ ।
ದ್ವಾತ್ರಿಂಶಾಕ್ಷರ ರೂಪೇಣ ದ್ವಾತ್ರಿಂ ಶಚ್ಛಕ್ತಿಭಿರ್ವೃತಂ ॥೧೬॥

---

ವಿಂಗಡಿಸಿ ಪಂಚಾಂಗನ್ಯಾಸವನ್ನು ಮಾಡಿ ವಿಧಿಪೂರ್ವಕವಾಗಿ ಜ್ಞಾನ ವೆಂಬ ಕ್ರಿಯೆಯಲ್ಲಿ ಸೇರಿಸಬೇಕು.

೧೨. ಅಘೋರಮೂರ್ತಿ ಧ್ಯಾನಸಹಿತವಾದ ನ್ಯಾಸವನ್ನು ಮಾಡ ಬೇಕು. ಅದು ಹೇಗೆಂದರೆ, ಆ ಅಘೋರನನ್ನು ಶ್ರೇಷ್ಠವಾದ ಆಸನದಂತಿರ ತಕ್ಕ ಹೃದಯದಲ್ಲಿ ಧ್ಯಾನಿಸಿ ನಾಭಿಯಲ್ಲಿರುವ ಅಗ್ನಿಯಲ್ಲಿರುವಂತೆ ಸ್ಮರಿಸಿ ಭ್ರೂಮಧ್ಯದಲ್ಲಿ ಪ್ರಕಾಶಮಾನವಾಗಿರುತ್ತಾನೆಂದು ತಿಳಿಯಬೇಕು.

೧೩. ಧ್ಯಾನಪ್ರಕಾರವನ್ನು ಹೇಳುತ್ತಾನೆ. ಶಾಂತಿಯಿಂದಲೂ ಬೀಜಾಂಕುರಾದಿ ಅನೇಕ ಧರ್ಮಗಳಿಂದಲೂ ಕೂಡಿದ ಸೂರ್ಯಚಂದ್ರಾಗ್ನಿ ಗಳಿಂದ ಸಹಿತವಾದ, ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ಮೂರ್ತಿ ತ್ರಯ ಸಹಿತವಾದ,

೧೪-೧೬. ವಾಮದೇವಾದಿಗಳಿಂದ ಸಹಿತವಾಗಿಯೂ, ಮನೋ ನ್ಮನಿಯಿಂದ ಅಧಿಷ್ಠಿತವಾದ ಶಿವಾಸನದಲ್ಲಿ ತನ್ನ ಸ್ವರೂಪನಾಗಿಯೂ, ನಾಶವಾಗದ ಆಕಾರವುಳ್ಳವನಾಗಿಯೂ, ಮೂವತ್ತೆಂಟು ಕಲೆಯುಳ್ಳ ದೇಹವುಳ್ಳವನಾಗಿಯೂ, ಮೂರು ತತ್ತ್ವವುಳ್ಳವನಾಗಿಯೂ, ಹದಿನೆಂಟು

ಸರ್ವಾಭರಣ ಸಂಯುಕ್ತಂ ಸರ್ವದೇವ ನಮಸ್ಕೃತಂ ।
ಕಪಾಲ ಮಾಲಾಽಽಭರಣಂ ಸರ್ಪವೃಶ್ಚಿಕ ಭೂಷಣಂ ॥೧೭॥

ಪೂರ್ಣೇಂದು ವದನಂ ಸೌಮ್ಯಂ ಚಂದ್ರಕೋಟಿ ಸಮಪ್ರಭಂ ।
ಚಂದ್ರರೇಖಾ ಧರಂ ಶಕ್ತ್ಯಾ ಸಹಿತಂ ನೀಲರೂಪಿಣಂ ॥೧೮॥

ಹಸ್ತೇ ಖಡ್ಗಂ ಖೇಟಕಂ ಪಾಶಮೇಕೇ ।
ರತ್ನೈಶ್ಚಿತ್ರಂ ಚಾಂಕುಶಂ ನಾಗ ಕಕ್ಷ್ಯಾಂ ॥
ಶರಾಸನಂ ಪಾಶುಪತಂ ತಥಾಽಸ್ತ್ರಂ ।
ದಂಡಂ ಚ ಖಟ್ವಾಂಗ ಮಥಾಪರೇ ಚ ॥೧೯॥

ತಂತ್ರೀ ಚ ಘಂಟಾಂ ವಿಪುಲಂ ಚ ಶೂಲಂ ।
ತಥಾಽಪರೇ ಡಾಮರುಕಂ ಚ ದಿವ್ಯಂ ॥
ವಜ್ರಂ ಗದಾಂ ಟಂಕಮೇಕಂ ಚ ದೀಪ್ತಂ ।
ಸಮುದ್ಗರಂ ಹಸ್ತ ಮಥಾಸ್ಯ ಶಂಭೋಃ ॥೨೦॥

---

ಭುಜಗಳುಳ್ಳವನಾಗಿಯೂ, ಸಮಸ್ತರಿಗೂ ದೇವನಾಗಿಯೂ, ಆನೆಯ ಚರ್ಮದ ಉತ್ತರೀಯವನ್ನು ಧರಿಸಿದವನಾಗಿಯೂ, ಸಿಂಹದ ಚರ್ಮವನ್ನು ಧರಿಸಿದವನಾಗಿಯೂ ಪರಮೇಶ್ವರನಾಗಿಯೂ, ಮುವ್ವತ್ತೆರಡು ಅಕ್ಷರ ಸ್ವರೂಪವಾದ ಶಕ್ತಿಗಳುಳ್ಳವನಾಗಿಯೂ, ಸಮಸ್ತ ಸರ್ವಾದಿ ಆಭರಣ ಗಳಿಂದ ಕೂಡಿದವನಾಗಿಯೂ, ಸಮಸ್ತ ದೇವತೆಗಳಿಂದ ವಂದಿತ ನಾಗಿಯೂ, ಕಪಾಲ ಮಾಲೆಯನ್ನು ಧರಿಸಿದವನಾಗಿಯೂ,

೧೮. ಪೂರ್ಣನಾದ ಚಂದ್ರನಂತೆ ಪ್ರಕಾಶಮಾನವಾದ ಮುಖ ವುಳ್ಳವನಾಗಿಯೂ, ಶಾಂತಸ್ವಭಾವದವನಾಗಿಯೂ, ಕೋಟಿ ಸಂಖ್ಯಾ ಕರಾದ ಚಂದ್ರರಿಗೆ ಸಮಾನವಾದ ಕಾಂತಿಯುಳ್ಳವನಾಗಿಯೂ, ಚಂದ್ರ ರೇಖೆಯನ್ನು ಧರಿಸಿದವನಾಗಿಯೂ, ಶಕ್ತಿಸ್ವರೂಪಳಾದ ಉಮಾದೇವೀ ಸಹಿತನಾಗಿಯೂ, ನೀಲಕಂಠನಾಗಿಯೂ,

೧೯–೨೧. ಹಸ್ತದಿಂದ ಖಡ್ಗ, ಚರ್ಮ, ಪಾಶ, ರತ್ನಖಚಿತವಾದ ಅಂಕುಶ, ನಾಗಕಕ್ಷ್ಯೆ, ಇತ್ಯಾದಿ ಆಯುಧಗಳನ್ನು ಧರಿಸಿದವನಾಗಿಯೂ, ಇನ್ನೊಂದುಕಡೆ ಹಸ್ತದಿಂದ ಧನುಸ್ಸು, ಪಾಶುಪತವೆಂಬ ಅಸ್ತ್ರ, ದಂಡ,

ವರದಾ ಭಯಂ ಹಸ್ತಂ ಚ ವರೇಣ್ಯಂ ಪರಮೇಶ್ವರಂ ।
ಭಾವಯೇತ್ಪೂಜಯೇಚ್ಚಾಪಿ ವಹ್ನೌ ಹೋಮಂ ಚ ಕಾರಯೇತ್ ॥
ಹೋಮಶ್ಚ ಪೂರ್ವವತ್ಸರ್ವೋ ಮಂತ್ರಭೇದಶ್ಚ ಕೀರ್ತಿತಃ ।
ಅಷ್ಟಪುಷ್ಪಾಣಿ ಗಂಧಾದಿ ಪೂಜಾಸ್ತುತಿ ನಿವೇದನಂ ॥೨೨॥
ಅಂತ ರ್ಬಲಿಂ ಚ ಕುಂಡಸ್ಯ ವಾಹ್ನೇಯೇನ ವಿಧಾನತಃ ।
ಮಂಡಲಂ ವಿಧಿನಾ ಕೃತ್ವಾ ಮಂತ್ರೈರೇ ತೈರ್ಯಥಾ ಕ್ರಮಂ ॥೨೩॥
ರುದ್ರೇಭ್ಯೋ ಮಾತೃ ಗಣೇಭ್ಯೋ ಯಕ್ಷೇಭ್ಯೋಽಸುರೇಭ್ಯೋ ಗ್ರಹೇಭ್ಯೋ ರಾಕ್ಷಸೇಭ್ಯೋ ನಾಗೇಭ್ಯೋ ನಕ್ಷತ್ರೇಭ್ಯೋ ವಿಶ್ವ ಗಣೇಭ್ಯಃ ಕ್ಷೇತ್ರಪಾಲೇಭ್ಯಃ ಅಥ ವಾಯುವರುಣ ದಿಗ್ಭಾಗೇ ಕ್ಷೇತ್ರಪಾಲ ಬಲಿಂ ಕ್ಷಿಪೇತ್ ॥

---

ಖಟ್ವಾಂಗ, ಮುಂತಾದ ಆಯುಧಗಳನ್ನು ಧರಿಸಿದವನಾಗಿಯೂ, ಇನ್ನೊಂದುಕಡೆಯ ಕೈಯ್ಯಿಂದ ತಂತಿ, ಘಂಟೆ, ದೊಡ್ಡದೊಂದುಶೂಲ, ದಿವ್ಯಡಮರು, ಇವುಗಳನ್ನು ಧರಿಸಿದವನಾಗಿಯೂ, ಮತ್ತೊಂದುಕಡೆಯ ಹಸ್ತದಿಂದ ವಜ್ರ, ಗದೆ, ಟಂಕವೆಂಬ ಆಯುಧ, ಪ್ರಕಾಶಮಾನವಾದ ಮುದ್ಗರವೆಂಬ ಆಯುಧ ಇವುಗಳನ್ನು ಧರಿಸಿದವನಾಗಿರುವ, ವರದಾಭಯ ಗಳೆಂಬ ಹಸ್ತಮುದ್ರೆಯುಳ್ಳವನಾಗಿಯೂ, ವರವನ್ನು ಕೊಡಲು ಯೋಗ್ಯನಾಗಿಯೂ, ಇರತಕ್ಕ ಪರಮೇಶ್ವರನನ್ನು ಧ್ಯಾನಿಸಬೇಕು. ಮತ್ತು ಹೀಗೆ ಪೂಜಿಸಿ, ಆ ಪರಮೇಶ್ವರನಿಗೆ ಅಗ್ನಿಯಲ್ಲಿ ಹೋಮ ವನ್ನೂ ಮಾಡಿಸಬೇಕು.

೨೨–೨೩. ಹೋಮವೂ, ಮಂತ್ರಭೇದವೂ ಇವನ್ನು ಹಿಂದಿನಂ ತೆಯೇ ಮಾಡಬೇಕು. ಈ ವಿಷಯವು ಹಿಂದೆಯೇ ಹೇಳಲ್ಪಟ್ಟದೆ. ಅಕಾರಾದಿ ಅಷ್ಟಪುಷ್ಪಗಳೂ, ಗಂಧಾಕ್ಷತಾದಿಗಳು, ಪೂಜೆ, ಸ್ತುತಿ, ನಿವೇದನ ಇವು ಗಳನ್ನೂ, ಕುಂಡದಲ್ಲಿ ಅಂತರ್ಬಲಿಯನ್ನೂ, ಅಗ್ನಿಪುರಾಣೋಕ್ತರೀತಿ ಯಾಗಿ ಮಾಡಬೇಕು, ಬಹಿರ್ಬಲಿ ವಿಧಾನವನ್ನು ಹೇಳುತ್ತಾನೆ, ವಿಧಿ ವತ್ತಾಗಿ ಮಂಡಲವನ್ನುಮಾಡಿ, ಮುಂದೆ ಹೇಳುವ ಮಂತ್ರಗಳಿಂದ ಬಲಿ ಯನ್ನೂ ಹಾಕಬೇಕು, ಆ ಮಂತ್ರವು ಯಾವುದೆಂದರೆ,

ರುದ್ರೇಭ್ಯೋ ಮಾತೃಗಣೇಭ್ಯೋ ಯಕ್ಷೇಭ್ಯೋಽಸುರೇಭ್ಯೋ ಗ್ರಹೇಭ್ಯೋ ರಾಕ್ಷಸೇಭ್ಯೋ ನಾಗೇಭ್ಯೋ ನಕ್ಷತ್ರೇಭ್ಯೋ ವಿಶ್ವ ಗಣೇಭ್ಯಃ "ಕ್ಷೇತ್ರಪಾಲೇಭ್ಯಃ" ಅಥ ವಾಯು ವರುಣ ದಿಗ್ಭಾಗೇ ಕ್ಷೇತ್ರಪಾಲ ಬಲಿಂ ಕ್ಷಿಪೇತ್ ॥

ಅರ್ಘ್ಯಂ ಗಂಧಂ ಚ ಪುಷ್ಪಂ ಚ ಧೂಪಂ ದೀಪಂ ಚ ಸುವ್ರತಾಃ ।
ನೈವೇದ್ಯಂ ಮುಖವಾಸಾದಿ ನಿವೇದ್ಯಂ ವೈ ಯಥಾ ವಿಧಿ ॥೨೪॥

ವಿಜ್ಞಾಪ್ಯೈವಂ ವಿಸೃಜ್ಯಾಥ ಅಷ್ಟಪುಷ್ಪೈಶ್ಚ ಪೂಜನಂ ।
ಸರ್ವ ಸಾಮಾನ್ಯ ಮೇತದ್ಧಿ ಪೂಜಾಯಾಂ ಮುನಿಪುಂಗವಾಃ ॥೨೫॥

ಏವಂ ಸಂಕ್ಷೇಪತಃ ಪ್ರೋಕ್ತ ಮಘೋರಾರ್ಚಾದಿ ಸುವ್ರತ ।
ಅಘೋರಾರ್ಚಾ ವಿಧಾನಂ ಚ ಲಿಂಗೇ ವಾ ಸ್ಥಂಡಿಲೇಽಪಿ ವಾ ॥

ಸ್ಥಂಡಿಲಾತ್ಕೋಟಿ ಗುಣಿತಂ ಲಿಂಗಾರ್ಚನ ಮನುತ್ತಮಂ ।
ಲಿಂಗಾರ್ಚನ ರತೋ ವಿಪ್ರೋ ಮಹಾಪಾತಕ ಸಂಭವೈಃ ॥೨೭॥

---

೨೪. ವಾಯು ವರುಣ ದಿಗ್ಭಾಗಗಳಲ್ಲಿ ಕ್ಷೇತ್ರಪಾಲ ಬಲಿಯನ್ನು ಹಾಕಬೇಕು. ಅರ್ಘ್ಯ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ಮುಖ ವನ್ನು ಒರಸಿಕೊಳ್ಳುವ ಬಟ್ಟೆ ಇವುಗಳನ್ನು ಯಥಾವಿಧಿಯಾಗಿ ಅರ್ಪಿಸ ಬೇಕು.

೨೫. ಓ ಮುನಿ ಶ್ರೇಷ್ಠರೇ, ಈ ರೀತಿಯಾಗಿ ಸಮಸ್ತವನ್ನೂ ವಿಜ್ಞಾಪಿಸಿ ಅನಂತರ ವಿಸರ್ಜನೆಯನ್ನು ಮಾಡಬೇಕು. ಈ ಅರ್ಕಾದಿ ಅಷ್ಟ ಪುಷ್ಪ ಪೂಜೆಯ ವಿಧಾನವು ಪೂಜೆಗಳಲ್ಲಿ ಸಾಮಾನ್ಯವಾಗಿ ಇದ್ದೇ ಇರುತ್ತದೆ.

೨೬. ಓ ಒಳ್ಳೆಯ ವ್ರತವುಳ್ಳವನೇ, ಈ ರೀತಿಯಾಗಿ ಅಘೋ ರಾರ್ಚನ ವಿಧಾನವನ್ನು ಸಂಕ್ಷೇಪವಾಗಿ ಹೇಳಿರುತ್ತೇನೆ. ಈ ಅಘೋ ರಾರ್ಚನೆಯನ್ನು ಲಿಂಗದಲ್ಲಿಯಾಗಲೀ ಸ್ಥಂಡಿಲದಲ್ಲಿಯಾಗಲೀ ಮಾಡಬಹುದು.

೨೭-೨೮. ಸ್ಥಂಡಿಲದಲ್ಲಿ ಪೂಜಿಸುವುದಕ್ಕಿಂತ ಲಿಂಗದಲ್ಲಿ ಪೂಜಿಸು ವುದು ಶತಕೋಟಿ ಅಧಿಕವಾದ ಗುಣವುಳ್ಳದ್ದಾಗಿರುತ್ತದೆ. ಲಿಂಗಾರ್ಚನೆ

ಪಾಪೈರಪಿ ನ ಲಿಪ್ಯೇತ ಪದ್ಮಪತ್ರ ಮಿವಾಂಭಸಾ ।
ಲಿಂಗಸ್ಯ ದರ್ಶನಂ ಪುಣ್ಯಂ ದರ್ಶನಾತ್ ಸ್ಪರ್ಶನಂ ವರಂ ॥೨೮॥
ಅರ್ಚನಾಧಧಿಕಂ ನಾಸ್ತಿ ಬ್ರಹ್ಮಪುತ್ರ ನ ಸಂಶಯಃ ।
ಏವಂ ಸಂಕ್ಷೇಪತಃ ಪ್ರೋಕ್ತ ಮಘೋರಾರ್ಚನ ಮುತ್ತಮಂ ॥
ವರ್ಷ ಕೋಟಿ ಶತೇನಾಪಿ ವಿಸ್ತರೇಣ ನ ಶಕ್ಯತೇ ॥೩೦॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ಅಘೋರ ಪೂಜಾಕಥನಂ ನಾಮ ಷಡ್ವಿಂಶತಿ ತಮೋಽಧ್ಯಾಯಃ

---

ಯಲ್ಲಿ ಆಸಕ್ತನಾದ ಬ್ರಾಹ್ಮಣನು ಮಹಾಪಾಪಗಳಿಂದಲೂ ಸಹ, ಪದ್ಮ ಪತ್ರವು ಜಲ ಸಂಪರ್ಕವಿಲ್ಲದಿರುವಂತೆ, ಸಂಪರ್ಕವಿಲ್ಲದವನಾಗುವನು. ಲಿಂಗದರ್ಶನವು ಪುಣ್ಯಕರವು. ಅದಕ್ಕಿಂತ ಆ ಮೂರ್ತಿಯ ಮುಟ್ಟು ವಿಕೆಯು ಇನ್ನೂ ಶ್ರೇಷ್ಠವಾದುದು.

೨೯–೩೦. ಓ ಬ್ರಹ್ಮಪುತ್ರನೇ, ಪೂಜೆಗಿಂತ ಅಧಿಕವಾದುದು ಯಾವುದೂ ಇರುವುದಿಲ್ಲ. ಈ ವಿಷಯದಲ್ಲಿ ಸಂಶಯವಿಲ್ಲ. ಈ ರೀತಿ ಯಾಗಿ ಅಘೋರಾರ್ಚನ ವಿಧಿಯು ಸಂಕ್ಷೇಪವಾಗಿ ಹೇಳಲ್ಪಟ್ಟಿತು. ಇದನ್ನು ಸಹ ವಿಸ್ತರಿಸಿ ಹೇಳಿ ಮುಗಿಸಲು ಅನೇಕ ಶತಕೋಟಿ ವರ್ಷ ಗಳಾದರೂ ಸಾಧ್ಯವಾಗುವುದಿಲ್ಲವು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರ ಭಾಗದಲ್ಲಿ ಅಘೋರಮೂರ್ತಿಯ ಪೂಜಾ ವಿಧಾನ ಕ್ರಮವನ್ನು ತಿಳಿಸುವ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.

ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
ಸಪ್ತವಿಂಶೋಽಧ್ಯಾಯಃ

॥ ಋಷಯ ಊಚುಃ ॥

ಪ್ರಭಾವೋ ನಂದಿನ ಶ್ಚೈವ ಲಿಂಗಪೂಜಾ ಫಲಂ ಶ್ರುತಂ ।
ಶ್ರುತಿಭಿಃ ಸಂಮಿತಂ ಸರ್ವಂ ರೋಮಹರ್ಷಣ ಸುವ್ರತ ॥ ೧ ॥

ಜಯಾಭಿಷೇಕ ಈಶೇನ ಕಥಿತೋ ಮನವೇ ಪುರಾ ।
ಹಿತಾಯ ಮೇರುಶಿಖರೇ ಕ್ಷತ್ರಿಯಾಣಾಂ ತ್ರಿಶೂಲಿನಃ ॥ ೨ ॥

ತತ್ಕಥಂ ಷೋಡಶ ವಿಧಂ ಮಹಾದಾನಂ ಚ ಶೋಭನಂ ।
ವಕ್ತು ಮರ್ಹಸಿ ಚಾಸ್ಮಾಕಂ ಸೂತ ಬುದ್ಧಿಮತಾಂ ವರ ॥ ೩ ॥

॥ ಸೂತ ಉವಾಚ ॥

ಜೀವಚ್ಛ್ರಾದ್ಧಂ ಪುರಾಕೃತ್ವಾ ಮನುಃ ಸ್ವಾಯಂ ಭುವಃ ಪ್ರಭುಃ ।
ಮೇರು ಮಾಸಾದ್ಯ ದೇವೇಶ ಮಸ್ತಾವೀನ್ನೀಲ ಲೋಹಿತಂ ॥ ೪ ॥

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಇಪ್ಪತ್ತೇಳನೆಯ ಅಧ್ಯಾಯವು.

೧. ಋಷಿಗಳು ಹೇಳಿದರು :—ಓ ಒಳ್ಳೆಯ ವ್ರತಶೀಲನಾದ ಸೂತನೇ, ನಂದಿಯ ಪ್ರಭಾವವೂ, ಲಿಂಗಪೂಜಾ ಫಲವೂ, ಶ್ರುತವಾಯಿತು. ಇದು ಸಮಸ್ತವೂ ಶ್ರುತ್ಯಭಿಪ್ರೇತವಾದುದು.

೨–೩. ಪೂರ್ವಕಾಲದಲ್ಲಿ ತ್ರಿಶೂಲಧಾರಿಯಾದ ಶಿವನು ಮೇರುಪರ್ವತದಲ್ಲಿ ಸಮಸ್ತ ಕ್ಷತ್ರಿಯರ ಹಿತಕ್ಕಾಗಿ ಮನುವಿಗೆ ಜಯಾಭಿಷೇಕವನ್ನು ಹೇಳಿದನು. ಆದುದರಿಂದ ಬುದ್ಧಿವಂತರಲ್ಲಿ ಶ್ರೇಷ್ಠನಾದ ಸೂತನೇ, ಅತ್ಯಂತ ಶೋಭನವಾದ ಅದರ ಷೋಡಶವಿಧವಾದ ಮಹಾದಾನವನ್ನು ನಮಗೆ ಹೇಳುವವನಾಗು.

೪. ಸೂತನು ಹೇಳಿದನು :—ಪೂರ್ವಕಾಲದಲ್ಲಿ ಪ್ರಭುವಾದ ಸ್ವಾಯಂಭುವವೆಂಬ ಮನುವು ಜೀವಚ್ಛ್ರಾದ್ಧವನ್ನು ಮಾಡಿಕೊಂಡು

**ತಪಸಾ ಚ ವಿನೀತಾಯ ಪ್ರಹೃಷ್ಟಃ ಪ್ರದದೌ ಭವಃ ।**
**ದಿವ್ಯಂ ದರ್ಶನ ಮೀಶಾನ ಸ್ತೇನಾಪಶ್ಯತ್ತಮವ್ಯಯಂ ॥ ೫ ॥**

**ನತ್ವಾ ಸಂಪೂಜ್ಯ ವಿಧಿನಾ ಕೃತಾಂಜಲಿ ಪುಟಃ ಸ್ಥಿತಃ ।**
**ಹರ್ಷ ಗದ್ಗದಯಾ ವಾಚಾ ಪ್ರೋವಾಚ ಚ ನನಾಮ ಚ ॥ ೬ ॥**

**ದೇವದೇವ ಜಗನ್ನಾಥ ನಮಸ್ತೇ ಭುವನೇಶ್ವರ ।**
**ಜೀವ ಚ್ಛ್ರಾದ್ಧಂ ಮಹಾದೇವ ಪ್ರಸಾದೇನ ವಿನಿರ್ಮಿತಂ ॥ ೭ ॥**

**ಪೂಜಿತಶ್ಚ ತತೋ ದೇವೋ ದೃಷ್ಟಶ್ಚೈವ ಮಯಾಽಧುನಾ ।**
**ಶಕ್ರಾಯ ಕಥಿತಂ ಪೂರ್ವಂ ಧರ್ಮಕಾಮಾರ್ಥ ಮೋಕ್ಷದಂ ॥ ೮ ॥**

---

ಮೇರು ಪರ್ವತಕ್ಕೆ ಹೋಗಿ ಸಮಸ್ತ ದೇವತೆಗಳಿಗೆ ಈಶ್ವರನಾದ ಪರಮೇಶ್ವರನನ್ನು ಸ್ತೋತ್ರ ಮಾಡಿದನು.

೫. ತಪಸ್ಸಿನಿಂದ ವಿನೀತನಾದ ಮನುವನ್ನು ನೋಡಿ ಶಿವನು ಸಂತೋಷಗೊಂಡವನಾಗಿ ಅವನಿಗೆ ದಿವ್ಯಚಕ್ಷುಸ್ಸನ್ನು ಕೊಟ್ಟನು. ಆ ದಿವ್ಯಚಕ್ಷುಸ್ಸಿನಿಂದ ಯಾವಾಗಲೂ ನಾಶವಿಲ್ಲದ ಶಿವನನ್ನು ನೋಡಿದನು.

೬. ಮನುವು ಶಿವನನ್ನು ನಮಸ್ಕರಿಸಿ, ವಿಧಿವತ್ತಾಗಿ ಪೂಜಿಸಿ ಅಂಜಲಿಪುಟ ಬಂಧವುಳ್ಳವನಾಗಿ ಸಂತೋಷದಿಂದ ನಡುಗುತ್ತಿರುವ ಧ್ವನಿಯುಳ್ಳವನಾಗಿ ಹೀಗೆ ಮಾತನಾಡಿ ನಮಸ್ಕಾರವನ್ನು ಮಾಡಿದನು.

೭. ಓ ದೇವದೇವನೇ, ಜಗತ್ತಿಗೆ ನಾಥನೇ, ಬ್ರಹ್ಮಾಂಡಗಳಿಗೆ ಈಶ್ವರನೇ, ನಿನಗೆ ನಮಸ್ಕಾರವು. ಓ ಮಹಾದೇವನೇ, ನಿನ್ನ ಅನುಗ್ರಹದಿಂದಲೇ ನಾನು ಜೀವಚ್ಛ್ರಾದ್ಧವನ್ನು ಮಾಡಿಕೊಂಡಿರುವೆನು.

೮. ಈಗ ನೀನು ನನ್ನಿಂದ ಪೂಜೆಯನ್ನು ಸ್ವೀಕರಿಸಿರುವೆ. ಮತ್ತು ನನ್ನಿಂದ ನೋಡಲ್ಪಟ್ಟಿರುತ್ತೀಯೆ. ಪೂರ್ವಕಾಲದಲ್ಲಿ ಇಂದ್ರನಿಗೆ ಹೇಳಿದ ಧರ್ಮಾರ್ಥ ಕಾಮಮೋಕ್ಷಗಳೆಂಬ ಪುರುಷಾರ್ಥಗಳನ್ನು ಕೊಡತಕ್ಕ ಜಯಾಭಿಷೇಕವನ್ನು ಪ್ರಭುವಾಗಿಯೂ, ದೇವೇಶನಾಗಿಯೂ, ಇರತಕ್ಕ ನೀನು ನನಗೆ ಈಗ ಹೇಳಬೇಕು.

ಜಯಾಭಿಷೇಕಂ ದೇವೇಶ ವಕ್ತು ಮರ್ಹಸಿ ಮೇ ಪ್ರಭೋ ।

॥ ಸೂತ ಉವಾಚ ॥

ತಸ್ಮೈ ದೇವೋ ಮಹಾದೇವೋ ಭಗವಾನ್ನೀಲ ಲೋಹಿತಃ ॥ ೯ ॥
ಜಯಾಭಿಷೇಕ ಮಖಿಲ ಮವದತ್ಪರಮೇಶ್ವರಃ ।

॥ ಶ್ರೀ ಭಗವಾನುವಾಚ ॥

ಜಯಾಭಿಷೇಕಂ ವಕ್ಷ್ಯಾಮಿ ನೃಪಾಣಾಂ ಹಿತಕಾಮ್ಯಯಾ ॥೧೦॥
ಅಪಮೃತ್ಯು ಜಯಾರ್ಥಂ ಚ ಸರ್ವಶತ್ರು ಜಯಾಯ ಚ ।
ಯುದ್ಧಕಾಲೇ ತು ಸಂಪ್ರಾಪ್ತೇ ಕೃತ್ವೈವ ಮಭಿಷೇಚನಂ ॥೧೧॥
ಸ್ವಪತಿಂ ಚಾಭಿಷಿಚ್ಯೈವ ಗಚ್ಛೇ ದ್ಯೋದ್ಧುಂ ರಣಾಜಿರೇ ।
ವಿಧಿನಾ ಮಂಡಪಂ ಕೃತ್ವಾ ಪ್ರಪಾಂ ವಾ ಕೂಟಮೇವ ವಾ ॥೧೨॥
ನವಧಾ ಸ್ಥಾಪಯೇದ್ವಹ್ನಿಂ ಬ್ರಾಹ್ಮಣೋ ವೇದಪಾರಗಃ ।
ತತಃ ಸರ್ವಾಭಿಷೇಕಾರ್ಥಂ ಸೂತ್ರಪಾತಂ ಚ ಕಾರಯೇತ್ ॥೧೩॥

---

೯. ಸೂತಮಹರ್ಷಿಯು ಹೇಳಿದನು:—ಷಡ್ಗುಣೈಶ್ವರ್ಯ ಸಂಪನ್ನನಾದ ಮಹಾದೇವನು ಸಮಸ್ತವಾದ ಜಯಾಭಿಷೇಕವನ್ನು ಹೇಳಿದನು.

೧೦–೧೧. ಪರಮೇಶ್ವರನು ಹೀಗೆ ಹೇಳಿದನು:—ರಾಜರ ಹಿತಕ್ಕಾಗಿಯೂ ಅಪಮೃತ್ಯು ವಿನಾಶಕ್ಕಾಗಿಯೂ, ಶತ್ರುಜಯಕ್ಕೋಸ್ಕರವಾಗಿಯೂ, ಜಯಾಭಿಷೇಕವನ್ನು ಹೇಳುತ್ತೇನೆ. ಯುದ್ಧವು ಪ್ರಾಪ್ತವಾಗಲು ಈ ಅಭಿಷೇಕವನ್ನು ಮಾಡಿ, ಸ್ವಪತಿಯನ್ನು ಅಭಿಷೇಚಿಸಿ ಯುದ್ಧಕ್ಕಾಗಿ ರಣರಂಗಕ್ಕೆ ಹೋಗಬೇಕು. ಹೀಗೆ ಮಾಡಿದರೆ ಜಯಪ್ರಾಪ್ತಿಯಾಗುತ್ತದೆ.

೧೨–೧೩. ಶಾಸ್ತ್ರೋಕ್ತವಾದ ವಿಧಿಯಿಂದ ಮಂಡಪವನ್ನಾಗಲೀ, ಅರವಟ್ಟಿಗೆಯನ್ನಾಗಲೀ, ನಿಶ್ಚಲ ಸ್ಥಾನವನ್ನಾಗಲೀ ಮಾಡಬೇಕು. ಆ ಮಂಟಪದಲ್ಲಿ ವೇದವನ್ನು ಬಲ್ಲ ಬ್ರಾಹ್ಮಣನು ಒಂಬತ್ತು ಕಡೆಯಲ್ಲಿ ಅಗ್ನಿಯನ್ನು ಪ್ರತಿಷ್ಠಿಸಬೇಕು. ಅನಂತರ ಸರ್ವಾಭಿಷೇಕಕ್ಕಾಗಿ ರೇಖೆಗಳನ್ನು ಬರೆಯಿಸಬೇಕು.

ಪ್ರಾಗಾದ್ಯಂ ವರ್ಣ ಸೂತ್ರಂ ಚ ದಕ್ಷಿಣಾದ್ಯಂ ತಥಾ ಪುನಃ ।
ಸಹಸ್ರಾಣಾಂ ದ್ವಯಂ ತತಃ ಶತಾನಾಂ ಚ ಚತುಷ್ಟಯಂ ॥೧೪॥
ಶೇಷಮೇವ ಶುಭಂ ಕೋಷ್ಠಂ ತೇಷು ಕೋಷ್ಠಂ ತು ಸಂಹರೇತ್ ।
ಬಾಹ್ಯೇ ವೀಥ್ಯಾಂ ಪದಂ ಚೈಕಂ ಸಮಂತಾದುಪ ಸಂಹರೇತ್ ॥
ಅಂಗಸೂತ್ರಾಣಿ ಸಂಗೃಹ್ಯ ವಿಧಿನಾ ಪೃಥಗೇವ ತು ।
ಪ್ರಾಗಾದ್ಯಂ ವರ್ಣ ಸೂತ್ರಂ ಚ ದಕ್ಷಿಣಾದ್ಯಂ ತಥಾ ಪುನಃ ॥೧೬॥
ಪ್ರಾಗಾದ್ಯಂ ದಕ್ಷಿಣಾದ್ಯಂ ಚ ಷಟ್ತ್ರಿಂಶತ್ಸಂಹರೇತ್ಕ್ರಮಾತ್ ।
ಪ್ರಾಗಾದ್ಯಾಃ ಪಂಕ್ತಯಃ ಸಪ್ತ ದಕ್ಷಿಣಾದ್ಯಾಸ್ತಥಾ ಪುನಃ ॥೧೭॥
ತಸ್ಮಾದೇಕೋನ ಪಂಚಾಶತ್ಪಂಕ್ತಯಃ ಪರಿಕೀರ್ತಿತಾಃ ।
ನವಪಂಕ್ತೀರ್ಹರೇನ್ಮಧ್ಯೇ ಗಂಧ ಗೋಮಯ ವಾರಿಣಾ ॥೧೮॥

---

೧೪–೧೫. ಪ್ರಾಗಾದಿಯಾಗಿಯೂ ದಕ್ಷಿಣಾದಿಯಾಗಿಯೂ, ವರ್ಣ ಸೂತ್ರವಿನ್ಯಾಸವನ್ನು ಮಾಡಬೇಕು. ಇವುಗಳ ಸಂಖ್ಯೆಯು ಒಟ್ಟಿನಲ್ಲಿ ಎರಡು ಸಾವಿರದನಾಲ್ಕು ನೂರಾಗಿ ಇರಬೇಕು. ಉಳಿದ ಈ ಒಳಭಾಗವು ಮಂಗಳಕರವಾಗಿರುತ್ತದೆ. ಇದರ ಸುತ್ತಲೂ ಆವರಣವನ್ನು ಉಪ ಸಂಹರಿಸಬೇಕು. ಹೊರಗಡೆಯಲ್ಲಿ ಸುತ್ತಲೂ ದಾರಿಯನ್ನೂ ಒಂದು ಸ್ಥಾನವನ್ನೂ ಕಲ್ಪಿಸಿ ಮುಗಿಸಬೇಕು.

೧೬. ಬೇರೆಬೇರೆ ಅವಾಂತರ ಸೂತ್ರಗಳನ್ನು ರಚಿಸಬೇಕು. ಪ್ರಾಗಾದಿಯಾಗಿಯೂ ದಕ್ಷಿಣಾದಿಯಾಗಿಯೂ, ಸಹ ರೇಖಾವಿನ್ಯಾಸ ಗಳನ್ನು ಕಲ್ಪಿಸಬೇಕು.

೧೭–೧೮. ಪ್ರಾಗಾದಿಯಾಗಿಯೂ ದಕ್ಷಿಣಾದಿಯಾಗಿಯೂ ಮುವ್ವತ್ತಾರು ರೇಖೆಗಳನ್ನು ಬರೆಯಬೇಕು. ಪ್ರಾಗಾದಿಯಾಗಿ ಏಳು ದಕ್ಷಿಣಾದಿಯಾಗಿ ಏಳು, ರೇಖೆಗಳನ್ನು ಬರೆಯಬೇಕು. ಇಪ್ಪತ್ತೊಂದು ಪಂಕ್ತಿಗಳನ್ನು ಬರೆಯಬೇಕು. ಮಧ್ಯಭಾಗದಲ್ಲಿ ಒಂಬತ್ತು ಪಂಕ್ತಿ ಗಳನ್ನು ಬರೆದು ಗಂಧ, ಗೋಮಯ ನೀರು ಇವುಗಳಿಂದ ಲೇಪನವನ್ನು ಮಾಡಬೇಕು.

ಕಮಲಂ ಚಾಲಿಖೇತ್ತತ್ರ ಹಸ್ತಮಾತ್ರೇಣ ಶೋಭನಂ ।
ಅಷ್ಟಪತ್ರಂ ಸಿತಂ ವೃತ್ತಂ ಕರ್ಣಿಕಾ ಕೇಸರಾನ್ವಿತಂ ॥೧೯॥
ಅಷ್ಟಾಂಗುಲ ಪ್ರಮಾಣೇನ ಕರ್ಣಿಕಾ ಹೇಮ ಸನ್ನಿಭಾ ।
ಚತುರಂಗುಲ ಮಾನೇನ ಕೇಸರಸ್ಥಾನ ಮುಚ್ಯತೇ ॥೨೦॥
ಧರ್ಮೋ ಜ್ಞಾನಂ ಚ ವೈರಾಗ್ಯ ಮೈಶ್ವರ್ಯಂ ಚ ಯಥಾಕ್ರಮಂ ।
ಆಗ್ನೇಯಾದಿಷು ಕೋಣೇಷು ಸ್ಥಾಪಯೇತ್ಪ್ರಣವೇನ ತು ॥೨೧॥
ಅವ್ಯಕ್ತಾದೀನಿ ವೈ ದಿಕ್ಷು ಗಾತ್ರಾ ಕಾರೇಣ ವೈ ನ್ಯಸೇತ್ ।
ಅವ್ಯಕ್ತಂ ನಿಯತಃ(ತಿಃ) ಕಾಲಃ ಕಾಲೀ ಚೇತಿ ಚತುಷ್ಟಯಂ ॥೨೨॥
ಸಿತರಕ್ತ ಹಿರಣ್ಯಾಭ ಕೃಷ್ಣಾ ಧರ್ಮಾದಯಃ ಪೃಥಕ್ ।
ಹಂಸಾಕಾರೇಣ ವೈ ಗಾತ್ರಂ ಹೇಮಾಭಾಸೇನ ಸುವ್ರತಾಃ ॥೨೩॥

---

೧೯–೨೦. ಆ ಮಧ್ಯಭಾಗದಲ್ಲಿ ಒಂದು ಹಸ್ತ ಪ್ರಮಾಣವುಳ್ಳದ್ದಾಗಿಯೂ, ಪ್ರಕಾಶಮಾನವಾಗಿಯೂ, ಎಂಟು ದಳಗಳುಳ್ಳದ್ದಾಗಿಯೂ, ಶುಭ್ರವಾಗಿಯೂ, ಲಕ್ಷಣವಾಗಿರುವ ಕರ್ಣಿಕೆ, ಕೇಸರವುಳ್ಳದ್ದಾಗಿಯೂ, ಇರುವ ಒಂದು ಕಮಲವನ್ನು ರಚಿಸಬೇಕು. ಆ ಕರ್ಣಿಕೆಯು ಸುವರ್ಣಮಯದಂತೆಯೂ, ಎಂಟಂಗುಲ ಪ್ರಮಾಣವುಳ್ಳದ್ದಾಗಿಯೂ, ಕೇಸರವು ನಾಲ್ಕು ಅಂಗುಲ ಪ್ರಮಾಣವುಳ್ಳದ್ದಾಗಿಯೂ, ಇರಬೇಕು.

೨೧. ಆ ಕಮಲದ ಆಗ್ನೇಯಾದಿ ಕೋಣಗಳಲ್ಲಿ ಓಂಕಾರವನ್ನು ಜಪಿಸುತ್ತಾ ಕ್ರಮವಾಗಿ, ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯ, ಇವುಗಳನ್ನು ಸ್ಥಾಪಿಸಬೇಕು.

೨೨. ಬಾಹ್ಯ ಪತ್ರಾಕಾರದಿಂದ ಪ್ರಾಗಾದಿ ದಿಕ್ಕುಗಳಲ್ಲಿ ಕ್ರಮವಾಗಿ ಅವ್ಯಕ್ತ, ನಿಯ(ತಿ)ಕಾಲ, ಕಾಲೀ ಇವುಗಳನ್ನು ಸ್ಥಾಪಿಸಬೇಕು.

೨೩. ಓ ಒಳ್ಳೆಯ ವ್ರತವುಳ್ಳವರೇ, ಶುಕ್ಲ, ರಕ್ತ, ಹಳದಿ, ಕೃಷ್ಣವರ್ಣಗಳಾದ ಧರ್ಮಾದಿಗಳನ್ನು ಹಂಸಾಕಾರವಾಗಿ ಸ್ಥಾಪಿಸಬೇಕು.

ಆಧಾರ ಶಕ್ತಿ ಮಧ್ಯೇ ತು ಕಮಲಂ ಸೃಷ್ಟಿಕಾರಣಂ ।
ಬಿಂದು ಮಾತ್ರಂ ಕಲಾ ಮಧ್ಯೇ ನಾದಾಕಾರಮತಃ ಪರಂ ॥೨೪॥
ನಾದೋಪರಿ ಶಿವಂ ಧ್ಯಾಯೇ ದೋಂಕಾರಾಖ್ಯಂ ಜಗದ್ಗುರುಂ ।
ಮನೋನ್ಮನೀಂ ಚ ಪದ್ಮಾಭಂ ಮಹಾದೇವಂ ಚ ಭಾವಯೇತ್ ॥
ವಾಮಾದಯಃ ಕ್ರಮೇಣೈವ ಪ್ರಾಗಾದ್ಯಾಃ ಕೇಸರೇಷು ವೈ ।
ವಾಮಾ ಜ್ಯೇಷ್ಠಾ ತಥಾ ರೌದ್ರೀ ಕಾಲೀ ವಿಕರಣೀ ತಥಾ ॥೨೬॥
ಬಲಾ ಪ್ರಮಥಿನೀ ದೇವೀ ದಮನೀ ಚ ಯಥಾ ಕ್ರಮಂ ।
ವಾಮದೇವಾದಿಭಿಃ ಸಾರ್ಧಂ ಪ್ರಣವೇನೈವ ವಿನ್ಯಸೇತ್ ॥೨೭॥
ನಮೋಽಸ್ತು ವಾಮದೇವಾಯ ನಮೋ ಜ್ಯೇಷ್ಠಾಯ ಶೂಲಿನೇ ॥
ರುದ್ರಾಯ ಕಾಲರೂಪಾಯ ಕಲಾ ವಿಕರಣಾಯ ಚ ।
ಬಲಾಯ ಚ ತಥಾ ಸರ್ವ ಭೂತಸ್ಯ ದಮನಾಯ ಚ ॥೨೯॥
ಮನೋನ್ಮನಾಯ ದೇವಾಯ ಮನೋನ್ಮನ್ಯೈ ನಮೋನಮಃ ।
ಮಂತ್ರೈರೇತೈ ರ್ಯಥಾ ನ್ಯಾಯಂ ಪೂಜಯೇತ್ಪರಿಮಂಡಲಂ ॥೩೦॥

---

೨೪. ಆಧಾರ ಶಕ್ತಿಯ ಮಧ್ಯದಲ್ಲಿ ಕಮಲವನ್ನೂ ಅದರಮಧ್ಯದಲ್ಲಿ ಸೃಷ್ಟಿಗೆ ಕಾರಣವಾದ ಬಿಂದುವನ್ನೂ ಕಲಾಮಧ್ಯದಲ್ಲಿ ನಾದಾಕಾರವನ್ನೂ ಧ್ಯಾನಿಸಬೇಕು.

೨೫. ಅನಂತರನಾದದಲ್ಲಿ ಜಗತ್ತಿಗೆ ಗುರುವಾದ ಓಂಕಾರವೆಂಬ ಹೆಸರುಳ್ಳ ಶಿವನನ್ನೂ, ಮನೋನ್ಮನೀ ದೇವಿಯನ್ನೂ ಪದ್ಮದಂತೆ ಕಾಂತಿಯುಳ್ಳ ಮಹಾದೇವನನ್ನೂ ಸಹ ಧ್ಯಾನಿಸಬೇಕು.

೨೬–೨೭. ಪ್ರಾಗಾದಿ ಪದ್ಮಕೇಸರಗಳಲ್ಲಿ, ಓಂಕಾರದಿಂದಲೂ, ವಾಮದೇವಾದಿ ಮಂತ್ರಗಳಿಂದಲೂ, ಕ್ರಮವಾಗಿ ವಾಮಾ, ಜ್ಯೇಷ್ಠಾ, ರೌದ್ರೀ, ಕಾಲೀ, ವಿಕರಣೀ, ಬಲಾ, ಪ್ರಮಥಿನೀ, ದಮನೀ, ಈ ದೇವತೆಗಳನ್ನು ಭಾವಿಸಿ ವಿನ್ಯಾಸಮಾಡಬೇಕು.

೨೮–೩೦. ಈ ಎಂಟು ಮಂತ್ರಗಳಿಂದ ಮಂಡಲದ ಸುತ್ತಲೂ ಕ್ರಮವಾಗಿ ಪೂಜಿಸಬೇಕು.

ಪ್ರಥಮಾವರಣಂ ಪ್ರೋಕ್ತಂ ದ್ವಿತೀಯಾವರಣಂ ಶೃಣು ।
ದ್ವಿತೀಯಾ ವರಣೇ ಚೈವ ಶಕ್ತಯಃ ಷೋಡಶೈವ ತು ॥೩೧॥
ತೃತೀಯಾ ವರಣೇ ಚೈವ ಚತುರ್ವಿಂಶ ದನುಕ್ರಮಾತ್ ।
ಪಿಶಾಚ ವೀಥಿ ರ್ಮ್ಯ ಮಧ್ಯೇ ನಾಭಿ ವೀಥಿಃ ಸಮಂತತಃ ॥೩೨॥
ಮಂತ್ರೈ ರೇತೈರ್ಯಥಾ ನ್ಯಾಯಂ ಪಿಶಾಚಾನಾಂ ಪ್ರಕೀರ್ತಿತಾ ।
ಅಷ್ಟೋತ್ತರ ಸಹಸ್ರಂ ತು ಪದಮಷ್ಟಾರ ಸಂಯುತಂ ॥೩೩॥
ತೇಷು ತೇಷು ಪೃಥಕ್ತ್ವೇನ ಪದೇಷು ಕಮಲಂ ಕ್ರಮಾತ್ ।
ಕಲ್ಪಯೇಚ್ಛಾಲಿನೀವಾರ ಗೋಧೂಮೈಶ್ಚ ಯವಾದಿಭಿಃ ॥೩೪॥
ತಂಡುಲೈಶ್ಚ ತಿಲೈರ್ವಾಽಥ ಗೌರ ಸರ್ಷಪ ಸಂಯುತೈಃ ।
ಅಥವಾ ಕಲ್ಪಯೇ ದೇತೈ ರ್ಯಥಾಕಾಲಂ ವಿಧಾನತಃ ॥೩೫॥

---

೩೧. ಈರೀತಿಯಾಗಿ ಪ್ರಥಮಾವರಣ ಪೂಜೆಯನ್ನು ಹೇಳಿರುವೆನು. ಇನ್ನು ದ್ವಿತೀಯಾವರಣ ಪೂಜೆಯನ್ನು ಹೇಳುವೆನು ಕೇಳು. ದ್ವಿತಿಯಾ ವರಣದಲ್ಲಿ ಹದಿನಾರು ಶಕ್ತಿಗಳು.

೩೨. ತೃತೀಯಾವರಣದಲ್ಲಿ ಇಪ್ಪತ್ತುನಾಲ್ಕು ಶಕ್ತಿಗಳನ್ನು ಕ್ರಮ ವಾಗಿ ಪೂಜಿಸಬೇಕು. ಮಧ್ಯದಲ್ಲಿ ಪಿಶಾಚವೀಥಿಯನ್ನೂ, ಸುತ್ತಲೂ ನಾಭಿವೀಥಿಯನ್ನೂ ಮಾಡಬೇಕು.

೩೩. ಮುಂದೆ ಹೇಳುವ ಮಂತ್ರಗಳಿಂದ ಪಿಶಾಚಗಳನ್ನೂ ಪೂಜಿಸ ಬೇಕು. ಎಂಟು ಕೋಣದಿಂದ ಸಹಿತವಾದ ಒಂದು ಸಹಸ್ರದ ಎಂಟು ಸ್ಥಾನಗಳನ್ನು ಮಾಡಬೇಕು.

೩೪. ಆ ಸ್ಥಾನದಲ್ಲಿ ಭತ್ತ, ನೀವಾರವೆಂಬ ಧಾನ್ಯ, ಗೋಧಿ, ಯವ, ಇವುಗಳಿಂದ ಬೇರೆಬೇರೆಯಾಗಿ ಕಮಲಗಳನ್ನು ರಚಿಸಬೇಕು.

೩೫. ಅಥವಾ ಅಕ್ಕಿ, ತಿಲ, ಬೆಳ್ಳಗಿರುವ ಸಾಸುವೆ, ಇವುಗಳಿಂದ ಲಾದರೂ ಆಯಾಯಾಕಾಲಾನುಸಾರವಾಗಿ ಶಾಸ್ತ್ರೋಕ್ತಮಾರ್ಗದಿಂದ ಆ ಕಮಲಗಳನ್ನು ರಚಿಸಬಹುದು.

ಅಷ್ಟಪತ್ರಂ ಲಿಖೇತ್ತೇಷು ಕರ್ಣಿಕಾ ಕೇಸರಾನ್ವಿತಂ ।
ಶಾಲೀನಾ ಮಾಢಕಂ ಪ್ರೋಕ್ತಂ ಕಮಲಾನಾಂ ಪೃಥಕ್ ಪೃಥಕ್ ॥
ತಂಡುಲಾನಾಂ ತದರ್ಧಂ ಸ್ಯಾತ್ತದರ್ಧಂ ಚ ಯವಾದಯಃ ।
ದ್ರೋಣಂ ಪ್ರಧಾನ ಕುಂಭಸ್ಯ ತದರ್ಧಂ ತಂಡುಲಾಃ ಸ್ಮೃತಾಃ ॥
ತಿಲಾನಾ ಮಾಢಕಂ ಮಧ್ಯೇ ಯವಾನಾಂ ಚ ತದರ್ಧಕಂ ।
ಅಥಾಂ ಭಸಾ ಸಮಭ್ಯುಕ್ಷ್ಯ ಕಮಲಂ ಪ್ರಣವೇನ ತು ॥೩೮॥
ತೇಷು ಸರ್ವೇಷು ವಿಧಿನಾ ಪ್ರಣವಂ ವಿನ್ಯಸೇತ್ಕ್ರಮಾತ್ ।
ಏವಂ ಸಮಾಪ್ಯ ಚಾಭ್ಯುಕ್ಷ್ಯ ಪದ ಸಾಹಸ್ರ ಮುತ್ತಮಂ ॥೩೯॥
ಕಲಶಾನಾಂ ಸಹಸ್ರಾಣಿ ಹೈಮಾನಿ ಚ ಶುಭಾನಿ ಚ ।
ಉಕ್ತಲಕ್ಷಣಯುಕ್ತಾನಿ ಕಾರಯೇ ದ್ರಾಜತಾನಿ ವಾ ॥೪೦॥

---

೩೬. ಆ ಕಮಲಗಳಲ್ಲಿ ಕರ್ಣಿಕಾ ಕೇಸರಗಳುಳ್ಳ ಅಷ್ಟಪತ್ರಗಳನ್ನು ಬರೆಯಬೇಕು. ಒಂದೊಂದು ಕಮಲವನ್ನು ರಚಿಸಿರುವುದರಲ್ಲಿ ಒಂದೊಂದು ಕೊಳಗ ಭತ್ತವನ್ನಿಡಬೇಕು.

೩೭. ಅಕ್ಕಿಯಾದರೆ ಅದರ ಅರ್ಧವನ್ನೂ ಯವಾದಿಗಳಾದರೆ ತಂಡುಲದ ಅರ್ಧದಷ್ಟನ್ನೂ ಇಡಬೇಕು. ಪ್ರಧಾನಕಲಶಕ್ಕೆ ಒಂದು ಕೊಳಗ ಬತ್ತವನ್ನಾಗಲೀ ಅಕ್ಕಿಯಾದರೆ ಅದರ ಅರ್ಧದಷ್ಟನ್ನಾಗಲೀ ಇಡಬೇಕು.

೩೮–೩೯. ಮಧ್ಯದಲ್ಲಿ ಒಂದು ಕೊಳಗಎಳ್ಳನ್ನಾಗಲೀ, ಅಥವಾ ಅದರ ಅರ್ಧಯವವನ್ನಾಗಲೀ ಇಡಬೇಕು. ಅನಂತರ ಓಂಕಾರ ಜಪದಿಂದ ನೀರಿನಿಂದ ಕೂಡಿದ ಕಮಲವನ್ನೂ ಪ್ರೋಕ್ಷಿಸಿ, ಆ ಎಲ್ಲಾ ಕಮಲಗಳಲ್ಲಿ ವಿಧಿಪೂರ್ವಕವಾಗಿ ಓಂಕಾರಗಳನ್ನು ನ್ಯಾಸಮಾಡಬೇಕು. ಈ ರೀತಿಯಾಗಿ ಅಷ್ಟೋತ್ತರ ಸಹಸ್ರಸ್ಥಾನಗಳನ್ನೂ ಓಂಕಾರದಿಂದ ಪ್ರೋಕ್ಷಿಸಿ ಓಂಕಾರ ಗಳನ್ನು ನ್ಯಾಸಮಾಡಬೇಕು.

೪೦–೪೧. ಚಿನ್ನದಿಂದಲಾಗಲೀ, ಬೆಳ್ಳಿಯಿಂದಲಾಗಲೀ, ತಾಮ್ರ

ತಾನ್ಯುಜಾನಿ ಯಥಾನ್ಯಾಯಂ ಪ್ರಣವೇನಾರ್ಘ್ಯವಾರಿಣಾ ।
ದ್ವಾದಶಾಂಗುಲ ವಿಸ್ತಾರ ಮುದರೇ ಸಮುದಾಹೃತಂ ॥೪೧॥

ವರ್ತಿತಂ ತು ತದರ್ಧೇನ ನಾಭಿಸ್ತಸ್ಯ ವಿಧೀಯತೇ ।
ಕಂಠಂ ತು ದ್ವ್ಯಂಗುಲೋತ್ಸೇಧಂ ವಿಸ್ತರಂ ಚತುರಂಗುಲಂ ॥೪೨॥

ಓಷ್ಠಂ ಚ ದ್ವ್ಯಂಗುಲೋತ್ಸೇಧಂ ನಿರ್ಗಮಂ ದ್ವ್ಯಂಗುಲಂ ಸ್ಮೃತಂ ।
ತತ್ತದ್ವ್ಯೈ ದ್ವಿಗುಣಂ ದಿವ್ಯಂ ಶಿವಕುಂಭೇ ಪ್ರಕೀರ್ತಿತಂ ॥೪೩॥

ಯವ ಮಾತ್ರಾಂತರಂ ಸಮ್ಯಕ್ತಂತುನಾ ವೇಷ್ಟಯೇದ್ಧಿ ವೈ ।
ಅವಗುಂಠ್ಯ ತಥಾಽಭ್ಯುಕ್ಷ್ಯ ಕುಶೋಪರಿ ಯಥಾ ವಿಧಿ ॥೪೪॥

ಪೂರ್ವ ವತ್ಪ್ರಣವೇನೈವ ಪೂರಯೇದ್ಗಂಧವಾರಿಣಾ ।
ಸ್ಥಾಪಯೇಚ್ಛಿವಕುಂಭಾಧ್ಯಂ ವರ್ಧನೀಂ ಚ ವಿಧಾನತಃ ॥೪೫॥

---

ದಿಂದಲಾಗಲೀ ಶುಭವಾದ ಅಷ್ಟೋತ್ತರ ಸಹಸ್ರ ಕಲಶಗಳನ್ನು ಮಾಡಿಸ ಬೇಕು. ಆ ಕಲಶಗಳನ್ನು ಗಂಧೋದಕದಿಂದ ಪ್ರೋಕ್ಷಿಸಬೇಕು ಆ ಕಲ ಶದ ಮಧ್ಯದಲ್ಲಿ ಹನ್ನೆರಡು ಅಂಗುಲದಷ್ಟು ವಿಸ್ತಾರವಾಗಿರಬೇಕು.

೪೨. ಆ ಕಲಶಗಳ ನಾಭಿಭಾಗವು ಆರಂಗುಲವುಳ್ಳದ್ದಾಗಿಯೂ, ಕಂಠಭಾಗವು ಎರಡಂಗುಲ ಪ್ರಮಾಣವಾಗಿಯೂ, ನಾಲ್ಕು ಅಂಗುಲ ದಷ್ಟು ವಿಸ್ತಾರವಾಗಿಯೂ, ಇರಬೇಕು.

೪೩. ತುಟಿಯು ಎರಡಂಗುಲ ಪ್ರಮಾಣವಾಗಿಯೂ, ನೀರು ಬೀಳುವ ಸ್ಥಳವು ಎರಡಂಗುಲ ಪ್ರಮಾಣವಾಗಿಯೂ ಇರಬೇಕು. ಶಿವ ಕಲಶವು ಹಿಂದೆ ಹೇಳಿದ ಕಲಶ ಪರಿಮಾಣಗಳಿಗಿಂತ ಎರಡರಷ್ಟಿರಬೇಕು.

೪೪. ಒಂದು ಯವಧಾನ್ಯದ ಪರಿಮಾಣವನ್ನು ಮಧ್ಯದಲ್ಲಿ ಬಿಟ್ಟು ಚೆನ್ನಾಗಿ ನೂಲಿನಿಂದ ಆ ಕಲಶವನ್ನು ಸುತ್ತಬೇಕು. ಅನಂತರ ಶಾಸ್ತ್ರಾನುಸಾರವಾಗಿ ದರ್ಭೆಯಮೇಲೆ ಮುಚ್ಚಿ ಪ್ರೋಕ್ಷಿಸಬೇಕು.

೪೫. ಹಿಂದೆ ಹೇಳಿದ ರೀತಿಯಿಂದ ಓಂಕಾರವನ್ನು ಜಪಿಸುತ್ತಾ ಗಂಧದ ನೀರನ್ನು ಆ ಕಲಶದಲ್ಲಿ ತುಂಬಬೇಕು. ವಿಧಿಗನುಸಾರವಾಗಿ ಶಿವಕಲಶದಲ್ಲಿ ಖಡ್ಗಾಕಾರವನ್ನು ಮಾಡಬೇಕು.

ಮಧ್ಯ ಪದ್ಮಸ್ಯ ಮಧ್ಯೇ ತು ಸಕೂರ್ಚಂ ಚಾಕ್ಷತಂ ಕ್ರಮಾತ್ ।
ಆವೇಷ್ಟ್ಯ ವಸ್ತ್ರಯುಗ್ಮೇನ ಪ್ರಚ್ಛಾದ್ಯ ಕಮಲೇನ ತು ॥೪೬॥
ಹೈಮೇನ ಚಿತ್ರ ರತ್ನೇನ ಸಹಸ್ರ ಕಲಶಂ ಪೃಥಕ್ ।
ಶಿವಕುಂಭೇ ಶಿವಂ ಸ್ಥಾಪ್ಯ ಗಾಯತ್ರ್ಯಾ ಪ್ರಣವೇನ ಚ ॥೪೭॥
ವಿದ್ಮಹೇ ಪುರುಷಾಯ್ಯೆವ ಮಹಾದೇವಾಯ ಧೀಮಹಿ ।
ತನ್ನೋ ರುದ್ರಃ ಪ್ರಚೋದಯಾತ್ ॥೪೮॥
ಮಂತ್ರೇಣಾನೇನ ರುದ್ರಸ್ಯ ಸಾನ್ನಿಧ್ಯಂ ಸರ್ವದಾ ಸ್ಮೃತಂ ॥೪೯॥
ವರ್ಧನ್ಯಾಂ ದೇವಿ ಗಾಯತ್ರ್ಯಾ ದೇವೀಂ ಸಂಸ್ಥಾಪ್ಯ ಪೂಜಯೇತ್ ।
ಗಣಾಂಬಿಕಾಯೈ ವಿದ್ಮಹೇ ಮಹಾತಪಾಯೈ ಧೀಮಹಿ ।
ತನ್ನೋ ಗೌರೀ ಪ್ರಚೋದಯಾತ್ ॥೫೦॥
ಪ್ರಥಮಾವರಣೇ ಚೈವ ವಾಮಾದ್ಯಾಃ ಪರಿಕೀರ್ತಿತಾಃ ।
ಪ್ರಥಮಾ ವರಣಂ ಪ್ರೋಕ್ತಂ ದ್ವಿತೀಯಾವರಣಂ ಶೃಣು ॥೫೧॥

---

೪೬-೪೭. ಮಧ್ಯದಲ್ಲಿರುವ ಪದ್ಮದಲ್ಲಿ ಕೂರ್ಚವನ್ನೂ, ಅಕ್ಷತೆಗಳನ್ನೂ, ಕ್ರಮವಾಗಿ ಇಟ್ಟು ಎರಡು ವಸ್ತ್ರಗಳಿಂದ ಸುತ್ತಿ, ಸಹಸ್ರ ಕಮಲಗಳನ್ನೂ ಬೇರೆಬೇರೆಯಾಗಿ ರತ್ನಖಚಿತವಾದ ಚಿನ್ನದ ಕಮಲದಿಂದ ಮುಚ್ಚಬೇಕು. ರುದ್ರಗಾಯತ್ರಿಯಿಂದಲೂ, ಓಂಕಾರದಿಂದಲೂ, ಶಿವಕುಂಭದಲ್ಲಿ ಶಿವನನ್ನು ಸ್ಥಾಪಿಸಬೇಕು.

೪೮-೪೯. ಈ ಮಂತ್ರವನ್ನು ಹೇಳಿ ಆವಾಹನೆಮಾಡಿದರೆ ಶಿವನು ಯಾವಾಗಲೂ ಸಮೀಪದಲ್ಲಿರುತ್ತಾನೆಂದು ಹೇಳಲ್ಪಟ್ಟಿದೆ. ಅನಂತರ ದೇವೀಗಾಯತ್ರಿಯಿಂದ ಗೌರಿಯನ್ನು ಸ್ಥಾಪಿಸಬೇಕು.

೫೦. ಇದೇ ದೇವೀಗಾಯತ್ರಿಯು.

೫೧. ಪ್ರಥಮಾವರಣದಲ್ಲಿ ವಾಮಾದಿ ದೇವತೆಗಳನ್ನು ಹೇಳಿದೆ. ಹೀಗೆ ಪ್ರಥಮಾ ವರಣವು ಹೇಳಲ್ಪಟ್ಟಿತು. ಇನ್ನು ದ್ವಿತೀಯಾವರಣದ ವಿವರವನ್ನು ಹೇಳುವೆನು ಕೇಳು.

**ಶಕ್ತಯಃ ಷೋಡಶೈವಾತ್ರ ಪೂರ್ವಾದ್ಯಂ ತೇಷು ಸುವ್ರತ ।**
**ಐಂದ್ರವ್ಯೂಹಸ್ಯ ಮಧ್ಯೇ ತು ಸುಭದ್ರಾಂ ಸ್ಥಾಪ್ಯ ಪೂಜಯೇತ್ ॥**
**ಸುಭದ್ರಾಮಾಗ್ನೇಯ ಚಕ್ರೇ ತು ಯಾಮ್ಯೇ ತು ಕನಕಾಂಡಜಾಂ ।**
**ಅಂಬಿಕಾಂ ನೈರ್ಋತೇ ವ್ಯೂಹೇ ಮಧ್ಯಕುಂಭೇ ತು ಪೂಜಯೇತ್ ॥**
**ಶ್ರೀದೇವೀಂ ವಾರುಣೇ ಭಾಗೇ ವಾಂಗೀಶಾಂ ವಾಯುಗೋಚರೇ ।**
**ಗೋಮುಖೀಂ ಸೌಮ್ಯಭಾಗೇ ತು ಮಧ್ಯಕುಂಭೇ ತು ಪೂಜಯೇತ್ ॥**
**ರುದ್ರವ್ಯೂಹಸ್ಯ ಮಧ್ಯೇ ತು ಭದ್ರಕರ್ಣಾಂ ಸಮರ್ಚಯೇತ್ ।**
**ಐಂದ್ರಾಗ್ನಿ ವಿದಿಶೋರ್ಮಧ್ಯೇ ಪೂಜಯೇ ದಣಿಮಾಂ ಶುಭಾಂ ॥**
**ಯಾಮ್ಯ ಪಾವಕಯೋ ರ್ಮಧ್ಯೇ ಲಘಿಮಾಂ ಕಮಲೇ ನ್ಯಸೇತ್ ।**
**ರಾಕ್ಷಸಾಂತಕಯೋರ್ಮಧ್ಯೇ ಮಹಿಮಾಂ ಮಧ್ಯತೋ ಯಜೇತ್ ॥**

---

೫೨. ಓ ಒಳ್ಳೆಯ ವ್ರತಶೀಲನೇ, ಈ ದ್ವಿತೀಯಾವರಣದಲ್ಲಿ ಪೂರ್ವ ಪ್ರಭೃತಿ ಸ್ಥಾನಗಳಲ್ಲಿ ಹದಿನಾರು ಶಕ್ತಿಗಳನ್ನು ಪೂಜಿಸಬೇಕೆಂದು ಹೇಳಲ್ಪಟ್ಟಿದೆ. ಐಂದ್ರವ್ಯೂಹ ಮಧ್ಯದಲ್ಲಿ ಸುಭದ್ರೆಯನ್ನು ಸ್ಥಾಪಿಸಿ ಪೂಜಿಸಬೇಕು.

೫೩–೫೪. ಆಗ್ನೇಯ ಚಕ್ರದಲ್ಲಿ ಭದ್ರೆಯನ್ನೂ, ದಕ್ಷಿಣ ಚಕ್ರದಲ್ಲಿ ಕನಕಾಂಡಜಾ ಎಂಬ ಶಕ್ತಿಯನ್ನೂ, ನೈಋತದಲ್ಲಿನ ಮಧ್ಯಕಲಶದಲ್ಲಿ ಅಂಬಿಕೆಯನ್ನೂ ಪೂಜಿಸಬೇಕು. ಶ್ರೀದೇವಿಯನ್ನು ಪಶ್ಚಿಮಭಾಗದಲ್ಲಿಯೂ, ವಾಗೀಶಾ ಶಕ್ತಿಯನ್ನೂ ವಾಯುಭಾಗದಲ್ಲಿಯೂ, ಗೋಮುಖಿಯನ್ನು ಈಶಾನ್ಯದಲ್ಲಿ ಮಧ್ಯಕಲಶದಲ್ಲಿಯೂ ಪೂಜಿಸಬೇಕು.

೫೫. ಈಶಾನ್ಯ ದಿಗ್ಭಾಗದಲ್ಲಿ ಭದ್ರಕರ್ಣೆಯನ್ನು ಪೂಜಿಸಬೇಕು. ಪೂರ್ವ ಮತ್ತು ಆಗ್ನೇಯ ಮಧ್ಯದಲ್ಲಿ ಅಣಿಮಾದಿ ಸಿದ್ಧಿಯನ್ನು ಪೂಜಿಸಬೇಕು.

೫೬–೫೭. ದಕ್ಷಿಣಾ ಮತ್ತು ಆಗ್ನೇಯ ದಿಗ್ಭಾಗಗಳ ಮಧ್ಯದಲ್ಲಿ ಅಣಿಮಾಸಿದ್ಧಿಯನ್ನೂ, ಆಗ್ನೇಯ ದಕ್ಷಿಣದಿಕ್ಕುಗಳ ಮಧ್ಯಭಾಗದಲ್ಲಿ ಕಮಲದಲ್ಲಿ ಲಘಿಮಾ ಸಿದ್ಧಿಯನ್ನೂ, ದಕ್ಷಿಣಾ ಮತ್ತು ನೈಋತ್ಯ ದಿಕ್ಕಿನ ಮಧ್ಯದಲ್ಲಿ ಮಹಿಮಾ ಸಿದ್ಧಿಯನ್ನೂ ಪೂಜಿಸಬೇಕು. ನೈಋತ್ಯ,

ವರುಣಾ ಸುರಯೋ ರ್ಮಧ್ಯೇ ಪ್ರಾಪ್ತಿಂ ವೈ ಮಧ್ಯತೋ ಯಜೇತ್ ।
ವರುಣಾ ನಿಲಯೋ ರ್ಮಧ್ಯೇ ಪ್ರಾಕಾಮ್ಯಂ ಕಮಲೇ ನ್ಯಸೇತ್ ॥
ವಿತ್ತೇಶಾನಿಲಯೋ ರ್ಮಧ್ಯೇ ಈಶಿತ್ವಂ ಸ್ಥಾಪ್ಯ ಪೂಜಯೇತ್ ।
ವಿತ್ತೇಶೇಶಾನಯೋ ರ್ಮಧ್ಯೇ ವಶಿತ್ವಂ ಸ್ಥಾಪ್ಯ ಪೂಜಯೇತ್ ॥೫೮॥
ಐಂದ್ರೇಶೇಶಾನಯೋ ರ್ಮಧ್ಯೇ ಯಜೇತ್ಕಾಮಾವ ಸಾಯಕಂ ।
ದ್ವಿತೀಯಾ ವರಣಂ ಪ್ರೋಕ್ತಂ ತೃತೀಯಾವರಣಂ ಶೃಣು ॥೫೯॥
ಶಕ್ತಯಸ್ತು ಚತುಸ್ತ್ರಿಂಶ ತ್ಪ್ರಧಾನಕಲಶೇಷು ಚ ।
ಪೂಜಯೇತ್ ವ್ಯೂಹ ಮಧ್ಯೇ ತು ಪೂರ್ವವದ್ವಿಧಿ ಪೂರ್ವಕಂ ॥೬೦॥
ದೀಕ್ಷಾಂ ದೀಕ್ಷಾಯಿಕಾಂ ಚೈವ ಚಂಡಾಂ ಚಂಡಾಂಶು ನಾಯಿಕಾಂ ।
ಸುಮತಿಂ ಸುಮತ್ಯಾಯಿಾಂ ಚ ಗೋಪಾಂ ಗೋಪಾಯಿಕಾಂ ತಥಾ ॥

---

ಪಶ್ಚಿಮದಿಕ್ಕುಗಳ ಮಧ್ಯದಲ್ಲಿ ಪ್ರಾಪ್ತಿಯೆಂಬ ಸಿದ್ಧಿಯನ್ನೂ ಪಶ್ಚಿಮ ವಾಯುವ್ಯ ದಿಕ್ಕುಗಳ ಮಧ್ಯಭಾಗದಲ್ಲಿ ಕಮಲದಲ್ಲಿ ಪ್ರಾಕಾಮ್ಯ ಸಿದ್ಧಿಯನ್ನೂ ಸ್ಥಾಪಿಸಿ ಪೂಜಿಸಬೇಕು. ವಾಯುವ್ಯ ಉತ್ತರ ದಿಕ್ಕುಗಳ ಮಧ್ಯದಲ್ಲಿ ಈಶಿತ್ವ ಸಿದ್ಧಿಯನ್ನೂ, ಉತ್ತರ ಮತ್ತು ಈಶಾನ್ಯ ದಿಗ್ಭಾಗಗಳ ಮಧ್ಯಭಾಗದಲ್ಲಿ ವಶಿತ್ವ ಸಿದ್ಧಿಯನ್ನೂ ಪೂಜಿಸಬೇಕು ಈಶಾನ್ಯ ಪೂರ್ವ ದಿಕ್ಕುಗಳ ಮಧ್ಯದಲ್ಲಿ ಕಾಮಾವಸಾಯಕವೆಂಬ ಸಿದ್ಧಿಯನ್ನೂ ಪೂಜಿಸಬೇಕು. ಈ ರೀತಿಯಾಗಿ ದ್ವಿತೀಯಾವರಣಪೂಜಾಕ್ರಮವು ಹೇಳಲ್ಪಟ್ಟಿತು. ಇನ್ನು ತೃತೀಯಾವರಣದಲ್ಲಿ ಪೂಜಾಕ್ರಮವನ್ನು ಹೇಳುವೆನು ಕೇಳು.

೬೦. ಅಷ್ಟದಿಕ್ಕುಗಳಲ್ಲಿನ ವ್ಯೂಹಮಧ್ಯದಲ್ಲಿ ಪ್ರಧಾನಕಲಶದಲ್ಲಿ ದ್ವಿತೀಯಾವರಣದಲ್ಲಿ ಹೇಳಿದಂತೆ, ಇಪ್ಪತ್ತುನಾಲ್ಕು ಶಕ್ತಿಗಳನ್ನು ವಿಧ್ಯನುಸಾರವಾಗಿ ಪೂಜಿಸಬೇಕು.

೬೧. ದೀಕ್ಷಾ, ದೀಕ್ಷಾಯಿಕಾ, ಚಂಡಾ, ಚಂಡಾಂಶುನಾಯಿಕಾ, ಸುಮತೀ, ಸುಮತ್ಯಾಯೀ, ಗೋಪಾ, ಗೋಪಾಯಿಕಾ, ಎಂಬೀ ಅಷ್ಟ ಶಕ್ತಿಗಳನ್ನು ಮುಖ್ಯವಾಗಿ ಪೂಜಿಸಬೇಕು.

ಅಥ ನಂದಂ ಚ ನಂದಾಯಿಾಂ ಪಿತಾಮಹ ಮತಃ ಪರಂ ।
ಪಿತಾಮಹಾಯಿಾಂ ಪೂರ್ವಾದ್ಯಂ ವಿಧಿನಾ ಸ್ಥಾಪ್ಯ ಪೂಜಯೇತ್ ॥
ಏವಂ ಸಂಪೂಜ್ಯ ವಿಧಿನಾ ತೃತೀಯಾವರಣಂ ಶುಭಂ ।
ಸೌಭದ್ರಂ ವ್ಯೂಹಮಾಸಾದ್ಯ ಪ್ರಥಮಾವರಣೇ ಕ್ರಮಾತ್ ॥೬೩॥
ಪ್ರಾಗಾದ್ಯಂ ವಿಧಿನಾ ಸ್ಥಾಪ್ಯ ಶಕ್ತ್ಯಷ್ಟಕ ಮನುಕ್ರಮಾತ್ ।
ದ್ವಿತೀಯಾ ವರಣೇ ಚೈವ ಪ್ರಾಗಾದ್ಯಂ ಶೃಣು ಶಕ್ತಯಃ ॥೬೪॥
ಷೋಡಶೈವ ತು ಅಭ್ಯರ್ಚ್ಯ ಪದ್ಮಮುದ್ರಾಂ ತು ದರ್ಶಯೇತ್ ।
ಬಿಂದುಕಾ ಬಿಂದು ಗರ್ಭಾ ಚ ನಾದಿನೀ ನಾದ ಗರ್ಭಜಾ ॥೬೫॥
ಶಕ್ತಿಕಾ ಶಕ್ತಿ ಗರ್ಭಾ ಚ ಪರಾ ಚೈವ ಪರಾಪರಾ ।
ಪ್ರಥಮಾ ವರಣೇಽಷ್ಟೌ ಚ ಶಕ್ತಯಃ ಪರಿಕೀರ್ತಿತಾಃ ॥೬೬॥

---

೬೨. ಚತುರ್ವಿಂಶತಿ ಶಕ್ತಿಪೂಜಾನಂತರದಲ್ಲಿ, ನಂದ, ನಂದಾಯೀ, ಪಿತಾಮಹ, ಪಿತಾಮಹಾಯೀ, ಎಂಬ ದೇವತೆಗಳನ್ನು ಪೂರ್ವಾದ್ಯವಾದ ಸ್ಥಾನಗಳಲ್ಲಿ ವಿಧಿಪೂರ್ವಕವಾಗಿ ಸ್ಥಾಪಿಸಿ ಪೂಜಿಸಬೇಕು.

೬೩–೬೪. ಈ ರೀತಿಯಾಗಿ ಶುಭವಾದ ತೃತೀಯಾವರಣ ಪೂಜೆಯನ್ನು ಪೂರೈಸಿ ಸುಭದ್ರಾವ್ಯೂಹಕ್ಕೆ ಬಂದು ಪ್ರಥಮಾವರಣದಲ್ಲಿ ಪೂರ್ವದಿಕ್ಕು ಮೊದಲುಗೊಂಡು ಕ್ರಮವಾಗಿ ಎಂಟು ದಿಕ್ಕುಗಳಲ್ಲಿ ಅಷ್ಟಶಕ್ತಿಗಳನ್ನು ಸ್ಥಾಪಿಸಿ ಪೂಜಿಸಬೇಕು. ದ್ವಿತೀಯಾವರಣದಲ್ಲಿ ಪ್ರಾಗಾದಿಯಾದ ಸ್ಥಾನಗಳಲ್ಲಿ ಪೂಜಿಸಬೇಕಾದ ಶಕ್ತಿಗಳನ್ನು ಕೇಳು.

೬೫. ದ್ವಿತೀಯಾವರಣದಲ್ಲಿ ಹದಿನಾರು ಶಕ್ತಿಗಳನ್ನು ಪ್ರಾಗಾದಿಯಾಗಿ ಸ್ಥಾಪಿಸಿ ಪೂಜಿಸಿ ಪದ್ಮಮುದ್ರೆಯನ್ನು ತೋರಿಸಬೇಕು. ಬಿಂದುಕಾ, ಬಿಂದುಗರ್ಭಾ, ನಾದಿನೀ, ನಾದಗರ್ಭಜಾ, ಶಕ್ತಿಕಾ, ಶಕ್ತಿಗರ್ಭಾ, ಪದ್ಮಾ, ಪರಾಪರಾ, ಈ ಎಂಟುದ್ವಿತೀಯಾವರಣದ ಶಕ್ತಿಗಳು.

೬೬. ಪ್ರಥಮಾವರಣದಲ್ಲಿಯೂ ಸಹ ಎಂಟು ಶಕ್ತಿಗಳು ಪ್ರಸಿದ್ಧವಾಗಿ ಹೇಳಲ್ಪಟ್ಟಿವೆ.

ಚಂಡಾ ಚಂಡಮುಖೀ ಚೈವ ಚಂಡವೇಗಾ ಮನೋಜವಾ ।
ಚಂಡಾಕ್ಷೀ ಚಂಡನಿರ್ಘೋಷಾ ಭ್ರುಕುಟೀ ಚಂಡನಾಯಿಕಾ ॥೬೭॥
ಮನೋತ್ಸೇಧಾ ಮನೋಽಧ್ಯಕ್ಷಾ ಮಾನಸೀ ಮಾನನಾಯಿಕಾ ।
ಮನೋಹರೀ ಮನೋಹ್ಲಾದೀ ಮನಃ ಪ್ರೀತಿರ್ಮಹೇಶ್ವರೀ ॥೬೮॥
ದ್ವಿತೀಯಾ ವರಣೇ ಚೈವ ಷೋಡಶೈವ ಪ್ರಕೀರ್ತಿತಾಃ ।
ಸೌಭದ್ರಃ ಕಥಿತೋ ವ್ಯೂಹೋ ಭದ್ರಂ ವ್ಯೂಹಂ ಶೃಣುಷ್ವ ಮೇ ॥
ಐಂದ್ರೀ ಹೌತಾಶನೀ ಯಾಮ್ಯಾ ನೈರ್ಋತೀ ವಾರುಣೀ ತಥಾ ।
ವಾಯುವ್ಯಾ ಚೈವ ಕೌಬೇರೀ ಐಶಾನೀ ಚಾಷ್ಟಶಕ್ತಯಃ ॥೭೦॥
ಪ್ರಥಮಾ ವರಣಂ ಪ್ರೋಕ್ತಂ ದ್ವಿತೀಯಾವರಣಂ ಶೃಣು ।
ಹರಿಣೀ ಚ ಸುವರ್ಣಾ ಚ ಕಾಂಚನೀ ಹಾಟಕೀ ತಥಾ ॥೭೧॥

---

೬೭-೬೮. ದ್ವಿತೀಯಾ ವರಣದಲ್ಲಿ ಚಂಡಾ, ಚಂಡಮುಖೀ, ಚಂಡವೇಗಾ, ಮನೋಜವಾ, ಚಂಡಾಕ್ಷೀ, ಚಂಡನಿರ್ಘೋಷಾ, ಭ್ರುಕುಟೀ, ಚಂಡನಾಯಿಕಾ, ಮನೋತ್ಸೇಧಾ, ಮನೋಧ್ಯಕ್ಷಾ, ಮಾನಸೀ, ಮಾನನಾಯಿಕಾ, ಮನೋಹರೀ, ಮನೋಹ್ಲಾದೀ, ಮನಃ ಪ್ರೀತಿ, ಮಹೇಶ್ವರಿಗಳೆಂಬ ಹದಿನಾರು ಶಕ್ತಿಗಳು ಪ್ರಸಿದ್ಧವಾಗಿವೆ.

೬೯-೭೦. ಈ ರೀತಿಯಾಗಿ ಸುಭದ್ರಾ ದೇವತಾವ್ಯೂಹವು ಹೇಳಲ್ಪಟ್ಟಿತು. ಇನ್ನು ಭದ್ರವ್ಯೂಹವನ್ನು ಹೇಳುವೆನು ಕೇಳು. ಅದರಲ್ಲಿ ಐಂದ್ರೀ, ಹೌತಾಶನೀ, ಯಾಮ್ಯಾ, ನೈಋತೀ, ವಾರುಣೀ, ವಾಯುವ್ಯಾ, ಕೌಬೇರೀ, ಐಶಾನಿಗಳೆಂಬ ಎಂಟು ಶಕ್ತಿಗಳು. ಹೀಗೆ ಪ್ರಥಮಾವರಣವನ್ನು ಹೇಳಿರುವೆನು. ಇನ್ನು ದ್ವಿತೀಯಾವರಣವನ್ನು ಹೇಳುವೆನು ಕೇಳು.

೭೧-೭೩. ದ್ವಿತೀಯಾವರಣದ ಭದ್ರಾಖ್ಯವ್ಯೂಹದಲ್ಲಿ ಹರಿಣೀ, ಸುವರ್ಣಾ, ಕಾಂಚನೀ, ಹಾಟಕೀ, ರುಕ್ಮಿಣೀ, ಸತ್ಯಭಾಮಾ, ಸುಭಗಾ, ಜಂಬುನಾಯಿಕಾ, ವಾಗ್ಭಟಾ, ವಾಕ್ಪಥಾ, ವಾಣೀ, ಭೀಮಾ, ಚಿತ್ರರಥಾ, ಸುಧೀ; ವೇದಮಾತಾ, ಹಿರಣ್ಯಾಕ್ಷೀ, ಎಂದು ಹದಿನಾರು ಶಕ್ತಿಗಳು. ಈ ರೀತಿಯಾಗಿ ಭದ್ರವ್ಯೂಹವು ಹೇಳಲ್ಪಟ್ಟಿತು. ಕನಕಾಂಡಜವೆಂಬ ವ್ಯೂಹವನ್ನು ಹೇಳುವೆನು ಕೇಳು.

ರುಕ್ಮಿಣೀ ಸತ್ಯಭಾಮಾ ಚ ಸುಭಗಾ ಜಂಬುನಾಯಿಕಾ ।
ವಾಗ್ಭಟಾ ವಾಕ್ಪಥಾ ವಾಣೀ ಭೀಮಾ ಚಿತ್ರರಥಾ ಸುಧೀಃ ॥೭೨॥

ವೇದಮಾತಾ ಹಿರಣ್ಯಾಕ್ಷೀ ದ್ವಿತೀಯಾವರಣೇ ಸ್ಮೃತಾ(ಃ) ।
ಭದ್ರಾಖ್ಯಃ ಕಥಿತೋ ವ್ಯೂಹಃ ಕನಕಾಖ್ಯಂ ಶೃಣುಷ್ವ ಮೇ ॥೭೩॥

ವಜ್ರಂ ಶಕ್ತಿಂ ಚ ದಂಡಂ ಚ ಖಡ್ಗಂ ಪಾಶಂ ಧ್ವಜಂ ತಥಾ ।
ಗದಾಂ ತ್ರಿಶೂಲಂ ಕ್ರಮಶಃ ಪ್ರಥಮಾವರಣೇ ಸ್ಮೃತಾಃ ॥೭೪॥

ಯುದ್ಧಾ ಪ್ರಬುದ್ಧಾ ಚಂಡಾ ಚ ಮುಂಡಾ ಚೈವ ಕಪಾಲಿನೀ ।
ಮೃತ್ಯು ಹಂತ್ರೀ ವಿರೂಪಾಕ್ಷೀ ಕಪರ್ದಾ ಕಮಲಾಸನಾ ॥೭೫॥

ದಂಷ್ಟ್ರಿಣೀ ರಂಗಿಣೀ ಚೈವ ಲಂಬಾಕ್ಷೀ ಕಂಕ ಭೂಷಣೀ ।
ಸಂಭಾವಾ ಭಾವಿನೀ ಚೈವ ಷೋಡಶೈವ ಪ್ರಕೀರ್ತಿತಾಃ ॥೭೬॥

ಕಥಿತಃ ಕನಕವ್ಯೂಹೋ ಹ್ಯಂಬಿಕಾಖ್ಯಂ ಶೃಣುಷ್ವ ಮೇ ।
ಖೇಚರೀ ಚಾತ್ಮನಾ ಸಾ ಚ ಭಾವಿನೀ ವಹ್ನಿ ರೂಪಿಣೀ ॥೭೭॥

ವಹ್ನಿನೀ ವಹ್ನಿನಾಭಾ ಚ ಮಹಿಮಾಽಮೃತಲಾಲಸಾ ।
ಪ್ರಥಮಾವರಣೇ ಚಾಷ್ಟೌ ಶಕ್ತಯಃ ಸರ್ವಸಂಮತಾಃ ॥೭೮॥

---

೭೪. ಪ್ರಥಮಾವರಣದಲ್ಲಿ ಪೂರ್ವದಿಕ್ಕು ಮೊದಲುಗೊಂಡು ಕ್ರಮವಾಗಿ ವಜ್ರ, ಶಕ್ತಿ, ದಂಡ, ಖಡ್ಗ, ಪಾಶ, ಧ್ವಜ, ಗದೆ, ತ್ರಿಶೂಲ, ಈ ಆಯುಧಗಳನ್ನು ಆವಾಹನೆಮಾಡಬೇಕು.

೭೫–೭೬. ಯುದ್ಧಾ, ಪ್ರಬುದ್ಧಾ, ಚಂಡಾ, ಮುಂಡಾ, ಕಪಾಲಿನೀ, ಮೃತ್ಯುಹಂತ್ರೀ, ವಿರೂಪಾಕ್ಷೀ, ಕಪರ್ದಾ, ಕಮಲಾಸನಾ, ದಂಷ್ಟ್ರಿಣೀ, ರಂಗಿಣೀ, ಲಂಬಾಕ್ಷೀ, ಕಂಕಭೂಷಣೀ, ಸಂಭಾವಾ, ಭಾವಿನೀ, ಎಂಬ ಹದಿನಾರು ಶಕ್ತಿಗಳನ್ನು ಪೂಜಿಸಬೇಕು. ಕನಕಾಖ್ಯ ವ್ಯೂಹದಲ್ಲಿ ಆವರಣವ್ಯೂಹವೂ ಹೇಳಲ್ಪಟ್ಟಿತು. ಇನ್ನು ಅಂಬಿಕಾವ್ಯೂಹವನ್ನು ಹೇಳುವೆನು ಕೇಳು.

೭೭–೭೮. ಪ್ರಥಮಾವರಣದಲ್ಲಿ ಖೇಚರೀ, ಆತ್ಮನಾ, ಭಾವಿನೀ, ವಹ್ನಿರೂಪಿಣೀ, ವಹ್ನಿನೀ, ವಹ್ನಿನಾಭಾ, ಮಹಿಮಾ, ಅಮೃತಲಾಲಸಾ, ಎಂಬ ಎಂಟುಶಕ್ತಿಗಳು ಪ್ರಸಿದ್ಧವಾಗಿವೆ.

ಕ್ಷಮಾ ಚ ಶಿಖರಾ ದೇವೀ ಋತುರತ್ನಾ ಶಿಲಾ ತಥಾ ।
ಛಾಯಾ ಭೂತಪನೀ ಧನ್ಯಾ ಇಂದ್ರಮಾತಾ ಚ ವೈಷ್ಣವೀ ॥೭೯॥

ಕೃಷ್ಣಾ ರಾಗವತೀ ಮೋಹಾ ಕಾಮಕೋಪಾ ಮಹೋತ್ಕಟಾ ।
ಇಂದ್ರಾ ಚ ಬಧಿರಾ ದೇವೀ ಷೋಡಶೈತಾಃ ಪ್ರಕೀರ್ತಿತಾಃ ॥೮೦॥

ಕಥಿತ ಶ್ಚಾಂಬಿಕಾ ವ್ಯೂಹಃ ಶ್ರೀವ್ಯೂಹಂ ಶೃಣು ಸುವ್ರತ ।
ಸ್ಪರ್ಶಾ ಸ್ಪರ್ಶವತೀ ಗಂಧಾ ಪ್ರಾಣಾಽಪಾನಾ ಸಮಾನಿಕಾ ॥೮೧॥

ಉದಾನಾ ವ್ಯಾನ ನಾಮಾ ಚ ಪ್ರಥಮಾ ವರಣೇ ಸ್ಮೃತಾಃ ।
ತಮೋ ಹತಾ ಪ್ರಭಾ ಮೋಘಾ ತೇಜಿನೀ ದಹಿನೀ ತಥಾ ॥೮೨॥

ಭೀಮಾಸ್ಯಾ ಜಾಲಿನೀ ಚೋಷಾ ಶೋಷಿಣೀ ರುದ್ರನಾಯಿಕಾ ।
ವೀರಭದ್ರಾ ಗಣಾಧ್ಯಕ್ಷಾ ಚಂದ್ರಹಾಸಾ ಚ ಗಹ್ವರಾ ॥೮೩॥

---

೭೯–೮೦. ದಯಾ, ಶಿಖರಾದೇವೀ, ಋತುರತ್ನಾ, ಶಿಲಾ, ಛಾಯಾ, ಭೂತಪನೀ, ಧನ್ಯಾ, ಇಂದ್ರಮಾತಾ, ವೈಷ್ಣವೀ, ಕೃಷ್ಣಾ, ರಾಗವತೀ, ಮೋಹಾ, ಕಾಮಕೋಪಾ, ಮಹೋತ್ಕಟಾ, ಇಂದ್ರಾ, ಬಧಿರಾದೇವೀ, ಇತ್ಯಾದಿ ಹದಿನಾರು ದ್ವಿತೀಯಾವರಣದ ಶಕ್ತಿಗಳು. ಈ ರೀತಿಯಾಗಿ ಅಂಬಿಕಾವ್ಯೂಹವು ಹೇಳಲ್ಪಟ್ಟಿತು. ಇನ್ನು ಶ್ರೀವ್ಯೂಹವನ್ನು ಕೇಳು.

೮೧. ಶ್ರೀ ಎಂಬ ವ್ಯೂಹದ ಪ್ರಥಮಾವರಣದಲ್ಲಿ ಸ್ಪರ್ಶಾ, ಸ್ಪರ್ಶವತೀ, ಗಂಧಾ, ಪ್ರಾಣಾ, ಅಪಾನಾ, ಸಮಾನಿಕಾ, ಉದಾನಾ, ವ್ಯಾನಾ, ಇತ್ಯಾದಿ ಎಂಟುಶಕ್ತಿಗಳು.

೮೨–೮೪. ದ್ವಿತೀಯಾವರಣದಲ್ಲಿ ತಮೋಹತಾ, ಪ್ರಭಾ, ಅಮೋಘಾ, ತೇಜಿನೀ, ದಹಿನೀ, ಭಿಮಾಖ್ಯಾ, ಜಾಲಿನೀ, ಉಷಾ, ಶೋಷಿಣೀ, ರುದ್ರನಾಯಿಕಾ, ವೀರಭದ್ರಾ, ಗಣಾಧ್ಯಕ್ಷಾ, ಚಂದ್ರಹಾಸಾ, ಗಹ್ವರಾ, ಗಣಮಾತಾ, ಅಂಬಿಕಾ, ಇವೇ ಹದಿನಾರು ಶಕ್ತಿಗಳು.

ಗಣಮಾತಾಽಂಬಿಕಾ ಚೈವ ಶಕ್ತಯಃ ಸರ್ವಸಮ್ಮತಾಃ ।
ದ್ವಿತಿಯಾ ವರಣೇ ಪ್ರೋಕ್ತಾಃ ಷೋಡಶೈವ ಯಥಾಕ್ರಮಂ ॥೮೪॥
ಶ್ರೀವ್ಯೂಹಃ ಕಥಿತೋ ಭದ್ರಂ ವಾಗೀಶಂ ಶೃಣು ಸುವ್ರತ ।
ಧಾರಾ ವಾರಿಧರಾ ಚೈವ ವಹ್ನಿಕೀ ನಾಶಕೀ ತಥಾ ॥೮೫॥
ಮತ್ರ್ಯಾತೀತಾ ಮಹಾಮಾಯಾ ವಜ್ರಿಣೀ ಕಾಮಧೇನುಕಾ ।
ಪ್ರಥಮಾ ವರಣೇಽಪ್ಯೇವಂ ಶಕ್ತಯೋಽಷ್ಟೌ ಪ್ರಕೀರ್ತಿತಾಃ ॥೮೬॥
ಪಯೋಷ್ಣೀ ವಾರುಣೀ ಶಾಂತಾ ಜಯಂತೀ ಚ ವರಪ್ರದಾ ।
ಪ್ಲಾವಿನೀ ಜಲಮಾತಾ ಚ ಪಯೋಮಾತಾ ಮಹಾಽಂಬಿಕಾ ॥೮೭॥
ರಕ್ತಾ ಕರಾಲೀ ಚಂಡಾಕ್ಷೀ ಮಹೋಚ್ಛುಷ್ಮಾ ಪಯಸ್ವಿನೀ ।
ಮಾಯಾ ವಿದ್ಯೇಶ್ವರೀ ಕಾಲೀ ಕಾಲಿಕಾ ಚ ಯಥಾ ಕ್ರಮಂ ॥೮೮॥
ಷೋಡಶೈವ ಸಮಾಖ್ಯಾತಾಃ ಶಕ್ತಯಃ ಸರ್ವ ಸಂಮತಾಃ ।
ವ್ಯೂಹೋ ವಾಗೀಶ್ವರಃಪ್ರೋಕ್ತೋ ಗೋಮುಖೋವ್ಯೂಹ ಉಚ್ಯತೇ

---

ಹೀಗೆ ಶ್ರೀವ್ಯೂಹವು ಹೇಳಲ್ಪಟ್ಟಿತು. ಮಂಗಳಕರವಾದ ವಾಗೀಶವ್ಯೂಹವನ್ನು ಹೇಳುವೆನು ಕೇಳು.

೮೫–೮೬. ವಾಗೀಶವ್ಯೂಹದ ಪ್ರಥಮಾವರಣದಲ್ಲಿ ಧಾರಾ, ವಾರಿಧರಾ, ವಹ್ನಿಕೀ, ನಾಶಕೀ ಮರ್ತ್ಯಾತೀತಾ, ಮಹಾಮಾಯಾ, ವಜ್ರಿಣೀ, ಕಾಮಧೇನುಕಾ, ಎಂದು ಎಂಟು ಶಕ್ತಿಗಳು.

೮೭–೮೯. ವಾಗೀಶವ್ಯೂಹದ ದ್ವಿತೀಯಾವರಣದಲ್ಲಿ ಪಯೋಷ್ಣೀ, ವಾರುಣೀ, ಶಾಂತಾ, ಜಯಂತೀ, ವರಪ್ರದಾ, ಪ್ಲಾವಿನೀ, ಜಲಮಾತಾ, ಪಯೋಮಾತಾ, ರಕ್ತಾ, ಕರಾಲೀ, ಚಂಡಾಕ್ಷೀ, ಮಹೋಚ್ಛುಷ್ಮಾ, ಪಯಸ್ವಿನೀ, ಮಾಯಾ, ವಿದ್ಯೇಶ್ವರೀ, ಕಾಲೀ, ಕಾಲಿಕಾ, ಎಂದು ಹದಿನಾರು ಶಕ್ತಿಗಳು, ಈ ರೀತಿಯಾಗಿ ವಾಗಿಶವ್ಯೂಹವು ಹೇಳಲ್ಪಟ್ಟಿತು. ಗೋಮುಖವ್ಯೂಹವನ್ನು ಕೇಳು.

ಶಂಕಿನೀ ಹಾಲಿನೀ ಚೈವ ಲಂಕಾವರ್ಣಾ ಚ ಕಲ್ಕಿನೀ ।
ಯಕ್ಷಿಣೀ ಮಾಲಿನೀ ಚೈವ ವಾಮನೀ ಚ ರಸಾತ್ಮನೀ ॥೯೦॥

ಪ್ರಥಮಾ ವರಣೇ ಚೈವ ಶಕ್ತಯೋಽಷ್ಟೌ ಪ್ರಕೀರ್ತಿತಾಃ ।
ಚಂಡಾ ಘಂಟಾ ಮಹಾನಾದಾ ಸುಮುಖೀ ದುರ್ಮುಖೀ ಬಲಾ ॥

ರೇವತೀ ಪ್ರಥಮಾ ಘೋರಾ ಸೈನ್ಯಾ ಲೀನಾ ಮಹಾಬಲಾ ।
ಜಯಾ ಚ ವಿಜಯಾ ಚೈವ ಅಪರಾ ಚಾಪರಾಜಿತಾ ॥೯೨॥

ದ್ವಿತೀಯಾವರಣೇ ಚೈವ ಶಕ್ತಯಃ ಷೋಡಶೈವ ತು ।
ಕಥಿತೋ ಗೋಮುಖೀ ವ್ಯೂಹೋ ಭದ್ರಕರ್ಣೀಂ ಶೃಣುಷ್ವ ಮೇ ॥

ಮಹಾಜಯಾ ವಿರೂಪಾಕ್ಷೀ ಶುಕ್ಲಾ ಭಾ ಕಾಶ ಮಾತೃಕಾ ।
ಸಂಹಾರೀ ಜಾತಹಾರೀ ಚ ದಂಷ್ಟ್ರಾಲೀ ಶುಷ್ಕ ರೇವತೀ ॥೯೪॥

---

೯೦. ಗೋಮುಖವ್ಯೂಹದ ಪ್ರಥಮಾವರಣದಲ್ಲಿ ಶಂಕಿನೀ, ಹಾಲಿನೀ, ಲಂಕಾವರ್ಣಾ, ಕಲ್ಕಿನೀ, ಯಕ್ಷಿಣೀ, ಮಾಲಿನೀ, ವಾಮನೀ, ರಸಾತ್ಮನೀ, ಎಂಬ ಎಂಟು ಶಕ್ತಿಗಳು, ಪ್ರಸಿದ್ಧವಾಗಿವೆ.

೯೧-೯೩. ಗೋಮುಖೀವ್ಯೂಹದ ದ್ವಿತೀಯಾವರಣದಲ್ಲಿ ಚಂಡಾ, ಘಂಟಾ, ಮಹಾನಾದಾ, ಸುಮುಖೀ, ದುರ್ಮುಖೀ, ಬಲಾ, ರೇವತೀ, ಪ್ರಥಮಾ, ಘೋರಾ, ಸೈನ್ಯಾ, ಲೀನಾ, ಮಹಾಬಲಾ, ಜಯಾ, ವಿಜಯಾ, ಅಪರಾ, ಅಪರಾಜಿತಾ, ಇವೇಮುಂತಾದ, ಹದಿನಾರು ಶಕ್ತಿಗಳು. ಈ ರೀತಿಯಾಗಿ ಗೋಮುಖವ್ಯೂಹವು ಹೇಳಲ್ಪಟಿತು. ಇನ್ನು ಭದ್ರ ಕರ್ಣೀ ವ್ಯೂಹವನ್ನು ಹೇಳುತ್ತೇನೆ ಕೇಳು.

೯೪. ಆ ಭದ್ರಕರ್ಣಿಕಾ ವ್ಯೂಹದ ಪ್ರಥಮಾವರಣದಲ್ಲಿ ಮಹಾ ಜಯಾ, ವಿರೂಪಾಕ್ಷೀ, ಶುಕ್ಲಾಭಾ, ಆಕಾಶಮಾತೃಕಾ, ಸಂಹಾರೀ, ಜಾತಹಾರೀ, ದಂಷ್ಟ್ರಾಲೀ, ಶುಷ್ಕರೇವತೀ, ಎಂಬಿವೇ ಮುಂತಾದ ಎಂಟು ಶಕ್ತಿಗಳು.

ಪ್ರಥಮಾ ವರಣೇ ಚಾಷ್ಟೌ ಶಕ್ತಯಃ ಪರಿಕೀರ್ತಿತಾಃ ।
ಪಿಪೀಲಿಕಾ ಪುಣ್ಯಹಾರೀ ಅಶನೀ ಸರ್ವ ಹಾರಿಣೀ ॥೯೫॥

ಭದ್ರಹಾ ವಿಶ್ವಹಾರೀ ಚ ಹಿಮಾ ಯೋಗೀಶ್ವರೀ ತಥಾ ।
ಛಿದ್ರಾ ಭಾನುಮತೀ ಛಿದ್ರಾ ಸೈಂಹಿಕೀ ಸುರಭೀ ಸಮಾ ॥೯೬॥

ಸರ್ವ ಭಾವ್ಯಾ ಚ ವೇಗಾಖ್ಯಾ ಶಕ್ತಯಃ ಷೋಡಶೈವ ತು ।
ಮಹಾ ವ್ಯೂಹಾಷ್ಟಕಂ ಪ್ರೋಕ್ತ ಮುಪವ್ಯೂಹಾಷ್ಟಕಂ ಶೃಣು ॥೯೭॥

ಅಣಿಮಾ ವ್ಯೂಹ ಮಾವೇಷ್ಟ್ಯ ಪ್ರಥಮಾ ವರಣೇ ಕ್ರಮಾತ್ ।
ಐಂದ್ರಾ ತು ಚಿತ್ರ ಭಾನು ಶ್ಚ ವಾರುಣೀ ದಂಡಿರೇವ ಚ ॥೯೮॥

ಪ್ರಾಣರೂಪೀ ತಥಾ ಹಂಸಃ ಸ್ವಾತ್ಮಶಕ್ತಿಃ ಪಿತಾಮಹಃ ।
ಪ್ರಥಮಾ ವರಣಂ ಪ್ರೋಕ್ತಂ ದ್ವಿತೀಯಾ ವರಣಂ ಶೃಣು ॥೯೯॥

---

೯೫-೯೭. ಭದ್ರಕರ್ಣೀವ್ಯೂಹದ ದ್ವಿತೀಯಾವರಣದಲ್ಲಿ ಪಿಪೀಲಿಕಾ, ಪುಣ್ಯಹಾರೀ, ಅಶನೀ, ಸರ್ವಹಾರಿಣೀ, ಭದ್ರಹಾ, ವಿಶ್ವಹಾರೀ, ಹಿಮಾ, ಯೋಗೇಶ್ವರೀ, ಭದ್ರಾ, ಭಾನುಮತೀ, ಛಿದ್ರಾ, ಸೈಂಹಿಕೀ, ಸುರಬೀ, ಸಮಾ, ಸರ್ವಭವ್ಯಾ, ವೇಗಾ, ಎಂಬ ಹದಿನಾರು ಶಕ್ತಿಗಳು. ಈ ರೀತಿಯಾಗಿ ಎಂಟು ಮಹಾವ್ಯೂಹಗಳು ಹೇಳಲ್ಪಟ್ಟವು. ಇನ್ನು ಎಂಟು ಉಪವ್ಯೂಹಗಳನ್ನು ಹೇಳುವೆನು ಕೇಳು.

೯೮-೧೦೧. ಅಣಿಮಾವ್ಯೂಹವನ್ನೂ ಆವರಿಸಿ ಪ್ರಥಮಾವರಣದಲ್ಲಿ ಕ್ರಮವಾಗಿ, ಐಂದ್ರಾ, ಚಿತ್ರಭಾನು, ವಾರುಣೀ, ದಂಡಿ, ಪ್ರಾಣರೂಪೀ, ಹಂಸ, ಸ್ವಾತ್ಮಶಕ್ತಿ, ಪಿತಾಮಹ, ಎಂಬ ಶಕ್ತಿಗಳನ್ನು ಆವಾಹಿಸಬೇಕು. ಇದು ಪ್ರಥಮಾರಣವು. ದ್ವಿತೀಯಾವರಣವನ್ನು ಹೇಳುವೆನು ಕೇಳು. ಈ ದ್ವಿತೀಯಾವರಣದಲ್ಲಿ ಕೇಶವ, ಭಗವಾನ್ರುದ್ರ, ಚಂದ್ರ, ಭಾಸ್ಕರ, ಮಹಾತ್ಮ, ಆತ್ಮ, ಅಂತರಾತ್ಮಾ, ಮಹೇಶ್ವರ, ಪರಮಾತ್ಮ, ಅಣುಜೀವ, ಪಿಂಗಲ, ಪುರುಷ, ಪಶು, ಭೋಕ್ತಾ, ಭೂತಪತಿ, ಭೀಮ,

ಕೇಶವೋ ಭಗವಾನ್ರುದ್ರ ಶ್ಚಂದ್ರಮಾ ಭಾಸ್ಕರ ಸ್ತಥಾ ।
ಮಹಾತ್ಮಾ ಚ ತಥಾ ಹ್ಯಾತ್ಮಾ ಹ್ಯಂತರಾತ್ಮಾ ಮಹೇಶ್ವರಃ ॥೧೦೦॥
ಪರಮಾತ್ಮಾ ಹ್ಯಣು ರ್ಜೀವಃ ಪಿಂಗಲಃ ಪುರುಷಃ ಪಶುಃ ।
ಭೋಕ್ತಾ ಭೂತಪತಿ ರ್ಭೀಮೋ ದ್ವಿತೀಯಾವರಣೇ ಸ್ಮೃತಾಃ ॥
ಕಥಿತ ಶ್ಚಾಣಿಮಾ ವ್ಯೂಹೋ ಲಘಿಮಾಽಽಖ್ಯಂ ವದಾಮಿ ತೇ ।
ಶ್ರೀಕಂಠೋಽಂತಶ್ಚ ಸೂಕ್ಷ್ಮಶ್ಚ ತ್ರಿಮೂರ್ತಿಃ ಶಶಕಸ್ತಥಾ ॥೧೦೨॥
ಅಮರೇಶಃ ಸ್ಥಿತೀಶಶ್ಚ ದಾರತಶ್ಚ ತಥಾಽಷ್ಟಮಃ ।
ಪ್ರಥಮಾ ವರಣಂ ಪ್ರೋಕ್ತಂ ದ್ವಿತೀಯಾ ವರಣಂ ಶೃಣು ॥೧೦೩॥
ಸ್ಥಾಣು ರ್ಹರಶ್ಚ ದಂಡೇಶೋ ಭೌಕ್ತೀಶಃ ಸುರಪುಂಗವಃ ।
ಸದ್ಯೋ ಜಾತೋಽನುಗ್ರಹೇಶಃ ಕ್ರೂರಸೇನಃ ಸುರೇಶ್ವರಃ ॥೧೦೪॥
ಕ್ರೋಧೀಶಶ್ಚ ತಥಾ ಚಂಡಃ ಪ್ರಚಂಡಃ ಶಿವ ಏವಚ ।
ಏಕ ರುದ್ರ ಸ್ತಥಾ ಕೂರ್ಮ ಶ್ಚೈಕನೇತ್ರ ಶ್ಚತುರ್ಮುಖಃ ॥೧೦೫॥
ದ್ವಿತೀಯಾ ವರಣೇ ರುದ್ರಾಃ ಷೋಡಶೈವ ಪ್ರಕೀರ್ತಿತಾಃ ।
ಕಥಿತೋ ಲಘಿಮಾ ವ್ಯೂಹೋ ಮಹಿಮಾಂ ಶೃಣು ಸುವ್ರತ ॥೧೦೬॥

---

ಇವುಗಳನ್ನು ಆವಾಹಿಸಬೇಕು. ಈ ರೀತಿಯಾಗಿ ಅಣಿಮಾವ್ಯೂಹವು ಹೇಳಲ್ಪಟ್ಟಿತು. ಲಘಿಮಾವ್ಯೂಹವನ್ನು ಹೇಳುವೆನು ಕೇಳು.

೧೦೨–೧೦೩. ಲಘಿಮಾವ್ಯೂಹದ ಪ್ರಥಮಾವರಣದಲ್ಲಿ ಶ್ರೀಕಂಠ, ಅಂತ, ಸೂಕ್ಷ್ಮ, ತ್ರಿಮೂರ್ತಿ, ಶಶಕ, ಅಮರೇಶ, ಸ್ಥಿರೇಶ, ದಾರತ, ಈ ಎಂಟು ದೇವತೆಗಳು. ಪ್ರಥಮಾವರಣವು, ಹೇಳಲ್ಪಟ್ಟಿತು. ದ್ವಿತೀಯಾವರಣವನ್ನು ಹೇಳುವೆನು ಕೇಳು.

೧೦೪–೧೦೬. ಲಘಿಮಾವ್ಯೂಹದ ದ್ವಿತೀಯಾವರಣದಲ್ಲಿ ಸ್ಥಾಣು, ಹರ, ದಂಡೇಶ, ಭೌಕ್ತೀಶ, ಸುರಪುಂಗವ, ಸದ್ಯೋಜಾತ, ಅನುಗ್ರಹೇಶ, ಕ್ರೂರಸೇನ, ಸುರೇಶ್ವರ, ಕ್ರೋಧೀಶ, ಚಂಡ, ಪ್ರಚಂಡ, ಶಿವ, ಏಕ ರುದ್ರ, ಕೂರ್ಮ, ಏಕನೇತ್ರ, ಚತುರ್ಮುಖ, ಈ ಹದಿನಾರು ರುದ್ರರೂ ಲಘಿಮಾವ್ಯೂಹದಲ್ಲಿ ಹೇಳಲ್ಪಟ್ಟಿದಾರೆ. ಇನ್ನು ಮಹಿಮಾವ್ಯೂಹವನ್ನು ಹೇಳುವೆನು ಕೇಳು.

ಅಜೇಶಃ ಕ್ಷೇಮ ರುದ್ರಶ್ಚ ಸೋಮೋಽಂ ಶೋ ಲಾಂಗಲೀ ತಥಾ ।
ದಂಡಾರು ಶ್ಚಾರ್ಧ ನಾರೀ ಚ ಏಕಾಂತ ಶ್ಚಾಂತ ಏವಚ ॥೧೦೭॥

ಪಾಲೀ ಭುಜಂಗ ನಾಮಾ ಚ ಪಿನಾಕೀ ಖಡ್ಗಿರೇವ ಚ ।
ಕಾಮ ಈಶ ಸ್ತಥಾ ಶ್ವೇತೋ ಭೃಗುಃ ಷೋಡಶವೈ ಸ್ಮೃತಾಃ ॥

ಕಥಿತೋ ಮಹಿಮಾ ವ್ಯೂಹಃ ಪ್ರಾಪ್ತಿವ್ಯೂಹಂ ಶೃಣುಷ್ವ ಮೇ ।
ಸಂವರ್ತೋ ಲಕುಲೀಶಶ್ಚ ವಾಡವೋ ಹಸ್ತಿರೇವ ಚ ॥೧೦೯॥

ಚಂಡಕ್ಷಯೋ ಗಣಪತಿಃ ಮಹಾತ್ಮಾ ಭೃಗುಜೋಽಷ್ಟಮಃ ।
ಪ್ರಥಮಾ ವರಣಂ ಪ್ರೋಕ್ತಂ ದ್ವಿತೀಯಾ ವರಣಂ ಶೃಣು ॥೧೧೦॥

ತ್ರಿವಿಕ್ರಮೋ ಮಹಾ ಜಿಹ್ವೋ ಋಕ್ಷಃ ಶ್ರೀ ಭದ್ರ ಏವಚ ।
ಮಹಾದೇವೋ ದಧೀಶಶ್ಚ ಕುಮಾರಶ್ಚ ಪರಾವರಃ ॥೧೧೧॥

ಮಹಾದಂಷ್ಟ್ರಃ ಕರಾಲಶ್ಚ ಸೂಚಕಶ್ಚ ಸುವರ್ಧನಃ ।
ಮಹಾಧ್ವಾಂಕ್ಷೋ ಮಹಾನಂದೋ ದಂಡೀ ಗೋಪಾಲಕಸ್ತಥಾ ॥

---

೧೦೭–೧೦೮. ಮಹಿಮಾವ್ಯೂಹದಲ್ಲಿ ಅಜೇಶ, ಕ್ಷೇಮ ರುದ್ರ, ಸೋಮ, ಅಂಶ, ಲಾಂಗಲೀ, ದಂಡಾರು, ಅರ್ಧನಾರೀ, ಏಕಾಂತ, ಅಂತ, ಪಾಲೀ, ಭುಜಂಗ, ಪಿನಾಕೀ, ಖಡ್ಗಿ, ಕಾಮಾ, ಈಶ, ಶ್ವೇತ, ಭೃಗು, ಎಂಬ ಹದಿನಾರು ದೇವತೆಗಳು. ಹೀಗೆ ಮಹಿಮಾವ್ಯೂಹವು ಹೇಳಲ್ಪಟ್ಟಿತು. ಪ್ರಾಪ್ತಿವ್ಯೂಹವನ್ನು ಹೇಳುವೆನು ಕೇಳು.

೧೦೯–೧೧೦. ಪ್ರಾಪ್ತಿವ್ಯೂಹದ ಪ್ರಥಮಾವರಣದಲ್ಲಿ, ಸಂವರ್ತ, ಲಕುಲೀಶ, ವಾಡವ, ಹಸ್ತಿ, ಚಂಡಕ್ಷಯ, ಗಣಪತಿ, ಮಹಾತ್ಮಾ, ಭೃಗುಜರೆಂಬ ಎಂಟು ದೇವತೆಗಳು, ಎಂದುಪ್ರಥಮಾವರಣವನ್ನು ಹೇಳಿರುವೆನು. ಇನ್ನು ದ್ವಿತೀಯಾವರಣವನ್ನು ಹೇಳುವೆನು ಕೇಳು.

೧೧೧–೧೧೨. ಪ್ರಾಪ್ತಿವ್ಯೂಹದ ದ್ವಿತೀಯಾವರಣದಲ್ಲಿ ತ್ರಿವಿಕ್ರಮ, ಮಹಾಜಿಹ್ವ, ಋಕ್ಷ, ಶ್ರೀಭದ್ರ, ಮಹಾದೇವ, ದಧೀಚ, ಕುಮಾರ, ಪರಾವರ, ಮಹಾದಂಷ್ಟ್ರ, ಕರಾಲಿ, ಸೂಚಕ, ಸುವರ್ಧನ, ಮಹಾ ಧ್ವಾಂಕ್ಷ, ಮಹಾನಂದ, ದಂಡೀ, ಗೋಪಾಲಕ, ಎಂಬುದಾಗಿ ದೇವ ತೆಗಳು. ಈ ರೀತಿಯಾಗಿ ಪ್ರಾಪ್ತಿವ್ಯೂಹವು ಹೇಳಲ್ಪಟ್ಟಿತು. ಓ ಒಳ್ಳೆಯ ವ್ರತಶಾಲಿಯೇ, ಇನ್ನು ಪ್ರಾಕಾಮ್ಯವ್ಯೂಹವನ್ನು ಹೇಳುವೆನು ಕೇಳು.

ಪ್ರಾಪ್ತಿವ್ಯೂಹಃ ಸಮಾಖ್ಯಾತಃ ಪ್ರಾಕಾಮ್ಯಂ ಶೃಣು ಸುವ್ರತ ।
ಪುಷ್ಪದಂತೋ ಮಹಾನಾಗೋ ವಿಪುಲಾನಂದ ಕಾರಕಃ ॥೧೧೩॥

ಶುಕ್ಲೋ ವಿಶಾಲಃ ಕಮಲೋ ಬಿಲ್ವಶ್ಚಾರುಣ ಏವಚ ।
ಪ್ರಥಮಾ ವರಣಂ ಪ್ರೋಕ್ತಂ ದ್ವಿತೀಯಾ ವರಣಂ ಶೃಣು ॥೧೧೪॥

ರತಿಪ್ರಿಯಃ ಸುರೇಶಾನ ಶ್ಚಿತ್ರಾಂಗಶ್ಚ ಸುದುರ್ಜಯಃ ।
ವಿನಾಯಕಃ ಕ್ಷೇತ್ರಪಾಲೋ ಮಹಾಮೋಹಶ್ಚ ಜಂಗಲಃ ॥೧೧೫॥

ವತ್ಸಪುತ್ರೋ ಮಹಾಪುತ್ರೋ ಗ್ರಾಮದೇಶಾಧಿಪಸ್ತಥಾ ।
ಸರ್ವಾವಸ್ಥಾಧಿಪೋ ದೇವೋ ಮೇಘನಾದಃ ಪ್ರಚಂಡಕಃ ॥೧೧೬॥

ಕಾಲದೂತಶ್ಚ ಕಥಿತೋ ದ್ವಿತೀಯಾ ವರಣಂ ಸ್ಮೃತಂ ।
ಪ್ರಾಕಾಮ್ಯಃ ಕಥಿತೋ ವ್ಯೂಹ ಐಶ್ವರ್ಯಂ ಕಥಯಾಮಿ ತೇ ॥೧೧೭॥

ಮಂಗಲಾ ಚರ್ಚಿಕಾ ಚೈವ ಯೋಗೇಶಾ ಹರದಾಯಿಕಾ ।
ಭಾಸುರಾ ಸುರಮಾತಾ ಚ ಸುಂದರೀ ಮಾತೃಕಾಽಷ್ಟಮೀ ॥೧೧೮॥

---

೧೧೩–೧೧೪. ಪ್ರಾಕಾಮ್ಯವ್ಯೂಹದ ಪ್ರಥಮಾವರಣದಲ್ಲಿ ಪುಷ್ಪದಂತ, ಮಹಾನಾಗ, ವಿಪುಲಾನಂದಕಾರಕ, ಶುಕ್ಲ, ವಿಶಾಲ, ಕಮಲ, ಬಿಲ್ವ, ಅರುಣ, ಎಂಬ ದೇವತೆಗಳು. ಈ ಪ್ರಕಾರವಾಗಿ ಪ್ರಥಮಾವರಣವನ್ನು ಹೇಳಿರುವೆನು. ಇನ್ನು ದ್ವಿತೀಯಾವರಣವನ್ನು ಹೇಳುತ್ತೇನೆ ಕೇಳು.

೧೧೫–೧೧೭. ಪ್ರಾಕಾಮ್ಯವ್ಯೂಹದ ದ್ವಿತೀಯಾವರಣದಲ್ಲಿ ರತಿಪ್ರಿಯ, ಸುರೇಶಾನ, ಚಿತ್ರಾಂಗ, ಸುದುರ್ಜಯ, ವಿನಾಯಕ, ಕ್ಷೇತ್ರಪಾಲ, ಮಹಾಮೋಹ, ಜಂಗಲ, ವತ್ಸಪುತ್ರ, ಮಹಾಪುತ್ರ, ಗ್ರಾಮದೇಶಾಧಿಪ, ಸರ್ವಾವಸ್ಥಾಧಿಪ, ಮೇಘನಾದ, ಪ್ರಚಂಡಕ, ಕಾಲದೂತ, ಇತ್ಯಾದಿ, ದೇವತೆಗಳು. ಈ ರೀತಿಯಾಗಿ ಪ್ರಾಕಾಮ್ಯವ್ಯೂಹವು ಹೇಳಲ್ಪಟ್ಟಿತು. ಇನ್ನು ಐಶ್ವರ್ಯವ್ಯೂಹವನ್ನು ಹೇಳುವೆನು ಕೇಳು.

೧೧೮. ಐಶ್ವರ್ಯವ್ಯೂಹದ ಪ್ರಥಮಾವರಣದಲ್ಲಿ ಮಂಗಲಾ, ಚರ್ಚಿಕಾ ಯೋಗೇಶಾ, ಹರದಾಯಿಕಾ, ಭಾಸುರಾ, ಸುರಮಾತಾ, ಸುಂದರೀ, ಮಾತೃಕಾ, ಎಂಬ ಎಂಟು ಶಕ್ತಿಗಳು. ದ್ವಿತೀಯಾವರಣವನ್ನು ಹೇಳುವೆನು ಕೇಳು.

ಪ್ರಥಮಾ ವರಣೇ ಪ್ರೋಕ್ತಾ ದ್ವಿತೀಯಾ ವರಣೇ ಶೃಣು ।
ಗಣಾಧಿಪಶ್ಚ ಮಂತ್ರಜ್ಞೋ ವರದೇವಃ ಷಡಾನನಃ ॥೧೧೯॥
ವಿದಗ್ಧಶ್ಚ ವಿಚಿತ್ರಶ್ಚ ಅಮೋಘೋ ಮೋಘ ಏವಚ ।
ಅಶ್ವೀ ರುದ್ರಶ್ಚ ಸೋಮೇಶ ಶ್ಚೋತ್ತ ಮೋ ದುಂಬರಸ್ತಥಾ ॥
ನಾರ ಸಿಂಹಶ್ಚ ವಿಜಯ ಸ್ತಥಾ ಇಂದ್ರಗುಹಃ ಪ್ರಭುಃ ।
ಅಪಾಂ ಪತಿಶ್ಚ ವಿಧಿನಾ ದ್ವಿತಿಯಾ ವರಣಂ ಸ್ಮೃತಂ ॥೧೨೧॥
ಐಶ್ವರ್ಯಃ ಕಥಿತೋ ವ್ಯೂಹೋ ವಶಿತ್ವಂ ಪುನ ರುಚ್ಯತೇ ।
ಗಗನೋ ಭವನಶ್ಚೈವ ವಿಜಯಾ ಹ್ಯಜಯ ಸ್ತಥಾ ॥೧೨೨॥
ಮಹಾ ಜಯಸ್ತಥಾಂಗಾರೋ ವ್ಯಂಗಾರಶ್ಚ ಮಹಾಯಶಾಃ ।
ಪ್ರಥಮಾವರಣೇ ಪ್ರೋಕ್ತಾ ದ್ವಿತೀಯಾ ವರಣೇ ಶೃಣು ॥೧೨೩॥
ಸುಂದರಶ್ಚ ಪ್ರಚಂಡೇಶೋ ಮಹಾವರ್ಣೋ ಮಹಾಸುರಃ । •
ಮಹಾರೋಮಾ ಮಹಾಗರ್ಭಃ ಪ್ರಥಮಃ ಕನಕಸ್ತಥಾ ॥೧೨೪॥

---

೧೧೯–೧೨೧. ಐಶ್ವರ್ಯವ್ಯೂಹದ ದ್ವಿತೀಯಾವರಣದಲ್ಲಿ ಗಣಾಧಿಪ, ಮಂತ್ರಜ್ಞ, ವರದೇವ, ಷಡಾನನ, ವಿದಗ್ಧ, ವಿಚಿತ್ರ, ಅಮೋಘ, ಮೋಘ, ಅಶ್ವೀ, ರುದ್ರ, ಸೋಮ, ಉತ್ತಮ, ಉದುಂಬರ, ನಾರಸಿಂಹ, ವಿಜಯ, ಇಂದ್ರಗುಹ, ಪ್ರಭು, ಅಪಾಂಪತಿ, ಎಂಬ ದೇವತೆಗಳು, ಈ ರೀತಿಯಾಗಿ ದ್ವಿತೀಯಾವರಣವು ಶಾಸ್ತ್ರೋಕ್ತವಾದ ವಿಧಿಯಿಂದ ಹೇಳಲ್ಪಟ್ಟಿದೆ. ಹೀಗೆ ಐಶ್ವರ್ಯವ್ಯೂಹವನ್ನು ಹೇಳಿರುವೆನು. ವಶಿತ್ವವ್ಯೂಹ ವನ್ನು ಹೇಳುತ್ತೇನೆ ಕೇಳು.

೧೨೨–೧೨೩. ವಶಿತ್ವವ್ಯೂಹದ ಪ್ರಥಮಾವರಣದಲ್ಲಿ ಗಗನ, ಭವನ, ವಿಜಯ, ಅಜಯ, ಮಹಾಜಯ, ಅಂಗಾರ, ವ್ಯಂಗಾರ, ಮಹಾ ಯಶಸ್ಸು, ಈ ಎಂಟು ದೇವತೆಗಳು,

೧೨೪–೧೨೫. ವಶಿತ್ವವ್ಯೂಹದ ದ್ವಿತೀಯಾವರಣವನ್ನು ಹೇಳುವೆನು ಕೇಳು. ಇದರಲ್ಲಿ ಸುಂದರ, ಪ್ರಚಂಡೇಶ, ಮಹಾವರ್ಣ, ಮಹಾಸುರ ಮಹಾರೋಮಾ, ಮಹಾಗರ್ಭ, ಪ್ರಥಮ, ಕನಕ, ಖರಜ, ಗರುಡ,

ಖರಜೋ ಗರುಡಶ್ಚೈವ ಮೇಘನಾದೋಽಥ ಗರ್ಜಕಃ ।
ಗಜಶ್ಚ ಚ್ಛೇದಕೋ ಬಾಹು ಸ್ತ್ರಿಶಿಖೋ ಮಾರಿರೇವಚ ॥೧೨೫॥
ವಶಿತ್ವಂ ಕಥಿತೋ ವ್ಯೂಹಃ ಶೃಣು ಕಾಮಾವ ಸಾಯಿಕಂ ।
ವಿನಾಯಕೋ ವಿಕಟಶ್ಚೈವ ವಸಂತೋಽಭಯ ಏವಚ ॥೧೨೬॥
ವಿದ್ಯುನ್ಮಹಾ ಬಲಶ್ಚೈವ ಕಮಲೋ ದಮನ ಸ್ತಥಾ ।
ಪ್ರಥಮಾ ವರಣಂ ಪ್ರೋಕ್ತಂ ದ್ವಿತೀಯಾ ವರಣಂ ಶೃಣು ॥೧೨೭॥
ಧರ್ಮಶ್ಚಾತಿ ಬಲಃ ಸರ್ಪೋ ಮಹಾಕಾಯೋ ಮಹಾ ಹನುಃ ।
ಸಬಲಶ್ಚೈವ ಭಸ್ಮಾಂಗೀ ದುರ್ಜಯೋ ದುರತಿಕ್ರಮಃ ॥೧೨೮॥
ವೇತಾಲೋ ಕೌರವಶ್ಚೈವ ದುರ್ಧರೋ ಭೋಗ ಏವಚ ।
ವಜ್ರಃ ಕಾಲಾಗ್ನಿ ರುದ್ರಶ್ಚ ಸದ್ಯೋನಾದೋ ಮಹಾಗುಹಃ ॥೧೨೯॥
ದ್ವಿತೀಯಾ ವರಣಂ ಪ್ರೋಕ್ತಂ ವ್ಯೂಹ ಶ್ಚೈವಾವ ಸಾಯಿಕಃ ।
ಕಥಿತಃ ಷೋಡಶೋ ವ್ಯೂಹೋ ದ್ವಿತೀಯಾ ವರಣಂ ಶೃಣು ॥೧೩೦॥

---

ಮೇಘನಾದ, ಗರ್ಜಕ, ಗಜ, ಛೇದಕ, ಬಾಹು, ತ್ರಿಶಿಖ, ಮಾರಿಗಳೆಂಬ ದೇವತೆಗಳು. ಈ ರೀತಿಯಾಗಿ ವಶಿತ್ವವ್ಯೂಹವು ಹೇಳಲ್ಪಟ್ಟಿತು. ಕಾಮಾವಸಾಯಿಕವ್ಯೂಹವನ್ನು ಹೇಳುತ್ತೇನೆ ಕೇಳು.

೧೨೬-೧೨೭. ಕಾಮಾವಸಾಯಿಕವ್ಯೂಹದ ಪ್ರಥಮಾವರಣದಲ್ಲಿ ವಿನಾಯಕ, ವಿಕಟ, ವಸಂತ, ಅಭಯ, ವಿದ್ಯುತ್, ಮಹಾಬಲ, ಕಮಲ, ದಮನ, ಎಂಬ ದೇವತೆಗಳು. ಈ ಪ್ರಕಾರವಾಗಿ ಪ್ರಥಮಾವರಣವನ್ನು ಹೇಳಿರುವೆನು. ದ್ವಿತೀಯಾವರಣವನ್ನು ಹೇಳುತ್ತೇನೆ ಕೇಳು.

೧೨೮-೧೩೦. ಕಾಮಾವಸಾಯಿಕ ವ್ಯೂಹದ ದ್ವಿತೀಯಾವರಣದಲ್ಲಿ ಧರ್ಮ, ಅತಿಬಲ, ಸರ್ಪ, ಮಹಾಕಾಯ, ಮಹಾಹನು, ಸಬಲ, ಭಸ್ಮಾಂಗೀ, ದುರ್ಜಯ, ದುರತಿಕ್ರಮ, ವೇತಾಲ, ಕೌರವ, ದುರ್ಧರ, ಭೋಗ, ವಜ್ರ, ಕಾಲಾಗ್ನಿರುದ್ರ, ಸದ್ಯೋನಾದ, ಮಹಾಗುಹ, ಎಂಬೀ ದೇವತೆಗಳು. ಈ ರೀತಿಯಾಗಿ ದ್ವಿತೀಯಾವರಣವು ಹೇಳಲ್ಪಟ್ಟಿತು. ಕಾಮಾವಸಾಯಿತ್ವವ್ಯೂಹವು ಮುಗಿಯಿತು. ಷೋಡಶವ್ಯೂಹವನ್ನೂ ಸಹ, ಹೇಳಿರುವೆನು. ಇನ್ನು ದ್ವಿತೀಯಾವರಣವನ್ನು ಹೇಳುವೆನು ಕೇಳುವವನಾಗು.

ದ್ವಿತೀಯಾ ವರಣೇ ಚೈವ ದಕ್ಷವ್ಯೂಹೇ ಚ ಶಕ್ತಯಃ ।
ಪ್ರಥಮಾ ವರಣೇ ಚಾಷ್ಟೌ ಬಾಹ್ಯೇ ಷೋಡಶ ಏವಚ ॥೧೩೧॥

ಮನೋಹರಾ ಮಹಾನಾದಾ ಚಿತ್ರಾ ಚಿತ್ರರಥಾ ತಥಾ ।
ರೋಹಿಣೀ ಚೈವ ಚಿತ್ರಾಂಗೀ ಚಿತ್ರರೇಖಾ ವಿಚಿತ್ರಿಕಾ ॥೧೩೨॥

ಪ್ರಥಮಾ ವರಣೇ ಪ್ರೋಕ್ತಾ ದ್ವಿತೀಯಾ ವರಣಂ ಶೃಣು ।
ಚಿತ್ರಾ ವಿಚಿತ್ರ ರೂಪಾ ಚ ಶುಭದಾ ಕಾಮದಾ ಶುಭಾ ॥೧೩೩॥

ಕ್ರೂರಾ ಚ ಪಿಂಗಲಾ ದೇವೀ ಖಡ್ಗಿಕಾ ಲಂಬಿಕಾ ಸತೀ ।
ದಂಷ್ಟ್ರಾಲೀ ರಾಕ್ಷಸೀ ಧ್ವಂಸೀ ಲೋಲುಪಾ ಲೋಹಿತಾ ಮುಖೀ ॥

ದ್ವಿತೀಯಾ ವರಣೇ ಪ್ರೋಕ್ತಾಃ ಷೋಡಶೈವ ಸಮಾಸತಃ ।
ದಕ್ಷ ವ್ಯೂಹಃ ಸಮಾಖ್ಯಾತೋ ದಾಕ್ಷವ್ಯೂಹಂ ಶೃಣುಷ್ವ ಮೇ ॥

ಸರ್ವಾ ಸತೀ ವಿಶ್ವರೂಪಾ ಲಂಪಟಾ ಚಾ ಮಿಷಪ್ರಿಯಾ ।
ದೀರ್ಘ ದಂಷ್ಟ್ರಾ ಚ ವಜ್ರಾ ಚ ಲಂಬೋಷ್ಠೀ ಪ್ರಾಣ ಹಾರಿಣೀ ॥

---

೧೩೧. ದ್ವಿತೀಯಾವರಣದ ದಕ್ಷವ್ಯೂಹದಲ್ಲಿ ಶಕ್ತಿಗಳು ಹೇಳಲ್ಪಟ್ಟವು. ಪ್ರಥಮಾವರಣದಲ್ಲಿ ಎಂಟು ಶಕ್ತಿಗಳೂ, ಬಾಹ್ಯಾವರಣದಲ್ಲಿ ಹದಿನಾರುಶಕ್ತಿಗಳೂ, ಪ್ರಸಿದ್ಧವಾಗಿವೆ.

೧೩೨. ಪ್ರಥಮಾವರಣದಲ್ಲಿ ಮನೋಹರಾ, ಮಹಾನಾದಾ, ಚಿತ್ರಾ, ಚಿತ್ರರಥಾ, ರೋಹಿಣೀ, ಚಿತ್ರಾಂಗೀ ಚಿತ್ರರೇಖಾ, ವಿಚಿತ್ರಕಾ, ಎಂಬ ಎಂಟು ಶಕ್ತಿಗಳು. ಪ್ರಥಮಾವರಣವನ್ನು ಹೇಳಿರುತ್ತೇನೆ. ದ್ವಿತೀಯಾ ವರಣವನ್ನು ಹೇಳುತ್ತೇನೆ ಕೇಳು.

೧೩೩–೧೩೫. ದ್ವಿತೀಯಾವರಣದಲ್ಲಿ ಚಿತ್ರಾ, ವಿಚಿತ್ರರೂಪಾ, ಶುಭದಾ, ಕಾಮದಾ, ಶುಭಾ, ಕ್ರೂರಾ, ಪಿಂಗಲಾ, ದೇವೀ, ಖಡ್ಗಿಕಾ, ಲಂಬಿಕಾ, ಸತೀ, ದಂಷ್ಟ್ರಾಲೀ, ರಾಕ್ಷಸೀ ಧ್ವಂಸಿ, ಲೋಲುಪಾ, ಲೋಹಿತಾಮುಖೀ, ಎಂದು ಹದಿನಾರು ಶಕ್ತಿಗಳು. ದಕ್ಷವ್ಯೂಹವನ್ನೂ ಹೇಳಿರುವೆನು. ದಾಕ್ಷವ್ಯೂಹವನ್ನು ಹೇಳುವೆನು ಕೇಳು.

೧೩೬–೧೩೯. ದಾಕ್ಷವ್ಯೂಹದ ಪ್ರಥಮಾವರಣದಲ್ಲಿ ಸರ್ವಾ, ಸತೀ, ವಿಶ್ವರೂಪಾ, ಲಂಪಟಾ, ಆಮಿಷಪ್ರಿಯಾ, ದೀರ್ಘದಂಷ್ಟ್ರಾ, ವಜ್ರಾ,

ಪ್ರಥಮಾ ವರಣಂ ಪ್ರೋಕ್ತಂ ದ್ವಿತೀಯಾ ವರಣಂ ಶೃಣು ।
ಗಜಕರ್ಣಾಶ್ಚ ಕರ್ಣಾ ಚ ಮಹಾಕಾಲೀ ಸುಭೀಷಣಾ ॥೧೩೭॥

ವಾತ ವೇಗ ರವಾ ಘೋರಾ ಘನಾ ಘನ ರವಾ ತಥಾ ।
ವರ ಘೋಷಾ ಮಹಾ ವರ್ಣಾ ಸು ಘಂಟಾ ಘಂಟಿಕಾ ತಥಾ ॥೧೩೮॥

ಘಂಟೇಶ್ವರೀ ಮಹಾಘೋರಾ ಘೋರಾ ಚೈವಾತಿ ಘೋರಿಕಾ ।
ದ್ವಿತೀಯಾ ವರಣೇ ಚೈವ ಷೋಡಶೈವ ಪ್ರಕೀರ್ತಿತಾಃ ॥೧೩೯॥

ದಾಕ್ಷವ್ಯೂಹಃ ಸಮಾಖ್ಯಾತಃ ಚಂಡವ್ಯೂಹಂ ಶೃಣುಷ್ವ ಮೇ ।
ಅತಿ ಘಂಟಾ ಚಾತಿ ಘೋರಾ ಕರಾಳಾ ಕರಭಾ ತಥಾ ॥೧೪೦॥

ವಿಭೂತಿ ರ್ಭೋಗದಾ ಕಾಂತಿಃ ಶಂಖಿನೀ ಚಾಷ್ಟಮೀ ಸ್ಮೃತಾ ।
ಪ್ರಥಮಾ ವರಣೇ ಪ್ರೋಕ್ತಾ ದ್ವಿತೀಯಾ ವರಣೇ ಶೃಣು ॥೧೪೧॥

ಪತ್ರಿಣೀ ಚೈವ ಗಾಂಧಾರೀ ಯೋಗಮಾತಾ ಸುಪೀವರಾ ।
ರಕ್ತಾ ಮಾಲಾಂಶುಕಾ ವೀರಾ ಸಂಹಾರೀ ಮಾಂಸಹಾರಿಣೀ ॥೧೪೨॥

---

ಲಂಬೋಷ್ಠೀ, ಪ್ರಾಣಹಾರಿಣೀ, ಎಂಬ ಶಕ್ತಿಗಳು. ಈ ರೀತಿಯಾಗಿ ಪ್ರಥಮಾವರಣವು ಹೇಳಲ್ಪಟ್ಟಿತು. ದ್ವಿತೀಯಾವರಣವನ್ನು ಹೇಳುವೆನು ಕೇಳು. ದ್ವಿತೀಯಾವರಣದಲ್ಲಿ ಗಜಕರ್ಣಾ, ಮಹಾಕಾಲೀ, ಸುಭೀಷಣಾ, ವಾತವೇಗರವಾ, ಘೋರಾ, ಘನಾಘನರವಾ, ವರಘೋಷಾ, ಮಹಾವರ್ಣಾ, ಸುಘಂಟಾ, ಘಂಟಿಕಾ, ಘಂಟೇಶ್ವರೀ, ಮಹಾಘೋರಾ, ಘೋರಾ, ಅತಿಘೋರಿಕಾ, ಎಂದು ಹದಿನಾರು ಶಕ್ತಿಗಳು. ಹೀಗೆ ದಾಕ್ಷವ್ಯೂಹವು ಹೇಳಲ್ಪಟ್ಟಿತು. ಚಂಡವ್ಯೂಹವನ್ನು ಹೇಳುತ್ತೇನೆ ಕೇಳು.

೧೪೦–೧೪೧. ಚಂಡವ್ಯೂಹದ ಪ್ರಥಮಾವರಣದಲ್ಲಿ ಅತಿಘಂಟಾ, ಅತಿಘೋರಾ, ಕರಾಳಾ, ಕರಭಾ, ವಿಭೂತಿ, ಭೋಗದಾ, ಕಾಂತಿ, ಶಂಖಿನೀ, ಎಂದು ಎಂಟು ಶಕ್ತಿಗಳು. ದ್ವಿತೀಯಾವರಣವನ್ನು ಹೇಳುವೆನು ಕೇಳು.

೧೪೨–೧೪೩. ಚಂಡಾವ್ಯೂಹದ ದ್ವಿತೀಯಾವರಣದಲ್ಲಿ ಪತ್ರಿಣೀ, ಗಾಂಧಾರೀ, ಯೋಗಮಾತಾ, ಸುಪೀವರಾ, ರಕ್ತಾ, ಮಾಲಾಂಶುಕಾ,

ಫಲಹಾರೀ ಜೀವಹಾರೀ ಸ್ವೇಚ್ಛಾಹಾರೀ ಚ ತುಂಡಿಕಾ ।
ರೇವತೀ ರಂಗಿಣೀ ಸಂಗಾ ದ್ವಿತೀಯೋ ಷೋಡಶೈವ ತು ॥೧೪೩॥

ಚಂಡವ್ಯೂಹಃ ಸಮಾಖ್ಯಾತ ಶ್ಚಂಡಾವ್ಯೂಹ ಸ್ತಥೋಚ್ಯತೇ ।
ಚಂಡೀ ಚಂಡಮುಖೀ ಚಂಡಾ ಚಂಡವೇಗಾ ಮಹಾರವಾ ॥೧೪೪॥

ಭ್ರುಕುಟೀ ಚಂಡ ಭೂಶ್ಚೈವ ಚಂಡರೂಪಾಽಷ್ಟಮೀ ಸ್ಮೃತಾ ।
ಪ್ರಥಮಾ ವರಣಂ ಪ್ರೋಕ್ತಂ ದ್ವಿತೀಯಾ ವರಣಂ ಶೃಣು ॥೧೪೫॥

ಚಂದ್ರಘ್ರಾಣಾ ಬಲಾ ಚೈವ ಬಲಜಿಹ್ವಾ ಬಲೇಶ್ವರೀ ।
ಬಲವೇಗಾ ಮಹಾಕಾಯಾ ಮಹಾ ಕೋಪಾ ಚ ವಿದ್ಯುತಾ ॥೧೪೬॥

ಕಂಕಾಲೀ ಕಲಶೀ ಚೈವ ವಿದ್ಯುತಾ ಚಂಡ ಘೋಷಿಕಾ ।
ಮಹಾ ಘೋಷಾ ಮಹಾರಾವಾ ಚಂಡಾ ಭಾಽನಂಗ ಚಂಡಿಕಾ ॥

---

ವೀರಾ, ಸಂಹಾರೀ, ಮಾಂಸಹಾರಿಣೀ, ಫಲಹಾರೀ, ಜೀವಹಾರೀ, ಸ್ವೇಚ್ಛಾಹಾರೀ, ತುಂಡಿಕಾ, ರೇವತೀ, ರಂಗಿಣೀ, ಸಂಗಾ, ಎಂಬುದಾಗಿ ಹದಿನಾರು ಶಕ್ತಿಗಳು. ಈ ರೀತಿಯಾಗಿ ಚಂಡವ್ಯೂಹವು ಹೇಳಲ್ಪಟ್ಟದೆ. ಇನ್ನು ಚಂಡಾವ್ಯೂಹವನ್ನು ಹೇಳುವೆನು ಕೇಳು.

೧೪೪–೧೪೫. ಚಂಡಾವ್ಯೂಹದ ಪ್ರಥಮಾವರಣದಲ್ಲಿ ಚಂಡೀ, ಚಂಡಮುಖೀ, ಚಂಡಾ, ಚಂಡವೇಗಾ, ಮಹಾರವಾ, ಭ್ರುಕುಟೀ, ಚಂಡಭೂಃ, ಚಂಡರೂಪಾ, ಎಂದು ಎಂಟು ಶಕ್ತಿಗಳು. ಪ್ರಥಮಾವರಣದಲ್ಲಿ ಈ ರೀತಿಯಾಗಿ ದೇವತೆಗಳು ಹೇಳಲ್ಪಟ್ಟವೆ. ಇನ್ನು ದ್ವಿತೀಯಾವರಣವನ್ನು ಹೇಳುತ್ತೇನೆ ಕೇಳು.

೧೪೬–೧೪೭. ಚಂಡಾವ್ಯೂಹದ ದ್ವಿತೀಯಾವರಣದಲ್ಲಿ ಚಂದ್ರಘ್ರಾಣಾ, ಬಲಾ, ಬಲಜಿಹ್ವಾ, ಬಲೇಶ್ವರೀ, ಬಲವೇಗಾ, ಮಹಾಕಾಯಾ ಮಹಾಕೋಪಾ, ವಿದ್ಯುತಾ, ಕಂಕಾಲೀ, ಕಲಶೀ, ವಿದ್ಯುತಾ, ಚಂಡಘೋಷಿಕಾ, ಮಹಾಘೋಷಾ, ಮಹಾರಾವಾ, ಚಂಡಾ, ಅನಂಗ, ಚಂಡಿಕಾ, ಎಂದು ಶಕ್ತಿಗಳು. ಈ ರೀತಿಯಾಗಿ ಚಂಡಾವ್ಯೂಹವು ಹೇಳಲ್ಪಟ್ಟಿತು. ಇನ್ನು ಹರವ್ಯೂಹವನ್ನೂ ಹೇಳುವೆನು ಕೇಳು.

ಚಂಡಾಯಾಃ ಕಥಿತೋ ವ್ಯೂಹೋ ಹರವ್ಯೂಹಂ ಶೃಣುಷ್ವ ಮೇ ।
ಚಂಡಾಕ್ಷೀ ಕಾಮದಾ ದೇವೀ ಸೂಕರೀ ಕುಕ್ಕುಟಾ ನನಾ ॥೧೪೮॥
ಗಾಂಧಾರೀ ದುಂದುಭೀ ದುರ್ಗಾ ಸೌಮಿತ್ರಾ ಚಾಷ್ಟಮೀ ಸ್ಮೃತಾ ।
ಪ್ರಥಮಾವರಣಂ ಪ್ರೋಕ್ತಂ ದ್ವಿತೀಯಾ ವರಣಂ ಶೃಣು ॥೧೪೯॥
ಮೃತೋದ್ಭವಾ ಮಹಾ ಲಕ್ಷ್ಮೀ ರ್ವರ್ಣದಾ ಜೀವರಕ್ಷಿಣೀ ।
ಹರಿಣೀ ಕ್ಷೀಣ ಜೀವಾ ಚ ದಂಡವಕ್ತ್ರಾ ಚತುರ್ಭುಜಾ ॥೧೫೦॥
ವ್ಯೋಮ ಚಾರೀ ವ್ಯೋಮರೂಪಾ ವ್ಯೋಮವ್ಯಾಪೀ ಶುಭೋದಯಾ
ಗೃಹಚಾರೀ ಸುಚಾರೀ ಚ ವಿಷಾಹಾರೀ ವಿಷಾರ್ತಿಹಾ ॥೧೫೧॥
ಹರವ್ಯೂಹಃ ಸಮಾಖ್ಯಾತೋ ಹರಾಯಾ ವ್ಯೂಹ ಉಚ್ಯತೇ ।
ಜಂಭಾ ಚ್ಯುತಾ ಚ ಕಂಕಾರೀ ದೇವಿಕಾ ದುರ್ಧರಾ ವಹಾ ॥೧೫೨॥

---

೧೪೮–೧೪೯. ಹರವ್ಯೂಹದ ಪ್ರಥಮಾವರಣದಲ್ಲಿ ಚಂಡಾಕ್ಷೀ, ಕಾಮದಾ ದೇವೀ, ಸೂಕರೀ, ಕುಕ್ಕುಟಾನನಾ, ಗಾಂಧಾರೀ, ದುಂದುಭೀ, ದುರ್ಗಾ, ಸೌಮಿತ್ರೀ, ಎಂಬ ಎಂಟು ಶಕ್ತಿಗಳು, ಈ ರೀತಿಯಾಗಿ ಪ್ರಥಮಾವರಣವು ಹೇಳಲ್ಪಟ್ಟಿತು. ದ್ವಿತೀಯಾವರಣವನ್ನು ಹೇಳುವೆನು ಕೇಳು.

೧೫೦–೧೫೧. ಹರವ್ಯೂಹದ ದ್ವಿತೀಯಾವರಣದಲ್ಲಿ ಮೃತೋದ್ಭವಾ, ಮಹಾಲಕ್ಷ್ಮೀ, ವರ್ಣದಾ, ಜೀವರಕ್ಷಿಣೀ, ಹರಿಣೀ, ಕ್ಷೀಣಜೀವಾ, ದಂಡವಕ್ತ್ರಾ, ಚತುರ್ಭುಜಾ, ವ್ಯೋಮಚಾರೀ, ವ್ಯೋಮರೂಪಾ, ವ್ಯೋಮವ್ಯಾಪೀ, ಶುಭೋದಯಾ, ಗೃಹಚಾರೀ, ಸುಚಾರೀ, ವಿಷಾಹಾರೀ, ವಿಷಾರ್ತಿಹಾ, ಎಂಬ ಶಕ್ತಿಗಳು. ಈ ರೀತಿ ಹರವ್ಯೂಹವು ಹೇಳಲ್ಪಟ್ಟಿತು. ಇನ್ನು ಹರಾವ್ಯೂಹವನ್ನು ಹೇಳುವೆನು ಕೇಳು.

೧೫೨. ಹರಾವ್ಯೂಹದ ಪ್ರಥಮಾವರಣದಲ್ಲಿ, ಜಂಭಾಚ್ಯುತಾ, ಕಂಕಾರೀ, ದೇವಿಕಾ, ದುರ್ಧರಾವಹಾ, ಚಂಡಿಕಾ, ಚಪಲಾ, ಎಂದು ಶಕ್ತಿಗಳು.

ಚಂಡಿಕಾ ಚಪಲಾ ಚೇತಿ ಪ್ರಥಮಾ ವರಣೇ ಸ್ಮೃತಾಃ ।
ಚಂಡಿಕಾ ಚಾಮರೀ ಚೈವ ಚಂಡಿಕಾ ಚ ಶುಭಾನನಾ ॥೧೫೩॥
ಪಿಂಡಿಕಾ ಮುಂಡಿಕಾ ಮುಂಡಾ ಶಾಕಿನೀ ಶಾಂಕರೀ ತಥಾ ।
ಕರ್ತರೀ ಭರ್ತರೀ ಚೈವ ಭಾಗಿನೀ ಯಜ್ಞದಾಯಿನೀ ॥೧೫೪॥
ಯಮದಂಷ್ಟ್ರಾ ಮಹಾದಂಷ್ಟ್ರಾ ಕರಾಳಾ ಚೇತಿ ಶಕ್ತಯಃ ।
ಹರಾಯಾಃ ಕಥಿತೋ ವ್ಯೂಹಃ ಶೌಂಡವ್ಯೂಹಂ ಶೃಣುಷ್ವ ಮೇ ॥
ವಿಕರಾಲೀ ಕರಾಲೀ ಚ ಕಾಲಜಂಘಾ ಯಶಸ್ವಿನೀ ।
ವೇಗಾ ವೇಗವತೀ ಯಜ್ಞಾ ವೇದಾಂಗಾ ಚಾಷ್ಟಮೀ ಸ್ಮೃತಾ ॥
ಪ್ರಥಮಾ ವರಣಂ ಪ್ರೋಕ್ತಂ ದ್ವಿತೀಯಾ ವರಣಂ ಶೃಣು ।
ವಜ್ರಾ ಶಂಖಾತಿ ಶಂಖಾ ವಾ ಬಲಾ ಚೈವಾ ಬಲಾ ತಥಾ ॥೧೫೭॥
ಅಂಜನೀ ಮೋಹಿನೀ ಮಾಯಾ ವಿಕಟಾಂಗೀ ನಲೀ ತಥಾ ।
ಗಂಡಕೀ ದಂಡಕೀ ಘೋಣಾ ಶೋಣಾ ಸತ್ಯವತೀ ತಥಾ ॥೧೫೮॥

---

೧೫೩–೧೫೫. ಶಿವಾವ್ಯೂಹದ ದ್ವಿತೀಯಾವರಣದಲ್ಲಿ ಚಂಡಿಕಾ, ಚಾಮರೀ, ಚಂಡಿಕಾ, ಶುಭಾನನಾ, ಪಿಂಡಿಕಾ, ಮುಂಡಿನೀ, ಮುಂಡಾ, ಶಾಕಿನೀ, ಶಾಂಕರೀ, ಕರ್ತರೀ, ಭಾಗಿನೀ, ಯಜ್ಞದಾಯಿನೀ, ಯಮದಂಷ್ಟ್ರಾ, ಮಹಾದಂಷ್ಟ್ರೀ, ಕರಾಳೀ, ಎಂಬ ಶಕ್ತಿಗಳು ಈ ರೀತಿಯಾಗಿ ಹರಾವ್ಯೂಹವು ಹೇಳಲ್ಪಟ್ಟಿತು. ಇನ್ನು ಶೌಂಡವ್ಯೂಹವನ್ನು ಹೇಳುವೆನು ಕೇಳು.

೧೫೬. ಶೌಂಡವ್ಯೂಹದ ಪ್ರಥಮಾವರಣದಲ್ಲಿ ವಿಕರಾಳೀ, ಕರಾಳೀ, ಕಾಲಜಂಘಾ, ಯಶಸ್ವಿನೀ, ವೇಗಾ, ವೇಗವತೀ, ಯಜ್ಞಾ, ವೇಗಾಂಗಾ, ಎಂಬ ಎಂಟು ಶಕ್ತಿಗಳು. ಈ ರೀತಿಯಾಗಿ ಪ್ರಥಮಾವರಣವು ಹೇಳಲ್ಪಟ್ಟಿತು. ದ್ವಿತೀಯಾವರಣವನ್ನು ಹೇಳುವೆನು ಕೇಳು.

೧೫೭–೧೫೯. ಶೌಂಡವ್ಯೂಹದ ದ್ವಿತೀಯಾವರಣದಲ್ಲಿ ವಜ್ರಾ, ಶಂಖಾ, ಅತಿಶಂಖಾ, ಬಲಾ, ಅಬಲಾ, ಅಂಜನೀ, ಮೋಹಿನೀ, ಮಾಯಾ, ವಿಕಟಾಂಗೀ, ನಲೀ, ಗಂಡಕೀ, ದಂಡಕೀ, ಘೋಣಾ, ಶೋಣಾ, ಸತ್ಯ

ಕಲ್ಲೋಲಾ ಚೇತಿ ಕ್ರಮಶಃ ಷೋಡಶೈವ ಯಥಾವಿಧಿ ।
ಶೌಂಡವ್ಯೂಹಃ ಸಮಾಖ್ಯಾತಃ ಶೌಂಡಾಯಾ ವ್ಯೂಹ ಉಚ್ಯತೇ ॥

ದಂತುರಾ ರೌದ್ರ ಭಾಗಾ ಚ ಅಮೃತಾ ಸಕುಲಾ ಶುಭಾ ।
ಚಲ ಜಿಹ್ವಾಽಽರ್ಯ ನೇತ್ರಾ ಚ ರೂಪಿಣೀ ದಾರಿಕಾ ತಥಾ ॥೧೬೦॥

ಪ್ರಥಮಾ ವರಣಂ ಪ್ರೋಕ್ತಂ ದ್ವಿತೀಯಾ ವರಣಂ ಶೃಣು ।
ಖಾದಿರಾ ರೂಪ ನಾಮಾ ಚ ಸಂಹಾರೀ ಚ ಕ್ಷಮಾಂತಕಾ ॥೧೬೧॥

ಕಂಡಿನೀ ಪೇಷಿಣೀ ಚೈವ ಮಹಾತ್ರಾಸಾ ಕೃತಾಂತಿಕಾ ।
ದಂಡಿನೀ ಕಿಂಕರೀ ಬಿಂಬಾ ವರ್ಣಿನೀ ಚಾಮಲಾಂಗಿನೀ॥ ೧೬೨॥

ದ್ರವಿಣೀ ದ್ರಾವಿಣೀ ಚೈವ ಶಕ್ತಯಃ ಷೋಡಶೈವ ತು ।
ಕಥಿತೋ ಹಿ ಮನೋ ರಮ್ಯಃ ಶೌಂಡಾಯಾ ವ್ಯೂಹ ಉತ್ತಮಃ ॥

---

ವತೀ, ಕಲ್ಲೋಲಾ, ಎಂದು ಕ್ರಮವಾಗಿ ಹದಿನಾರು ಶಕ್ತಿಗಳು, ಈ ಪ್ರಕಾರವಾಗಿ ಶೌಂಡವ್ಯೂಹವು ಹೇಳಲ್ಪಟ್ಟಿತು. ಇನ್ನು ಶೌಂಡಾ ವ್ಯೂಹವನ್ನು ಹೇಳುವೆನು ಕೇಳು.

೧೬೦. ಶೌಂಡಾವ್ಯೂಹದ ಪ್ರಥಮಾವರಣದಲ್ಲಿ ದಂತುರಾ, ರೌದ್ರ ಭಾಗಾ, ಅಮೃತಾ, ಸಕುಲಾ, ಶುಭಾ, ಚಲಜಿಹ್ವಾ, ಆರ್ಯನೇತ್ರಾ, ರೂಪಿಣೀ, ದಾರಿಕಾ, ಎಂದು ಶಕ್ತಿಗಳು. ಪ್ರಥಮಾವರಣವು ಹೇಳಲ್ಪಟ್ಟಿತು. ದ್ವಿತೀಯಾವರಣವನ್ನು ಹೇಳುವೆನು ಕೇಳು.

೧೬೧–೧೬೩. ಶೌಂಡಾವ್ಯೂಹದ ದ್ವಿತೀಯಾವರಣದಲ್ಲಿ ಖಾದಿರಾ, ರೂಪನಾಮಾ, ಸಂಹಾರೀ, ಕ್ಷಮಾಂತಕಾ, ದಂಡಿನೀ, ಪೇಷಿಣೀ, ಮಹಾತ್ರಾಸಾ, ಕೃತಾಂತಿಕಾ, ದಂಡಿನೀ, ಕಿಂಕರೀ, ಬಿಂಬಾ, ವರ್ಣಿನೀ, ಅಮಲಾಂಗೀ, ದ್ರವಿಣೀ, ದ್ರಾವಿಣೀ, ಎಂದು ಹದಿನಾರು ಶಕ್ತಿಗಳು ಈ ರೀತಿಯಾಗಿ ಉತ್ತಮವಾಗಿಯೂ, ಮನೋಹರವಾಗಿಯೂ, ಇರುವ ಶೌಂಡಾವ್ಯೂಹವು ಮುಗಿಯಿತು.

ಪ್ರಥಮಾ(ಮಥಾ)ಖ್ಯಂ ಪ್ರವಕ್ಷ್ಯಾಮಿ ವ್ಯೂಹಂ ಪರಮ ಶೋಭನಂ।
ಪ್ಲಾವನೀ ಪ್ಲಾವಿನೀ ಶೋಭಾ ಮಂದಾ ಚೈವ ಮದೋತ್ಕಟಾ ॥
ಮಂದಾಕ್ಷೇಪಾ ಮಹಾದೇವೀ ಪ್ರಥಮಾಽ ವರಣೇ ಸ್ಮೃತಾಃ ।
ಕಾಮ ಸಂದೀಪನೀ ದೇವೀ ಅತಿರೂಪಾ ಮನೋಹರಾ ॥೧೬೫॥
ಮಹಾವಶಾ ಮಹಾ ಗ್ರಾಹಾ ವಿಹ್ವಲಾ ಮದ ವಿಹ್ವಲಾ ।
ಅರುಣಾ ಶೋಷಣಾ ದಿವ್ಯಾ ರೇವತೀ ಭಾಂಡನಾಯಿಕಾ ॥೧೬೬॥
ಸ್ತಂಭಿನೀ ಘೋರ ರಕ್ತಾಕ್ಷೀ ಸ್ಮರರೂಪಾ ಸುಘೋಷಣಾ ।
ವ್ಯೂಹಃ ಪ್ರಥಮ ಆಖ್ಯಾತಃ ಸ್ವಾಯಂಭುವ ಯಥಾ ತಥಾ ॥೧೬೭॥
ಕಥಿತಂ ಪ್ರಥಮಂ ವ್ಯೂಹಂ ಪ್ರವಕ್ಷ್ಯಾಮಿ ಶೃಣುಷ್ವ ಮೇ ।
ಘೋರಾ ಘೋರತರಾಽಽ ಘೋರಾ ಅತಿಘೋರಾಽ ಘನಾಯಿಕಾ ॥

---

೧೬೪. ಪ್ರಥಮ(ಮಥ)ವೆಂಬ ಅತ್ಯಂತ ಶೋಭನವಾದ ವ್ಯೂಹವನ್ನು ಹೇಳುತ್ತೇನೆ. ಅದರಲ್ಲಿ ಪ್ಲಾವನೀ, ಪ್ಲಾವಿನೀ, ಶೋಭಾ, ಮಂದಾ, ಮದೋತ್ಕಟಾ, ಮಂದಾಕ್ಷೇಪಾ, ಮಹಾದೇವೀ, ಎಂಬಶಕ್ತಿಗಳು.

೧೬೫–೧೬೭. ಪ್ರಥಮ ವ್ಯೂಹದ ಪ್ರಥಮಾವರಣದಲ್ಲಿ ಕಾಮಸಂದೀಪಿನೀ ದೇವೀ, ಅತಿರೂಪಾ, ಮನೋಹರಾ, ಮಹಾವಶಾ, ಮಹಾಗ್ರಾಹಾ, ವಿಹ್ವಲಾ, ಮದವಿಹ್ವಲಾ, ಅರುಣಾ, ಶೋಷಣಾ, ದಿವ್ಯಾ, ರೇವತೀ, ಭಾಂಡನಾಯಿಕಾ, ಸ್ತಂಭಿನೀ, ಘೋರರಕ್ತಾಕ್ಷೀ, ಸ್ಮರರೂಪಾ, ಸುಘೋಷಣಾ, ಎಂಬ ಶಕ್ತಿಗಳು. ಎಲೈ ಸ್ವಾಯಂಭುವ ಮನುವೇ, ಪ್ರಥಮ(ಮಥ)ವೆಂಬ ವ್ಯೂಹವು ಹೇಳಲ್ಪಟ್ಟಿತು.

೧೬೮–೧೬೯. ಪ್ರಥಮವ್ಯೂಹದ ಪ್ರಥಮಾ ವರಣವನ್ನು ಹೇಳುವೆನು ಕೇಳು. ಇದರಲ್ಲಿ ಘೋರಾ, ಘೋರತರಾ, ಅಘೋರಾ, ಅತಿಘೋರಾ,

ಧಾವನೀ ಕ್ರೋಷ್ಟುಕಾ ಮುಂಡಾ ಚಾಷ್ಟಮೀ ಪರಿಕೀರ್ತಿತಾ ।
ಪ್ರಥಮಾ ವರಣಂ ಪ್ರೋಕ್ತಂ ದ್ವಿತೀಯಾ ವರಣಂ ಶೃಣು ॥೧೬೯॥
ಭೀಮಾ ಭೀಮತರಾ ಭೀಮಾ ಶಸ್ತ್ರಾ ಚೈವ ಸುವರ್ತುಲಾ ।
ಸ್ತಂಭಿನೀ ರೋದನೀ ರೌದ್ರೀ ರುದ್ರ ವತ್ಯ ಚಲಾ ಚಲಾ ॥೧೭೦॥
ಮಹಾ ಬಲಾ ಮಹಾ ಶಾಂತಿಃ ಶಾಂತಾಽ ಶಾಂತಾಽ ಶಿವಾಶಿವಾ ।
ಬೃಹತ್ಕಥಾ ಮಹಾ ನಾಸಾ ಷೋಡಶೈವ ಪ್ರಕೀರ್ತಿತಾಃ ॥೧೭೧॥
ಪ್ರಥಮಾಯಾಃ ಸಮಾಖ್ಯಾತೋ ಮನ್ಮಥವ್ಯೂಹ ಉಚ್ಯತೇ ।
ತಾಲ ಕರ್ಣೀ ಚ ಬಾಲಾ ಚ ಕಲ್ಯಾಣೀ ಕಪಿಲಾ ಶಿವಾ ॥೧೭೨॥
ಇಷ್ಟಿಸ್ತುಷ್ಟಿಃ ಪ್ರತಿಜ್ಞಾ ಚ ಪ್ರಥಮಾ ವರಣೇ ಸ್ಮೃತಾಃ ।
ಖ್ಯಾತಿಃ ಪುಷ್ಟಿಕರೀ ತುಷ್ಟಿರ್ಜಲಾ ಚೈವ ಶ್ರುತಿ ರ್ಧೃತಿಃ ॥೧೭೩॥

---

ಅಘನಾಯಿಕಾ, ಧಾವನೀ, ಕ್ರೋಷ್ಟುಕಾ, ಮುಂಡಾ, ಎಂಬ ಎಂಟು ಶಕ್ತಿಗಳು. ಈ ಪ್ರಕಾರ ಪ್ರಥಮಾವರಣವು ಹೇಳಲ್ಪಟ್ಟಿದೆ. ದ್ವಿತೀಯಾ ವರಣವನ್ನು ಹೇಳುವೆನು ಕೇಳು.

೧೭೦–೧೭೧. ಪ್ರಥಮ ವ್ಯೂಹದ ದ್ವಿತೀಯಾವರಣದಲ್ಲಿ ಭೀಮಾ, ಭೀಮತರಾ, ಭೀಮಾಶಸ್ತ್ರಾ, ಸುವರ್ತುಲಾ, ಸ್ತಂಭಿನೀ, ರೋದನೀ, ರೌದ್ರಾ, ರುದ್ರವತೀ, ಅಚಲಾ, ಚಲಾ, ಮಹಾ ಬಲಾ, ಮಹಾಶಾಂತಿ, ಶಾಂತಾ ಶಾಂತಾ, ಶಿವಾ ಶಿವಾ, ಬೃಹತ್ಕಥಾ, ಮಹಾ ನಾಸಾ, ಎಂಬ ಹದಿನಾರು ಶಕ್ತಿಗಳು. ಈರೀತಿಯಾಗಿ ದ್ವಿತೀಯಾವರಣವು ಹೇಳಲ್ಪಟ್ಟಿತು. ಇನ್ನು ಮನ್ಮಥ ವ್ಯೂಹವನ್ನು ಹೇಳುವೆನು ಕೇಳು.

೧೭೨. ಮನ್ಮಥ ವ್ಯೂಹದ ಪ್ರಥಮಾವರಣದಲ್ಲಿ ಕಾಲಕರ್ಣೀ, ಬಲಾ, ಕಲ್ಯಾಣೀ, ಕಪಿಲಾ, ಶಿವಾ, ಇಷ್ಟಿ, ತುಷ್ಟಿ, ಪ್ರತಿಜ್ಞಾ, ಎಂಬ ಶಕ್ತಿಗಳು.

೧೭೩–೧೭೪. ಪ್ರಥಮ ವ್ಯೂಹದ ದ್ವಿತೀಯಾವರಣದಲ್ಲಿ ಖ್ಯಾತಿ, ಪುಷ್ಟಿಕರೀ, ತುಷ್ಟಿ, ಜಲಾ, ಶ್ರುತಿ, ಧೃತಿ, ಕಾಮದಾ, ಶುಭದಾ,

ಕಾಮದಾ ಶುಭದಾ ಸೌಮ್ಯಾ ತೇಜನೀ ಕಾಮ ತಂತ್ರಿಕಾ ।
ಧರ್ಮಾ ಧರ್ಮ ವಶಾ ಶೀಲಾ ಪಾಪಹಾ ಧ(ವ)ರ್ಮವರ್ಧಿನೀ ॥
ಮನ್ಮಥಃ ಕಥಿತೋ ವ್ಯೂಹೋ ಮನ್ಮಥಾಯಾಃ ಶೃಣುಷ್ವ ಮೇ ।
ಧರ್ಮರಕ್ಷಾ ವಿಧಾನಾ ಚ ಧರ್ಮಾ ಧರ್ಮವತೀ ತಥಾ ॥೧೭೫॥
ಸುಮತಿಃ ದುರ್ಮತಿ ರ್ಮೇಧಾ ವಿಮಲಾ ಚಾಷ್ಟಮೀ ಸ್ಮೃತಾ ।
ಪ್ರಥಮಾ ವರಣಂ ಪ್ರೋಕ್ತಂ ದ್ವಿತೀಯಾ ವರಣಂ ಶೃಣು ॥೧೭೬॥
ಶುದ್ಧಿ ರ್ಬುದ್ಧಿ ರ್ದ್ಯುತಿಃ ಕಾಂತಿರ್ವರ್ತುಲಾ ಮೋಹ ವರ್ಧಿನೀ ।
ಬಲಾ ಚಾತಿ ಬಲಾ ಭೀಮಾ, ಪ್ರಾಣ ವೃದ್ಧಿಕರೀ ತಥಾ ॥೧೭೭॥
ದುರ್ಲಜ್ಜಾ ನಿರ್ಘೃಣಾ ಮಂದಾ ಸರ್ವಪಾಪ ಕ್ಷಯಂ ಕರೀ ।
ಕಪಿಲಾ ಚಾತಿ ವಿಧುರಾ ಷೋಡಶೈತಾಃ ಪ್ರಕೀರ್ತಿತಾಃ ॥೧೭೮॥

---

ಸೌಮ್ಯಾ, ತೇಜನೀ, ಕಾಮ ತಂತ್ರಿಕಾ, ಧರ್ಮಾ, ಧರ್ಮ ವಶಾ, ಶೀಲಾ, ಪಾಪಹಾ, ಧರ್ಮವರ್ಧಿನೀ, ಎಂಬ ಶಕ್ತಿಗಳು ಈ ರೀತಿಯಾಗಿ ಮನ್ಮಥವ್ಯೂಹವು ಹೇಳಲ್ಪಟ್ಟಿದೆ. ಇನ್ನು ಮನ್ಮಥಾವ್ಯೂಹವನ್ನು ಹೇಳುವೆನು ಕೇಳು.

೧೭೫–೧೭೬. ಮನ್ಮಥಾವ್ಯೂಹದ ಪ್ರಥಮಾ ವರಣದಲ್ಲಿ ಧರ್ಮರಕ್ಷಾ, ವಿಧಾನಾ, ಧರ್ಮಾ, ಧರ್ಮವತೀ, ಸುಮತಿ, ದುರ್ಮತಿ, ಮೇಧಾ, ವಿಮಲಾ, ಎಂದು ಅಷ್ಟ ಶಕ್ತಿಗಳು. ಪ್ರಥಮಾ ವರಣವನ್ನು ಹೇಳಿರುವೆನು. ದ್ವಿತೀಯಾವರಣವನ್ನು ಹೇಳುವೆನು ಕೇಳು.

೧೭೭–೧೭೮. ಮನ್ಮಥಾ ವ್ಯೂಹದ ದ್ವಿತೀಯಾವರಣದಲ್ಲಿ ಶುದ್ಧಿ, ಬುದ್ಧಿ, ದ್ಯುತಿ, ಕಾಂತಿ, ವರ್ತುಲಾ, ಮೋಹವರ್ಧಿನೀ, ಬಲಾ. ಅತಿ ಬಲಾ, ಪ್ರಾಣವೃದ್ಧಿಕರೀ, ನಿರ್ಲಜ್ಜಾ, ನಿರ್ಘೃಣಾ, ಮಂದಾ, ಸರ್ವ ಪಾಪ ಕ್ಷಯಕರೀ, ಕಪಿಲಾ, ಅತಿ ವಿಧುರಾ, ಎಂಬ ಹದಿನಾರು ಶಕ್ತಿಗಳು. ಈ ರೀತಿಯಾಗಿ ಮನ್ಮಥಾವ್ಯೂಹವು. ಹೇಳಲ್ಪಟ್ಟಿತು. ಭೀಮ ವ್ಯೂಹವನ್ನು ನಿನಗೆ ಹೇಳುವೆನು.

ಮನ್ಮಥಾಯಿಕ ಉಕ್ತಸ್ತೇ ಭೀಮವ್ಯೂಹಂ ವದಾಮಿ ಚ ।
ರಕ್ತಾ ಚೈವ ವಿರಕ್ತಾಚ ಉದ್ವೇಗಾ ಶೋಕ ವರ್ಧಿನೀ ॥೧೭೯॥

ಕಾಮಾ ಕೃಷ್ಣಾ ಕ್ಷುಧಾ, ಮೋಹಾ ಚಾಷ್ಟಮೀ ಪರಿಕೀರ್ತಿತಾ ।
ಪ್ರಥಮಾ ವರಣಂ ಪ್ರೋಕ್ತಂ ದ್ವಿತೀಯಾವರಣಂ ಶೃಣು ॥೧೮೦॥

ಜಯಾ ನಿದ್ರಾ ಭಯಾಲಸ್ಯಾ ಜಲತೃಷ್ಣೋದರೀ ದರಾ ।
ಕೃಷ್ಣಾ ಕೃಷ್ಣಾಂಗಿನೀ ವೃದ್ಧಾ ಶುದ್ಧೋಚ್ಛಿಷ್ಟಾಶನೀ ವೃಷಾ ॥

ಕಾಮನಾ ಶೋಭಿನೀ ದಗ್ಧಾ ದುಃಖದಾ ಸುಖದಾ ವಲೀ ।
ಭೀಮ ವ್ಯೂಹಃ ಸಮಾಖ್ಯಾತೋ ಭೀಮಾಯೀ ವ್ಯೂಹ ಉಚ್ಯತೇ ॥

ಆನಂದಾ ಚ ಸುನಂದಾ ಚ ಮಹಾನಂದಾ ಶುಭಂಕರೀ ।
ವೀತರಾಗಾ ಮಹೋತ್ಸಾಹಾ ಜಿತರಾಗಾ ಮನೋರಥಾ ॥೧೮೩॥

ಪ್ರಥಮಾವರಣಂ ಪ್ರೋಕ್ತಂ ದ್ವಿತಿಯಾವರಣಂ ಶೃಣು ।
ಮನೋನ್ಮನೀ ಮನಃ ಕ್ಷೋಭಾ ಮದೋನ್ಮತ್ತಾ ಮದಾಕುಲಾ ॥

---

೧೭೯–೧೮೦. ಭೀಮವ್ಯೂಹದ ಪ್ರಥಮಾವರಣದಲ್ಲಿ ರಕ್ತಾ, ವಿರಕ್ತಾ, ಉದ್ವೇಗಾ, ಶೋಕವರ್ಧಿನೀ, ಕಾಮಾ, ತೃಷ್ಣಾ, ಕ್ಷುಧಾ, ಮೋಹಾ, ಎಂದು ಅಷ್ಟಶಕ್ತಿಗಳು. ಪ್ರಥಮಾ ವರಣವು ಹೆಳಲ್ಪಟ್ಟಿತು. ದ್ವಿತೀಯಾ ವರಣವನ್ನು ಹೇಳುತ್ತೇನೆ ಕೇಳುವವನಾಗು.

೧೮೧–೧೮೨ ಭೀಮವ್ಯೂಹದ ದ್ವಿತೀಯಾವರಣದಲ್ಲಿ ಜಯಾ, ನಿದ್ರಾ, ಆಲಸ್ಯಾ, ಜಲತೃಷ್ಣೋದರೀ, ಕೃಷ್ಣಾ, ಕೃಷ್ಣಾಂಗಿನೀ, ವೃದ್ಧಾ, ಶುದ್ಧೋಚ್ಛಿಷ್ಟಾ, ಅಶನೀ, ವೃಷಾ, ಕಾಮನಾ, ಶೋಭಿನೀ, ದಗ್ಧಾ, ದುಃಖದಾ, ಸುಖದಾ ವಲೀ, ಎಂಬ ಶಕ್ತಿಗಳು. ಭೀಮವ್ಯೂಹವು ಹೇಳಲ್ಪಟ್ಟಿತು. ಇನ್ನು ಭೀಮಾವ್ಯೂಹವನ್ನು ಹೇಳುವೆನು ಕೇಳು.

೧೮೩. ಭೀಮಾಯೀವ್ಯೂಹದ ಪ್ರಥಮಾ ವರಣದಲ್ಲಿ ಆನಂದಾ, ಸುನಂದಾ, ಮಹಾನಂದಾ, ಶುಭಂಕರೀ, ವೀತರಾಗಾ, ಮಹೋತ್ಸಾಹಾ, ಜಿತರಾಗಾ, ಮನೋರಥಾ, ಎಂಬ ಶಕ್ತಿಗಳು. ಪ್ರಥಮಾವರಣವು ಹೇಳಲ್ಪಟ್ಟಿತು. ದ್ವಿತೀಯಾವರಣವನ್ನು ಹೇಳುವೆನು ಕೇಳು.

೧೮೪-೧೮೫. ಭೀಮಾವ್ಯೂಹದ ದ್ವಿತೀಯಾವರಣದಲ್ಲಿ ಮನೋನ್ಮನೀ, ಮನಃಕ್ಷೋಭಾ, ಮದೋನ್ಮತ್ತಾ, ಮದಾಕುಲಾ, ಮಂದ

ಮಂದಗರ್ಭಾ ಮಹಾಭಾಸಾ ಕಾಮಾನಂದಾ ಸುವಿಹ್ವಲಾ ।
ಮಹಾವೇಗಾ ಸವೇಗಾ ಚ ಮಹಾಭೋಗಾ ಕ್ಷಯಾವಹಾ ॥೧೮೫॥

ಕ್ರಮಿಣೀ ಕ್ರಾಮಿಣೀ ವಕ್ರಾ ದ್ವಿತೀಯಾವರಣೇ ಸ್ಮೃತಾಃ ।
ಕಥಿತಂ ತವ ಭೀಮಾಯಿ ವ್ಯೂಹಂ ಪರಮ ಶೋಭನಂ ॥೧೮೬॥

ಶಾಕುನಂ ಕಥಯಾಮ್ಯದ್ಯ ಸ್ವಾಯಂಭುವ ಮನೋತ್ಸುಕಂ ।
ಯೋಗಾ ವೇಗಾ ಸುವೇಗಾ ಚ ಅತಿವೇಗಾ ಸುವಾಸಿನೀ ॥೧೮೭॥

ದೇವೀ ಮನೋರಥಾ ವೇಗಾ ಜಲಾವರ್ತಾ ಚ ಧೀಮತೀ ।
ಪ್ರಥಮಾವರಣಂ ಪ್ರೋಕ್ತಂ ದ್ವಿತೀಯಾವರಣಂ ಶೃಣು ॥೧೮೮॥

ರೋಧಿನೀ ಕ್ಷೋಭಿಣೀ ಬಾಲಾ ವಿಪ್ರಾ ಶೇಷಾ ಸುಶೋಷಿಣೀ ।
ವಿದ್ಯುತಾ ಭಾಸಿನೀ ದೇವೀ ಮನೋವೇಗಾ ಚ ಚಾಪಲಾ ॥೧೮೯॥

ವಿದ್ಯುಜ್ಜಿಹ್ವಾ ಮಹಾಜಿಹ್ವಾ ಭ್ರುಕುಟೀ ಕುಟಿಲಾನನಾ ।
ಫುಲ್ಲಜ್ವಾಲಾ ಮಹಾಜ್ವಾಲಾ, ಸುಜ್ವಾಲಾ ಚ ಕ್ಷಯಾಂತಿಕಾ ॥

---

ಗರ್ಭಾ, ಮಹಾಭಾಸಾ, ಕಾಮಾನಂದಾ, ಸುವಿಹ್ವಲಾ, ಮಹಾವೇಗಾ, ಸವೇಗಾ, ಮಹಾಭೋಗಾ, ಕ್ಷಯಾವಹಾ, ಕ್ರಮಿಣೀ, ಕ್ರಾಮಿಣೀ, ವಕ್ರಾ, ಎಂದು ಶಕ್ತಿಗಳು. ಓ ಸ್ವಾಯಂಭುವ ಮನುವೇ, ಅತ್ಯಂತ ಮಂಗಳಕರವಾದ ಭೀಮಾಯೀ ವ್ಯೂಹವನ್ನು ನಿನಗೆ ಹೇಳಿರುವೆನು. ಇನ್ನು ಮನಸ್ಸಿಗೆ ಉತ್ಸಾಹವನ್ನುಂಟುಮಾಡುವ ಶಾಕುನವ್ಯೂಹವನ್ನು ಹೇಳುತ್ತೇನೆ ಕೇಳು.

೧೮೭–೧೮೮. ಶಾಕುನವ್ಯೂಹದ ಪ್ರಥಮಾವರಣದಲ್ಲಿ ಯೋಗಾ, ವೇಗಾ, ಸುವೇಗಾ, ಅತಿವೇಗಾ, ಸುವಾಸಿನೀ, ದೇವೀ, ಮನೋರಥಾ, (ಅ)ವೇಗಾ, ಜಲಾವರ್ತಾ, ಧೀಮತೀ, ಎಂದು ಶಕ್ತಿಗಳು. ಪ್ರಥಮಾವರಣವನ್ನು ಹೇಳಿಯಾಯಿತು. ದ್ವಿತೀಯಾವರಣವನ್ನು ಹೇಳುತ್ತೇನೆ ಕೇಳು.

೧೮೯–೧೯೦. ಶಾಕುನವ್ಯೂಹದ ದ್ವಿತೀಯಾವರಣದಲ್ಲಿ ರೋಧಿನೀ, ಕ್ಷೋಭಿಣೀ, ಬಾಲಾ, ವಿಪ್ರಾ, ಅಶೇಷಾಸುಶೋಷಿಣೀ, ವಿದ್ಯುತಾ, ಭಾಸಿನೀ, ದೇವೀ, ಮನೋವೇಗಾ, ಚಾಪಲಾ, ವಿದ್ಯುಜ್ಜಿಹ್ವಾ, ಮಹಾ ಜಿಹ್ವಾ, ಭ್ರುಕುಟೀ ಕುಟಿಲಾನನಾ, ಫುಲ್ಲಜ್ವಾಲಾ, ಮಹಾಜ್ವಾಲಾ,

ಶಾಕುನಃ ಕಥಿತೋ ವ್ಯೂಹಃ ಶಾಕುನಾಯಾಃ ಶೃಣುಷ್ವ ಮೇ ।
ಜ್ವಾಲಿನೀ ಚೈವ ಭಸ್ಮಾಂಗೀ ತಥಾ ಭಸ್ಮಾಂತಗಾ ತತಾ ॥೧೯೧॥
ಭಾವಿನೀ ಚ ಪ್ರಜಾ ವಿದ್ಯಾ ಖ್ಯಾತಿ ಶ್ಚೈವಾಷ್ಟಮೀ ಸ್ಮೃತಾ ।
ಪ್ರಥಮಾವರಣಂ ಪ್ರೋಕ್ತಂ ದ್ವಿತೀಯಾವರಣಂ ಶೃಣು ॥೧೯೨॥
ಉಲ್ಲೇಖಾ ಚ ಪತಾಕಾ ಚ ಭೋಗಾ ಭೋಗವತೀ ಖಗಾ ।
ಭೋಗ ಭೋಗವ್ರತಾ ಯೋಗಾ ಭೋಗಾಖ್ಯಾ ಯೋಗಪಾರಗಾ ॥
ಋದ್ಧಿಃ ಬುದ್ಧಿ ರ್ಧೃತಿಃ ಕಾಂತಿಃ ಸ್ಮೃತಿಃ ಸಾಕ್ಷಾಚ್ಛ್ರುತಿ ರ್ಧರಾ ।
ಶಾಕುನಾಯಾ ಮಹಾವ್ಯೂಹಃ ಕಥಿತಃ ಕಾಮದಾಯಕಃ ॥೧೯೪॥
ಸ್ವಾಯಂಭುವ ಶೃಣು ವ್ಯೂಹಂ ಸುಮತ್ಯಾಖ್ಯಂ ಸುಶೋಭನಂ ।
ಪರೇಷ್ಟಾ ಚ ಪರಾದೃಷ್ಟಾ ಹ್ಯಮೃತಾ ಫಲನಾಶಿನೀ ॥೧೯೫॥

---

ಸುಜ್ವಾಲಾ, ಕ್ಷಯಾಂತಿಕಾ, ಎಂದು ಶಕ್ತಿಗಳು. ಈರೀತಿಯಾಗಿ ಶಾಕುನ ವ್ಯೂಹವು ಹೇಳಲ್ಪಟ್ಟಿತು, ಇನ್ನು ಶಾಕುನಾವ್ಯೂಹವನ್ನು ಹೇಳುವೆನು. ಕೇಳುವವನಾಗು.

೧೯೧–೧೯೨. ಶಾಕುನಾವ್ಯೂಹದ ಪ್ರಥಮಾವರಣದಲ್ಲಿ ಜ್ವಾಲಿನೀ, ಭಸ್ಮಾಂಗೀ, ಭಸ್ಮಾಂತಗಾ, ತತಾ, ಭಾವಿನೀ, ಪ್ರಜಾ, ವಿದ್ಯಾ, ಖ್ಯಾತಿ, ಎಂದು ಎಂಟುಶಕ್ತಿಗಳು. ಪ್ರಥಮಾವರಣವನ್ನು ಹೇಳಿರುವೆನು. ದ್ವಿತೀಯಾವರಣವನ್ನು ಕೇಳು.

೧೯೩–೧೯೪. ಶಾಕುನಾವ್ಯೂಹದ ದ್ವಿತೀಯಾವರಣದಲ್ಲಿ ಉಲ್ಲೇಖಾ, ಪತಾಕಾ, ಭೋಗಾ, ಭೋಗವತೀ, ಖಗಾ, ಭೋಗ ಭೋಗವ್ರತಾ, ಯೋಗಾ, ಭೋಗಾಖ್ಯಾ, ಯೋಗಪಾಗಾರಗಾ ಋದ್ಧಿ, ಬುದ್ಧಿ, ಧೃತಿ, ಕಾಂತಿ, ಸ್ಮೃತಿ, ಶ್ರುತಿ, ಧರಾ, ಎಂದು ಶಕ್ತಿಗಳು ಹೇಳಲ್ಪಟ್ಟವೆ. ಈರೀತಿಯಾಗಿ ಕಾಮಿಸಿದ ಪದಾರ್ಥಗಳನ್ನು ಕೊಡತಕ್ಕ ಶಾಕುನಾವ್ಯೂಹವು ಹೇಳಲ್ಪಟ್ಟಿತು. ಓ ಮನುವೇ, ಇನ್ನು ಶೋಭನವಾದ ಸುಮತ್ಯಾಖ್ಯವ್ಯೂಹವನ್ನು ಹೇಳುವೆನು ಕೇಳು.

೧೯೫–೧೯೬. ಸುಮತ್ಯಾಖ್ಯವ್ಯೂಹದ ಪ್ರಥಮಾವರಣದಲ್ಲಿ ಪರೇಷ್ಟಾ ಪರಾ, ದೃಷ್ಟಾ, ಅಮೃತಾ, ಫಲನಾಶಿನೀ, ಹಿರಣ್ಯಾಕ್ಷೀ, ಸುವರ್ಣಾಕ್ಷೀ

ಹಿರಣ್ಯಾಕ್ಷೀ ಸುವರ್ಣಾಕ್ಷೀ ದೇವೀ ಸಾಕ್ಷಾತ್ಕಪಿಂಜಲಾ ।
ಕಾಮರೇಖಾ ಚ ಕಥಿತಂ ಪ್ರಥಮಾವರಣಂ ಶೃಣು ॥೧೯೬॥

ರತ್ನ ದ್ವೀಪಾ ಚ ಸುದ್ವೀಪಾ, ರತ್ನದಾ ರತ್ನ ಮಾಲಿನೀ ।
ರತ್ನ ಶೋಭಾ ಸುಶೋಭಾ ಚ ಮಹಾಶೋಭಾ ಮಹಾದ್ಯುತಿಃ ॥

ಶಾಂಬರೀ ಬಂಧುರಾ ಗ್ರಂಥಿಃ ಪಾದಕರ್ಣಾ ಕರಾನನಾ ।
ಹಯಗ್ರೀವಾ ಚ ಜಿಹ್ವಾ ಚ ಸರ್ವ ಭಾಸೇತಿ ಶಕ್ತಯಃ ॥೧೯೮॥

ಕಥಿತಃ ಸುಮತಿವ್ಯೂಹಃ ಸುಮತ್ಯಾ ವ್ಯೂಹ ಉಚ್ಯತೇ ।
ಸರ್ವಾಶೀ ಚ ಮಹಾಭಕ್ಷಾ ಮಹಾದಂಷ್ಟ್ರಾತಿರೌರವಾ ॥೧೯೯॥

ವಿಸ್ಫುಲಿಂಗಾ ವಿಲಿಂಗಾ ಚ ಕೃತಾಂತಾ ಭಾಸ್ಕರಾನನಾ ।
ಪ್ರಥಮಾ ವರಣಂ ಪ್ರೋಕ್ತಂ ದ್ವಿತೀಯಾವರಣಂ ಶೃಣು ॥೨೦೦॥

ರಾಗಾ ರಂಗವತೀ ಶ್ರೇಷ್ಠಾ ಮಹಾಕ್ರೋಧಾ ಚ ರೌರವಾ ।
ಕ್ರೋಧನೀ ವಸನೀ ಚೈವ ಕಲಹಾ ಚ ಮಹಾ ಬಲಾ ॥೨೦೧॥

---

ಕಪಿಂಜಲಾ ದೇವೀ, ಕಾಮರೇಖಾ, ಎಂಬ ಶಕ್ತಿಗಳು. ಈರೀತಿಯಾಗಿ ಪ್ರಥಮಾವರಣವು ಹೇಳಲ್ಪಟ್ಟಿದೆ.

೧೯೭–೧೯೮. ಸುಮತಿವ್ಯೂಹದ ದ್ವಿತೀಯಾವರಣದಲ್ಲಿ ರತ್ನದ್ವೀಪಾ, ಸುದ್ವೀಪಾ, ರತ್ನದಾ, ರತ್ನಮಾಲಿನೀ, ರತ್ನಶೋಭಾ, ಸುಶೋಭಾ, ಮಹಾಶೋಭಾ, ಮಹಾದ್ಯುತಿ, ಶಾಂಬರೀ, ಬಂಧುರಾ, ಗ್ರಂಥಿ, ಪಾದ ಕರ್ಣಾ, ಕರಾನನಾ, ಹಯಗ್ರೀವಾ, ಜಿಹ್ವಾ, ಸರ್ವಭಾಸಾ, ಎಂಬ ಶಕ್ತಿಗಳು. ಈ ಪ್ರಕಾರವಾಗಿ ಸುಮತಿವ್ಯೂಹವು ಮುಗಿಯಿತು. ಇನ್ನು ಸುಮತ್ಯಾಖ್ಯವ್ಯೂಹವನ್ನು ಹೇಳುವೆನು ಕೇಳು.

೧೯೯–೨೦೦. ಸುಮತ್ಯಾಖ್ಯವ್ಯೂಹದ ಪ್ರಥಮಾವರಣದಲ್ಲಿ ಸರ್ವಾಶೀ, ಮಹಾಭಕ್ಷಾ, ಮಹಾದಂಷ್ಟ್ರಾ, ಅತಿರೌರವಾ, ವಿಸ್ಫುಲಿಂಗಾ, ವಿಲಿಂಗಾ, ಕೃತಾಂತಾ, ಭಾಸ್ಕರಾನನಾ, ಎಂದು ಎಂಟು ಶಕ್ತಿಗಳು. ಈರೀತಿಯಾಗಿ ಮೊದಲನೆಯ ಆವರಣವು ಹೇಳಲ್ಪಟ್ಟಿತು. ದ್ವಿತೀಯಾವರಣವನ್ನು ಹೇಳುವೆನು ಕೇಳು.

೨೦೧–೨೦೨. ಸುಮತ್ಯಾಖ್ಯವ್ಯೂಹದ ದ್ವಿತೀಯಾವರಣದಲ್ಲಿ ರಾಗಾ, ರಂಗವತೀ, ಶ್ರೇಷ್ಠಾ, ಮಹಾಕ್ರೋಧಾ, ರೌರವಾ, ಕ್ರೋಧನೀ, ವಸನೀ,

ಕಲಂತಿಕಾ ಚತುರ್ಭೇದಾ ದುರ್ಗಾ ವೈ ದುರ್ಗ ಮಾನಿನೀ ।
ನಾಲೀ ಸುನಾಲೀ ಸೌಮ್ಯಾ ಚ ಇತ್ಯೇವಂ ಕಥಿತಂ ಮಯಾ ॥೨೦೨॥
ಗೋಪ ವ್ಯೂಹಂ ವದಾಮ್ಯತ್ರ ಶೃಣು ಸ್ವಾಯಂಭುವಾ ಖಿಲಂ ।
ಪಾಟಲೀ ಪಾಟವೀ ಚೈವ ಪಾಟೀ ವಿಟಪಿಟಾ ತಥಾ ॥೨೦೩॥
ಕಂಕಟಾ ಸುಪಟಾ ಚೈವ ಪ್ರಘಟಾ ಚ ಘಟೋದ್ಭವಾ ।
ಪ್ರಥಮಾ ವರಣಂ ಚಾತ್ರ ಭಾಷಯಾ ಕಥಿತಂ ಮಯಾ ॥೨೦೪॥
ನಾದಾಕ್ಷೀ ನಾದ ರೂಪಾ ಚ ಸರ್ವಕಾರೀ ಗಮಾಗಮಾ ।
ಅನುಚಾರೀ ಸುಚಾರೀ ಚ ಚಂಡನಾಡೀ ಸುವಾಹಿನೀ ॥೨೦೫॥
ಸುಯೋಗಾ ಚ ವಿಯೋಗಾ ಚ ಹಂಸಾಖ್ಯಾ ಚ ವಿಲಾಸಿನೀ ।
ಸರ್ವಗಾ ಸುವಿಚಾರಾ ಚ ವಂಚನೀ ಚೇತಿ ಶಕ್ತಯಃ ॥೨೦೬॥

---

ಕಲಹಾ, ಮಹಾಬಲಾ, ಕಲಂತಿಕಾ, ಚತುರ್ಭೇದಾ, ದುರ್ಗಾ, ದುರ್ಗ ಮಾನಿನೀ, ನಾಲೀ, ಸುನಾಲೀ, ಸೌಮ್ಯಾ, ಎಂಬ ಶಕ್ತಿಗಳು. ಸುಮತ್ಯಾಖ್ಯ ವ್ಯೂಹವು ಈ ರೀತಿಯಾಗಿ ನನ್ನಿಂದ ಹೇಳಲ್ಪಟ್ಟಿತು.

೨೦೩–೨೦೪. ಓ ಸ್ವಾಯಂಭುವ ಮನುವೇ, ಗೋಪವ್ಯೂಹವನ್ನು ಹೇಳುವೆನು ಕೇಳುವವನಾಗು. ಆವ್ಯೂಹದ ಪ್ರಥಮಾವರಣದಲ್ಲಿ ಪಾಟಲೀ, ಪಾಟವೀ, ಪಾಟೀ, ವಿಟಪಿಟಾ, ಕಂಕಟಾ, ಸುಪಟಾ, ಪ್ರಘಟಾ, ಘಟೋದ್ಭವಾ, ಎಂದು ಪರಿಭಾಷೆಯಿಂದ ಎಂಟುಶಕ್ತಿಗಳು. ಪ್ರಥಮಾ ವರಣವು ಮುಗಿಯಿತು. ದ್ವಿತೀಯಾವರಣವನ್ನು ಕೇಳು.

೨೦೫–೨೦೬. ಗೋಪವ್ಯೂಹದ ದ್ವಿತೀಯಾವರಣದಲ್ಲಿ ನಾದಾಕ್ಷೀ, ನಾದರೂಪಾ, ಸರ್ವಕಾರೀ, ಗಮಾ, ಆಗಮಾ, ಅನುಚಾರೀ, ಸುಚಾರೀ, ಚಂಡನಾಡೀ, ಸುವಾಹಿನೀ, ಸುಯೋಗಾ, ವಿಯೋಗಾ, ಹಂಸಾ, ವಿಲಾಸಿನೀ, ಸರ್ವಗಾ, ಸುವಿಚಾರಾ, ವಂಚನೀ, ಎಂದು ಶಕ್ತಿಗಳು, ಈ ಪ್ರಕಾರವಾಗಿ ಗೋಪವ್ಯೂಹವು ಮುಗಿಯಿತು. ಇನ್ನು ಗೋಪಾಯೀ ವ್ಯೂಹವನ್ನು ಹೇಳುವೆನು ಕೇಳು.

ಗೋಪವ್ಯೂಹ: ಸಮಾಖ್ಯಾತೋ ಗೋಪಾಯೀವ್ಯೂಹ ಉಚ್ಯತೇ ।
ಭೇದಿನೀ ಛೇದಿನೀ ಚೈವ ಸರ್ವಕಾರೀ ಕ್ಷುಧಾ ಶನೀ ॥೨೦೭॥

ಉಚ್ಛುಷ್ಮಾ ಚೈವ ಗಾಂಧಾರೀ ಭಸ್ಮಾಶೀ ವಡವಾನಲಾ ।
ಪ್ರಥಮಾವರಣಂ ಚೈವ (೦) ದ್ವಿತೀಯಾವರಣಂಶೃಣು ॥೨೦೮॥

ಅಂಧಾ ಬಾಹ್ವಾಸಿನೀ ಬಾಲಾ ದೀಪಾ ಕ್ಷಾಮಾ ತಥೈವಚ ।
ಅಕ್ಷಾ, ತ್ರ್ಯಕ್ಷಾ ಚ ಹೃಲ್ಲೇಖಾ, ಹೃದ್ಗತಾ ಮಾಯಿಕಾಪರಾ ॥೨೦೯॥

ಆಮಯಾ ಸಾದಿನೀ ಭಿಲ್ಲೀ ಸಹ್ಯಾಸಹ್ಯಾ ಸರಸ್ವತೀ ।
ರುದ್ರ ಶಕ್ತಿರ್ಮಹಾಶಕ್ತಿ ರ್ಮಹಾಮೋಹಾ ಚ ಗೋನದೀ ॥೨೧೦॥

ಗೋಪಾಯೀ ಕಥಿತೋ ವ್ಯೂಹೋ ನಂದವ್ಯೂಹಂ ವದಾಮಿ ತೇ ।
ನಂದಿನೀ ಚ ನಿವೃತ್ತಿಶ್ಚ ಪ್ರತಿಷ್ಠಾ ಚ ಯಥಾ ಕ್ರಮಂ ॥೨೧೧॥

---

೨೦೭–೨೦೮. ಗೋಪಾಯೀ ವ್ಯೂಹದ ಪ್ರಥಮಾವರಣದಲ್ಲಿ— ಭೇದಿನೀ, ಛೇದಿನೀ, ಸರ್ವಕಾರೀ, ಕ್ಷುಧಾಶನೀ, ಉಚ್ಛುಷ್ಮಾ, ಗಾಂಧಾರೀ, ಭಸ್ಮಾಶೀ, ವಡವಾನಲಾ, ಎಂದು ಎಂಟು ಶಕ್ತಿಗಳು. ಈ ರೀತಿಯಲ್ಲಿ ಪ್ರಥಮಾವರಣವು ಮುಗಿಯಿತು. ದ್ವಿತೀಯಾವರಣವನ್ನು ಹೇಳುತ್ತೇನೆ. ಕೇಳು.

೨೦೯–೨೧೦. ಗೋಪಾಯೀವ್ಯೂಹದ ದ್ವಿತೀಯಾವರಣದಲ್ಲಿ ಅಂಧಾ, ಬಾಹ್ವಾಸಿನೀ, ದೀಪಾ, ಬಾಲಾ, ಕ್ಷಮಾ, ಅಕ್ಷಾ, ತ್ರ್ಯಕ್ಷಾ, ಹೃಲ್ಲೇಖಾ, ಹೃದ್ಗತಾ, ಮಾಯಿಕಾ, ಅಪರಾ, ಆಮಯೀ, ಸಾದಿನೀ, ಭಿಲ್ಲೀ, ಸಹ್ಯಾ, ಅಸಹ್ಯಾ, ಸರಸ್ವತೀ, ರುದ್ರಶಕ್ತಿ, ಮಹಾಶಕ್ತಿ, ಮಹಾಮೋಹಾ, ಗೋನದೀ, ಎಂಬ ಶಕ್ತಿಗಳು. ಈರೀತಿಯಾಗಿ ಗೋಪಾಯೀ ವ್ಯೂಹವು ಮುಗಿಯಿತು. ಇನ್ನು ನಂದವ್ಯೂಹವನ್ನು ನಿನಗೆ ಹೇಳುತ್ತೇನೆ. ಕೇಳು.

೨೧೧–೨೧೨. ನಂದವ್ಯೂಹದ ಮೊದಲನೆಯ ಆವರಣದಲ್ಲಿ–ನಂದಿನೀ, ನಿವೃತ್ತಿ, ಪ್ರತಿಷ್ಠಾ ವಿದ್ಯಾನಾಸಾ, ಖಗ್ರಸಿನೀ, ಚಾಮುಂಡಾ, ಪ್ರಿಯ

ವಿದ್ಯಾ ನಾಸಾ ಖಗ್ರಸೀನೀ ಚಾಮುಂಡಾ ಪ್ರಿಯದರ್ಶಿನೀ ।
ಪ್ರಥಮಾವರಣಂ ಪ್ರೋಕ್ತಂ ದ್ವಿತೀಯಾವರಣಂ ಶೃಣು ॥೨೧೨॥

ಗುಹ್ಯಾ ನಾರಾಯಣೀ ಮೋಹಾ ಪ್ರಜಾ ದೇವೀ ಚ ಚಕ್ರಿಣೀ ।
ಕಂಕಟಾ ಚ ತಥಾ ಕಾಲೀ ಶಿವಾದ್ಯೋಷಾ ತತಃ ಪರಂ ॥೨೧೩॥

ವಿರಾಮಾ ಯಾ ಚ ವಾಗೀಶೀ ವಾಹಿನೀ ಭೀಷಣೀ ತಥಾ ।
ಸುಗಮಾ ಚೈವ ನಿರ್ದಿಷ್ಟಾ ದ್ವಿತೀಯಾ ವರಣೇ ಸ್ಮೃತಾ ॥೨೧೪॥

ನಂದವ್ಯೂಹೋ ಮಯಾಖ್ಯಾತೋನಂದಾವ್ಯೂಹೋಮಯೋಚ್ಯತೇ।
ವಿನಾಯಕೀ ಪೂರ್ಣಿಮಾ ಚ ರಂಕಾರೀ ಕುಂಡಲೀ ತಥಾ ॥೨೧೫॥

ಇಚ್ಛಾ ಕಪಾಲಿನೀ ಚೈವ ದ್ವೀಪಿನೀ ಚ ಜಯಂತಿಕಾ ।
ಪ್ರಥಮಾ ವರಣೇ ಚಾಷ್ಟೌ ಶಕ್ತಯಃ ಪರಿಕೀರ್ತಿತಾಃ ॥೨೧೬॥

---

ದರ್ಶಿನೀ, ಎಂಬುದಾಗಿ ಕ್ರಮವಾಗಿ ಶಕ್ತಿಗಳು. ಹೀಗೆ ಪ್ರಥಮಾವರಣವನ್ನು ಹೇಳಿರುತ್ತೇನೆ. ದ್ವಿತೀಯಾ ವರಣವನ್ನು ಹೇಳುವೆನು ಕೇಳು.

೨೧೩-೨೧೪. ನಂದವ್ಯೂಹದ ದ್ವಿತೀಯಾ ವರಣದಲ್ಲಿ—ಗುಹ್ಯಾ, ನಾರಾಯಣೀ, ಮೋಹಾ, ಪ್ರಜಾದೇವೀ, ಚಕ್ರಿಣೀ, ಕಂಕಟಾ, ಕಾಲೀ, ಶಿವಾದ್ಯೋಷಾ, ವಿರಾಮಾ, ವಾಗೀಶೀ, ವಾಹಿನೀ, ಭೀಷಣೀ, ಸುಗಮಾ, ಎಂಬುದಾಗಿ ಶಕ್ತಿಗಳು ನಿರ್ದಿಷ್ಟವಾಗಿವೆ. ನಂದವ್ಯೂಹವು ಹೇಳಲ್ಪಟ್ಟಿತು. ಇನ್ನು ನಂದಾ ವ್ಯೂಹವು ಹೇಳಲ್ಪಡುತ್ತದೆ.

೨೧೫-೨೧೬. ನಂದಾ ವ್ಯೂಹದ ಪ್ರಥಮಾ ವರಣದಲ್ಲಿ ವಿನಾಯಕೀ, ಪೂರ್ಣಿಮಾ, ರಂಕಾರೀ, ಕುಂಡಲೀ, ಇಚ್ಛಾ, ಕಪಾಲಿನೀ, ದ್ವಿಪಿನೀ, ಜಯಂತಿಕಾ, ಎಂದು ಎಂಟು ಶಕ್ತಿಗಳು, ಹೇಳಲ್ಪಟ್ಟಿವೆ. ಈರೀತಿಯಾಗಿ ಪ್ರಥಮಾವರಣವನ್ನು ಹೇಳಿರುವೆನು. ಇನ್ನುಮುಂದೆ ದ್ವಿತೀಯಾವರಣವನ್ನು ಹೇಳುತ್ತೇನೆ ಕೇಳು.

ಪ್ರಥಮಾವರಣಂ ಪ್ರೋಕ್ತಂ ದ್ವಿತೀಯಾಽಽ ವರಣಂ ಶೃಣು ।
ಪಾವನೀ ಚಾಂಬಿಕಾ ಚೈವ ಸರ್ವಾತ್ಮಾ ಪೂತನಾ ತಥಾ ॥೨೧೭॥
ಛಗಲೀ ಮೋದಿನೀ ಸಾಕ್ಷಾದ್ದೇವೀ ಲಂಬೋದರೀ ತಥಾ ।
ಸಂಹಾರೀ ಕಾಲಿನೀ ಚೈವ ಕುಸುಮಾ ಚ ಯಥಾ ಕ್ರಮಂ ॥೨೧೮॥
ಶು (ಶ) ಕ್ರಾ ತಾರಾ ತಥಾ ಜ್ಞಾನಾ ಕ್ರಿಯಾ ಗಾಯತ್ರಿಕಾ ತಥಾ ।
ಸಾವಿತ್ರೀ ಚೇತಿ ವಿಧಿನಾ ದ್ವಿತೀಯಾ ವರಣಂ ಸ್ಮೃತಂ ॥೨೧೯॥
ನಂದಾಯಾಃ ಕಥಿತೋ ವ್ಯೂಹಃ ಪೈತಾಮಹ ಮತಃ ಪರಂ ।
ನಂದಿನೀ ಚೈವ ಫೇತ್ಕಾರೀ ಕ್ರೋಧಾ ಹಂಸಾ ಷಡಂಗುಲಾ ॥೨೨೦॥
ಆನಂದಾ ವಸು ದುರ್ಗಾ ಚ ಸಂಹಾರಾ ಹ್ಯಮೃತಾಷ್ಟಮೀ ।
ಪ್ರಥಮಾವರಣಂ ಪ್ರೋಕ್ತಂ ದ್ವಿತೀಯಾವರಣಂ ಶೃಣು ॥೨೨೧॥
ಕುಲಾಂತಿಕಾ ನಲಾ ಚೈವ ಪ್ರಚಂಡಾ ಮರ್ದಿನೀ ತಥಾ ।
ಸರ್ವಭೂತಾ ಭಯಾ ಚೈವ ದಯಾ ಚ ವಡವಾ ಮುಖೀ ॥೨೨೨॥

---

೨೧೭-೨೧೯. ನಂದವ್ಯೂಹದದ್ವಿತೀಯಾ ವರಣದಲ್ಲಿಯಥಾ ಕ್ರಮವಾಗಿ ಪಾವನೀ, ಅಂಬಿಕಾ, ಸರ್ವಾತ್ಮಾ, ಪೂತನಾ, ಛಗಲೀ, ಮೋದಿನೀ, ಸಾಕ್ಷಾತ್ ದೇವೀ, ಲಂಬೋದರೀ, ಸಂಹಾರೀ, ಕಾಲಿನೀ, ಕುಸುಮಾ, ಶುಕ್ಲಾ, ತಾರಾ, ಜ್ಞಾನಾ, ಕ್ರಿಯಾ, ಗಾಯತ್ರೀ, ಸಾವಿತ್ರೀ, ಎಂದು ವಿಧಿಯಂತೆ ಶಕ್ತಿಗಳು ಹೇಳಲ್ಪಟ್ಟವೆ. ನಂದಾ ವ್ಯೂಹವು ಹೇಳಲ್ಪಟ್ಟಿತು. ಇನ್ನು ಪೈತಾಮಹ ವ್ಯೂಹವನ್ನು ಹೇಳುವೆನು. ಕೇಳುವವನಾಗು.

೨೨೦-೨೨೧. ಪೈತಾಮಹ ವ್ಯೂಹದ ಪ್ರಥಮಾವರಣದಲ್ಲಿ—ನಂದಿನೀ ಫೇತ್ಕಾರೀ, ಕ್ರೋಧಾ, ಹಂಸಾ, ಷಡಂಗುಲಾ, ಆನಂದಾ, ವಸುದುರ್ಗಾ, ಸಂಹಾರಾ, ಅಮೃತಾ, ಎಂದು ಎಂಟು ಶಕ್ತಿಗಳು. ಈರೀತಿಯಾಗಿ ಪ್ರಥಮಾವರಣವು ಮುಗಿಯಿತು. ದ್ವಿತೀಯಾವರಣವನ್ನು ಹೇಳುವೆನು ಕೇಳು.

೨೨೨-೨೨೪. ಪೈತಾಮಹ ವ್ಯೂಹದ ದ್ವಿತೀಯಾ ವರಣದಲ್ಲಿ ಕುಲಾಂತಿಕಾ, ಅನಲಾ, ಪ್ರಚಂಡಾ, ಮರ್ದಿನೀ, ಸರ್ವ ಭೂತಾಭಯಾ,

ಲಂಪಟಾ ಪನ್ನಗಾದೇವೀ ಕುಸುಮಾ ವಿಪುಲಾಂತಕಾ ।
ಕೇದಾರಾ ಚ ತಥಾ ಕೂರ್ಮಾ ದುರಿತಾ ಮಂದರೋದರೀ ॥೨೨೪॥

ಖಡ್ಗ ಚಕ್ರೇತಿ ವಿಧಿನಾ ದ್ವಿತೀಯಾವರಣಂ ಸ್ಮೃತಂ ।
ವ್ಯೂಹಃ ಪೈತಾಮಹಃ ಪ್ರೋಕ್ತೋ ಧರ್ಮಕಾಮಾರ್ಥ ಮುಕ್ತಿದಃ ॥

ಪಿತಾಮಹಾಯಾ ವ್ಯೂಹಂ ಚ ಕಥಯಾಮಿ ಶೃಣುಷ್ವ ಮೇ ।
ವಜ್ರಾ ಚ ನಂದನಾ ಶಾವಾ ರಾವಿಕಾ ರಿಪುಭೇದಿನೀ ॥೨೨೫॥

ರೂಪಾ ಚತುರ್ಥಾ ಯೋಗಾ ಚ ಪ್ರಥಮಾಽಽ ವರಣೇ ಸ್ಮೃತಾಃ ।
ಭೂತಾ ನಾದಾ ಮಹಾಬಾಲಾ ಖರ್ಪರಾ ಚ ತಥಾ ಪರಾ ॥೨೨೬॥

ಭಸ್ಮಾ ಕಾಂತಾ ತಥಾ ವೃಷ್ಟಿ ದ್ವಿರ್ಭುಜಾ ಬ್ರಹ್ಮರೂಪಿಣೀ ।
ಸ್ಯೈ( ಸ) ಹ್ಯಾ ವೈಕಾರಿಕಾ ಜಾತಾ ಕರ್ಮ ಮೋಟೀ ತಥಾ ಪರಾ ॥

---

ದಯಾ, ವಡವಾಮುಖೀ, ಲಂಪಟಾ, ಪನ್ನಗಾದೇವೀ, ಕುಸುಮಾ, ವಿಪುಲಾಂತಕಾ, ಕೇದಾರಾ, ಕೂರ್ಮಾ, ದುರಿತಾ, ಮಂದರೋದರೀ, ಖಡ್ಗ ಚಕ್ರಾ, ಎಂದು ವಿಧಿಪೂರ್ವಕವಾಗಿ ಶಕ್ತಿಗಳು ಹೇಳಲ್ಪಟ್ಟವೆ. ಈ ರೀತಿಯಾಗಿ ಪೈತಾಮಹವ್ಯೂಹದ ದ್ವಿತೀಯಾ ವರಣವು ಹೇಳಲ್ಪಟ್ಟಿತು. ಈ ವ್ಯೂಹವು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥ ಚತುಷ್ಟಯವನ್ನು ನೀಡತಕ್ಕದ್ದಾಗಿದೆ. ಇನ್ನು ಪಿತಾಮಹಾವ್ಯೂಹವನ್ನು ಹೇಳುವೆನು ಕೇಳು.

೨೨೫. ಪಿತಾಮಹಾವ್ಯೂಹದ ಪ್ರಥಮಾವರಣದಲ್ಲಿ ವಜ್ರಾ, ನಂದನಾ, ಶಾವಾ, ರಾವಿಕಾ, ರಿಪುಭೇದಿನೀ, ರೂಪಾ, ಚತುರ್ಥಾ, ಯೋಗಾ, ಎಂಬುದಾಗಿ ಎಂಟು ಶಕ್ತಿಗಳು. ಹೀಗೆ ಪ್ರಥಮಾವರಣವು ಹೇಳಲ್ಪಟ್ಟಿತು. ದ್ವಿತಿಯಾವರಣವನ್ನು ಹೇಳುವೆನು ಕೇಳು.

೨೨೬–೨೨೮. ಪಿತಾಮಹಾವ್ಯೂಹದ ದ್ವಿತೀಯಾವರಣದಲ್ಲಿ ಭೂತಾ, ನಾದಾ, ಮಹಾಬಾಲಾ, ಖರ್ಪರಾ, ಭಸ್ಮಾ, ಕಾಂತಾ, ವೃಷ್ಟಿ, ದ್ವಿಭುಜಾ, ಬ್ರಹ್ಮರೂಪಿಣೀ, ಸ್ಯೈ (ಸ) ಹ್ಯಾ ವೈಕಾರಿಕಾ, ಜಾತಾ, ಕರ್ಮ ಮೋಟೀ, ಮಹಾಮೋಹಾ, ಮಹಾಮಾಯಾ, ಗಾಂಧಾರೀ, ಪುಷ್ಪ

**ಮಹಾಮೋಹಾ ಮಹಾಮಾಯಾ ಗಾಂಧಾರೀ ಪುಷ್ಪಮಾಲಿನೀ ।**
**ಶಬ್ದಾಪೀಚ ಮಹಾಘೋಷಾ ಘೋಡಶೈವ ತಥಾಽಂತಿಮೋ ॥೨೨೮॥**
**ಸರ್ವಾಶ್ಚ ದ್ವಿಭುಜಾ ದೇವ್ಯೋ ಬಾಲಭಾಸ್ಕರ ಸನ್ನಿಭಾಃ ।**
**ಪದ್ಮ ಶಂಖಧರಾಃ ಶಾಂತಾ ರಕ್ತಸ್ರಗ್ವಸ್ತ್ರ ಭೂಷಣಾಃ ॥೨೨೯॥**
**ಸರ್ವಾಭರಣ ಸಂಪೂರ್ಣಾ ಮುಕುಟಾದ್ಯೈ ರಲಂಕೃತಾಃ ।**
**ಮುಕ್ತಾ ಫಲ ಮಯೈ ರ್ದಿವ್ಯೈ ರತ್ನ ಚಿತ್ರೈ ರ್ಮನೋರಮೈಃ ॥**
**ವಿಭೂಷಿತಾ ಗೌರವರ್ಣಾ ಧ್ಯೇಯಾ ದೇವ್ಯಃ ಪೃಥಕ್ ಪೃಥಕ್ ।**
**ಏವಂ ಸಹಸ್ರ ಕಲಶಂ ತಾಮ್ರಜಂ ಮೃನ್ಮಯಂ ತು ವಾ ॥೨೩೦॥**

---

ಮಾಲಿನೀ, ಶಬ್ದಾಪೀ, ಮಹಾಘೋಷಾ, ಎಂಬುದಾಗಿ ಹದಿನಾರು ಶಕ್ತಿಗಳು. ಈ ಪ್ರಕಾರವಾಗಿ ಪಿತಾಮಹಾವ್ಯೂಹವು ಮುಗಿಯಿತು.

೨೨೯–೨೩೦. ಇಪ್ಪತ್ತುನಾಲ್ಕು ವ್ಯೂಹಾವರಣವನ್ನು ಹೇಳಿ ಇನ್ನು ದೇವತಾಸ್ವರೂಪವನ್ನು ಹೇಳುತ್ತಾರೆ.—

ಹಿಂದೆ ಹೇಳಿದ ಎಲ್ಲಾ ವ್ಯೂಹಗಳ ಶಕ್ತಿದೇವತೆಗಳೂ, ಎರಡು ಭುಜವುಳ್ಳವರಾಗಿಯೂ, ಬಾಲಸೂರ್ಯನಂತೆ ಪ್ರಕಾಶಮಾನರಾಗಿಯೂ, ಪದ್ಮ, ಶಂಖ, ಇವುಗಳನ್ನು ಧರಿಸಿದವರಾಗಿಯೂ, ಶಾಂತಸ್ವಭಾವವುಳ್ಳವರಾಗಿಯೂ, ರಕ್ತವರ್ಣವಾದ ಹೂಮಾಲಿಕೆ ವಸ್ತ್ರಗಳಿಂದ ಅಲಂಕೃತರಾಗಿಯೂ, ಸಮಸ್ತ ಆಭರಣಗಳಿಂದಲೂ, ಕಿರೀಟ, ಓಡ್ಯಾಣ, ಮುಂತಾದ ಆಭರಣಗಳಿಂದಲೂ, ಸಹ ಭೂಷಿತರಾಗಿಯೂ, ಮುತ್ತಿನಿಂದ ಮಾಡಿದ, ನವವಿಧವಾದ ರತ್ನಗಳುಳ್ಳ ಚಿತ್ರವರ್ಣಗಳಿಂದ ಅಲಂಕೃತವಾದ, ದಿವ್ಯವಾದ ಆಭರಣವುಳ್ಳವರಾಗಿಯೂ, ಶುಭ್ರವಾದ ವರ್ಣವುಳ್ಳವರಾಗಿಯೂ, ಸಹ ಇರುತ್ತಾರೆ. ಇಂತಹ ಶಕ್ತಿದೇವಿಯರನ್ನು ಬೇರೆ ಬೇರೆಯಾಗಿ ಧ್ಯಾನಿಸಬೇಕು.

೨೩೧–೨೩೪. ಈ ಪ್ರಕಾರವಾಗಿ ಸಹಸ್ರ ಸಂಖ್ಯಾಕವಾದ, ತಾಮ್ರದಿಂದಲಾಗಲೀ, ಮಣ್ಣಿನಿಂದಾಗಲೀ ಮಾಡಿದ, ಹಿಂದೆ ಹೇಳಿದ ಲಕ್ಷಣ

ಪೂರ್ವೋಕ್ತ ಲಕ್ಷಣೈ ರ್ಯುಕ್ತಂ ರುದ್ರಕ್ಷೇತ್ರೇ ಪ್ರತಿಷ್ಠಿತಂ ।
ಭವಾದ್ಯೈ ರ್ವಿಷ್ಣುನಾ ಪ್ರೋಕ್ತೈ ರ್ನಾಮ್ನಾಂ ಚೈವ ಸಹಸ್ರಕೈಃ ॥
ಸಂಪೂಜ್ಯ ವಿನ್ಯಸೇ ದಗ್ರೇ ಸೇಚಯೇ ದ್ಬಾಣ ವಿಗ್ರಹಂ ।
ಅಭಿಷಿಚ್ಯ ಚ ವಿಜ್ಞಾಪ್ಯ ಸೇಚಯೇ ತ್ಪೃಥಿವೀ ಪತಿಂ ॥೨೩೩॥
ಏವಂ ಸಹಸ್ರ ಕಲಶಂ ಸರ್ವಸಿದ್ಧಿ ಫಲಪ್ರದಂ ।
ಚತ್ವಾರಿಂ ಶನ್ಮಹಾವ್ಯೂಹಂ ಸರ್ವಲಕ್ಷಣ ಲಕ್ಷಿತಂ ॥೨೩೪॥
ಸರ್ವೇಷಾಂ ಕಲಶಂ ಪ್ರೋಕ್ತಂ ಪೂರ್ವವದ್ಧೇಮ ನಿರ್ಮಿತಂ ।
ಸರ್ವೇ ಗಂಧಾಂಬು ಸಂಪೂರ್ಣಾಃ ಪಂಚ ರತ್ನ ಸಮನ್ವಿತಾಃ ॥೨೩೫॥
ತಥಾ ಕನಕ ಸಂಯುಕ್ತಾ ದೇವಸ್ಯ ಘೃತಪೂರಿತಾಃ ।
ಕ್ಷೀರೇಣ ವಾಽಥ ದಧ್ನಾ ವಾ ಪಂಚ ಗವ್ಯೇನ ವಾ ಪುನಃ ॥೨೩೬॥
ಬ್ರಹ್ಮ ಕೂರ್ಚೇನ ವಾ ಮ(ಮೇ)ಧ್ಯ ಮಭಿಷೇಕೋ ವಿಧೀಯತೇ ।
ರುದ್ರಾ ಧ್ಯಾಯೇನ ರುದ್ರಸ್ಯ ನೃಪತೇಃ ಶೃಣು ಸತ್ತಮ ॥೨೩೭॥

---

ಗಳಿಂದ ಕೂಡಿದ ರುದ್ರಕ್ಷೇತ್ರದಲ್ಲಿ ಇಟ್ಟ ಕಲಶಗಳನ್ನು ಭವಾದಿ ಮಂತ್ರ ಗಳಿಂದಲೂ, ವಿಷ್ಣುವು ಹೇಳಿದ ಸಹಸ್ರ ನಾಮಗಳಿಂದಲೂ, ಪೂಜಿಸಿ ಮುಂಭಾಗದಲ್ಲಿ ಇಡಬೇಕು. ಅನಂತರ ಬಾಣಲಿಂಗವನ್ನು ಅಭಿಷೇಕ ಮಾಡಿ, ಪೃಥಿವೀಪತಿಯನ್ನು ಪೂಜಿಸಬೇಕು.

೨೩೪–೨೩೫. ಈ ರೀತಿಯಾಗಿ ಸಕಲ ಸಿದ್ಧಿಫಲಗಳನ್ನು ಕೊಡುವ, ಸಹಸ್ರಕಲಶಾಭಿಷೇಕವನ್ನು ಸಕಲ ಲಕ್ಷಣಗಳಿಂದ ಕೂಡಿದ ಇಪ್ಪತ್ತು ನಾಲ್ಕು ವ್ಯೂಹಾಭಿಷೇಕವನ್ನೂ ಮಾಡಬೇಕು. ಕಲಶಗಳು ಹಿಂದೆ ಹೇಳಿದಂತೆ ಸುವರ್ಣಮಯಗಳಾಗಿಯೂ, ಗಂಧ, ನೀರು, ಪಂಚರತ್ನ ಇವುಗಳಿಂದ ಕೂಡಿರುವುವಾಗಿಯೂ ಇರಬೇಕು.

೨೩೬–೨೩೭. ರುದ್ರ ಕಲಶಗಳು ಸುವರ್ಣಮಯಗಳಾಗಿರಬೇಕು. ರುದ್ರ ಕಲಶದ ಮಧ್ಯದಲ್ಲಿ ರುದ್ರಾಧ್ಯಾಯವನ್ನು ಹೇಳುತ್ತಾ ಬ್ರಹ್ಮ ಕೂರ್ಚದಿಂದ ಹಾಲಿನಿಂದಲಾಗಲೀ, ಮೊಸರಿನಿಂದಲಾಗಲೀ, ಪಂಚಗವ್ಯ ದಿಂದಲಾಗಲೀ, ಅಭಿಷೇಕವನ್ನು ಮಾಡಬೇಕು.

ಅಘೋರೇಭ್ಯೋಽಥ ಘೋರೇಭ್ಯೋ ಘೋರ ಘೋರ ತರೇಭ್ಯಃ ।
ಸರ್ವೇಭ್ಯಃ ಸರ್ವ ಶರ್ವೇಭ್ಯೋಃ ನಮಸ್ತೇ ಅಸ್ತು ರುದ್ರರೂಪೇಭ್ಯಃ॥
ಮಂತ್ರೇಣಾನೇನ ರಾಜಾನಂ ಸೇಚಯೇದಭಿ ಷೇಚಿತಂ ।
ಹೋಮಂ ಚ ಮಂತ್ರೇಣಾನೇನ ಅಘೋರೇಣಾ ಘ ಹಾರಿಣಾ॥೨೩೯॥
ಪ್ರಾಗಾದ್ಯಂ ದೇವ ಕುಂಡೇ ವಾ ಸ್ಥಂಡಿಲೇ ವಾ ಘೃತಾದಿಭಿಃ ।
ಸಮಿದಾಜ್ಯ ಚರುಂ ಲಾಜ ಶಾಲಿನೀವಾರ ತಂಡುಲೈಃ ॥೨೪೦॥
ಅಷ್ಟೋತ್ತರ ಶತಂ ಹುತ್ವಾ ರಾಜಾನ ಮಧಿ ವಾಸಯೇತ್ ।
ಪುಣ್ಯಾಹಂ ಸ್ವಸ್ತಿ ರುದ್ರಾಯ ಕೌ ತುಕಂ ಹೇಮ ನಿರ್ಮಿತಂ ॥೨೪೧॥
ಭಸಿತಂ ಚ ಮೃಣಾಲೇನ ಬಂಧಯೇ ದ್ದಕ್ಷಿಣೇ ಕರೇ ।
ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ ॥೨೪೨॥
ಉರ್ವಾರುಕಮಿವ ಬಂಧನಾ ನ್ಮೃತ್ಯೋರ್ಮುಕ್ಷೀ ಯಮಾಮೃ ತಾತ್।
ಮಂತ್ರೇಣಾನೇನ ರಾಜಾನಂ ಸೇಚಯೇ ದ್ವಾಽಥ ಹೋಮಯೇತ್ ॥

---

೨೩೮. ಈ ಮಂತ್ರದಿಂದ ಅಭಿಷೇಕಮಾಡಿದ ರಾಜನನ್ನು ಪ್ರೋಕ್ಷಿಸ ಬೇಕು.

೨೩೯–೨೪೦. ಪಾಪವನ್ನುಹೋಗಲಾಡಿಸುವ ಈ ಅಘೋರ ಮಂತ್ರ ದಿಂದ ಹೋಮವನ್ನು ಮಾಡಬೇಕು. ದೇವಕುಂಡ ಅಥವಾ ಸ್ಥಂಡಿಲ ದಲ್ಲಾಗಲೀ, ತುಪ್ಪ, ಸಮಿತ್ತು, ಆಜ್ಯ, ಚರು, ಅರಳು, ಅಕ್ಕಿ, ನೀವಾರ (ನವಣೆ) ಧಾನ್ಯ ಇವುಗಳಿಂದ ಅಷ್ಟೋತ್ತರಶತ (ನೂರೆಂಟು) ಹೋಮ ವನ್ನು ಮಾಡಿ ರಾಜನನ್ನು ಪೂರ್ವಾಭಿಮುಖವಾಗಿ ಕೂರಿಸಬೇಕು.

೨೪೧. ಸ್ವಸ್ತಿಪುಣ್ಯಾಹ ವಾಚನವನ್ನು ರುದ್ರಪ್ರೀತಿಗೋಸ್ಕರ ಹೇಳಿಸ ಬೇಕು. ಸುವರ್ಣಮಯವಾದ ಭಸ್ಮದಿಂದ ಲಿಪ್ತವಾದ ಕಂಕಣವನ್ನು ತಾವರೇದಂಟಿನೊಡನೆ ರಾಜನ ಬಲದ ಕೈಗೆ ಕಟ್ಟಬೇಕು.

೨೪೨–೨೪೩. ಅನಂತರ ಈ ತ್ರ್ಯಂಬಕ ಮಂತ್ರದಿಂದ ರಾಜನನ್ನು ಪ್ರೋಕ್ಷಿಸಬೇಕು. ಅಥವಾ ಹೋಮವನ್ನು ಅಥವಾ ಎರಡನ್ನೂ ಮಾಡ ಬೇಕು.

ಸರ್ವ ದ್ರವ್ಯಾಭಿ ಷೇಕಂ ಚ ಹೋಮದ್ರವ್ಯೈರ್ಯಥಾ ಕ್ರಮಂ ।
ಪ್ರಾಗಾದ್ಯಂ ಬ್ರಹ್ಮಭಿಃ ಪ್ರೋಕ್ತಂ ಸರ್ವದ್ರವ್ಯೈರ್ಯಥಾ ಕ್ರಮಂ ॥
ತತ್ಪುರುಷಾಯ ವಿದ್ಮಹೇ ಮಹಾ ದೇವಾಯ ಧೀಮಹಿ ।
ತನ್ನೋ ರುದ್ರಃ ಪ್ರಚೋದಯಾತ್ ॥೨೪೫॥
ಸ್ವಾಹಾಂತಂ ಪುರುಷೇಣೈವಂ ಪ್ರಾಕ್ಕುಂಡಂ ಹೋಮಯೇ ದ್ದ್ವಿಜಃ।
ಅಘೋರೇಣ ಚ ಯಾಮ್ಯೇ ಚ ಹೋಮಯೇ ತ್ಕೃಷ್ಣ ವಾಸಸಾ ॥
ವಾಮದೇವಾಯ ನಮೋ ಜ್ಯೇಷ್ಠಾಯ ನಮಃ ಶ್ರೇಷ್ಠಾಯ ನಮೋ
ರುದ್ರಾಯ ನಮಃ ।
ಇತ್ಯಾದ್ಯುಕ್ತ ಕ್ರಮೇಣೈವ ಜುಹುಯಾತ್ಪಶ್ಚಿಮೇ ನರಃ ॥೨೪೭॥
ಸದ್ಯೇನ ಪಶ್ಚಿಮೇ ಹೋಮಃ ಸರ್ವದ್ರವ್ಯೈರ್ಯಥಾ ಕ್ರಮಂ।
ಸದ್ಯೋ ಜಾತಂ ಪ್ರಪದ್ಯಾಮಿ ಸದ್ಯೋ ಜಾತಾಯ ವೈ ನಮಃ ॥

---

೨೪೪. ಯಥಾ ಕ್ರಮವಾಗಿ ಸರ್ವದ್ರವ್ಯಗಳಿಂದ ಅಭಿಷೇಕಗಳನ್ನೂ, ಲಾಜಾದಿ (ಅರಳುಮುಂತಾದ) ದ್ರವ್ಯಗಳಿಂದ ಪ್ರಾಗಾದಿಯಾಗಿ ಹೋಮವನ್ನು ಪಂಚಬ್ರಹ್ಮಮಂತ್ರಗಳಿಂದ ಮಾಡಬೇಕೆಂದು ಹೇಳಲ್ಪಟ್ಟಿರುತ್ತದೆ.

೨೪೫. ಹೋಮದ ವಿವರವನ್ನು ಈಗ ಹೇಳುತ್ತಾರೆ— ಬ್ರಾಹ್ಮಣನು ಮೇಲೆ ಹೇಳಿದ "ತತ್ಪುರುಷಾಯ" ಎಂಬ ಮಂತ್ರದಿಂದ ಸ್ವಾಹಾಂತವಾಗಿ ಪೂರ್ವದಿಕ್ಕಿನ ಕುಂಡದಲ್ಲಿ ಹೋಮಮಾಡಬೇಕು.

೨೪೬. ಕೃಷ್ಣವರ್ಣವುಳ್ಳ ವಸ್ತ್ರವನ್ನು ಧರಿಸಿದ ಆಚಾರ್ಯನು "ಅಘೋರೇಭ್ಯಃ" ಎಂಬ ಮಂತ್ರದಿಂದ ಸ್ವಾಹಾಂತವಾಗಿ ದಕ್ಷಿಣ ಕುಂಡದಲ್ಲಿ ಹೋಮವನ್ನು ಮಾಡಬೇಕು.

೨೪೭. ಈ "ವಾಮದೇವಾಯ" ಎಂಬ ಮಂತ್ರದಿಂದ ಸ್ವಾಹಾಂತವಾಗಿ ಪಶ್ಚಿಮದಿಕ್ಕಿನ ಕುಂಡದಲ್ಲಿ ಹೋಮವನ್ನು ಕ್ರಮವಾಗಿ ಮಾಡಬೇಕು.

೨೪೮–೨೪೯. ಪ್ರಯೋಗದಲ್ಲಿ ಚತುರನಾದ ಆಚಾರ್ಯನು ಮೇಲೆ

ಆಗ್ನೇಯ್ಯಾಂ ಚ ವಿಧಾನೇನ ಋಚಾ ರೌದ್ರೇಣ ಹೋಮಯೇತ್ ।
ಜಾತವೇದಸೇ ಸುನವಾಮ ಸೋಮ ಮಿತ್ಯಾದಿನಾ ತತಃ ॥

ನೈಋರ್ತೇ ಪೂರ್ವವದ್ದ್ರವ್ಯೈಃ ಸರ್ವೈ ರ್ಹೋಮೋ ವಿಧೀಯತೇ॥
ಮಂತ್ರೇಣಾ ನೇನ ದಿವ್ಯೇನ ಸರ್ವ ಸಿದ್ಧಿ ಕರೇಣ ಚ।
ನಿಮಿ ನಿಶಿ ದಿಶ ಸ್ವಾಹಾ ಖಡ್ಗ ರಾಕ್ಷಸ ಭೇದನ ॥೨೫೧॥

ರುಧಿ(ಚಿ)ರಾಜ್ಯಾದ್ರ(ರ್ದ್ರ) ನೈಋತ್ಯೈ ಸ್ವಾಹಾ ನಮಃ ಸ್ವಧಾ ನಮಃ।
ಯಥೇಷ್ಟಂ ವಿಧಿನಾ ದ್ರವ್ಯೈ ರ್ಮಂತ್ರೇ ಣಾನೇನ ಹೋಮಯೇತ್ ॥

ಯಾಮ್ಯಾಂ ಹಿ ವಿವಿಧೈ ರ್ದ್ರವ್ಯೈ ರೀಶಾನೇ ನ ದ್ವಿಜೋತ್ತಮಾಃ ।
ಈಶಾನ್ಯಾ ಮಥ ಪೂರ್ವೋಕ್ತೈ ರ್ದ್ರವ್ಯೈ ರ್ಹೋಮ ಮಥಾ ಚರೇತ್

---

ಹೇಳಿದ ಮಂತ್ರದಿಂದ ಸ್ವಾಹಾಂತವಾಗಿ ಸರ್ವದ್ರವ್ಯಗಳಿಂದ ಯಥಾ ಶಾಸ್ತ್ರವಾಗಿ ದಕ್ಷಿಣ ಉತ್ತರದಿಕ್ಕಿನ ಕುಂಡದಲ್ಲಿ ಹೋಮಮಾಡಬೇಕು.

೨೫೦. ಇನ್ನು ಆಗ್ನೇಯಾದಿ ವಿದಿಕ್ಕಿನ ಹೋಮವನ್ನು ಹೇಳುತ್ತಾನೆ :— ವೇದ ಎಂದರೆ, "ಜಾತವೇದಸೇ" ಎಂಬ ರುದ್ರದೇವತಾಕವಾದ ಋಕ್ಕಿನಿಂದಲೂ, "ಯೋರುದ್ರೋ ಆಗ್ನೌಯೋ" ಎಂಬ ಮಂತ್ರದಿಂದಲೂ, ಸ್ವಾಹಾಂತವಾಗಿ ಹೋಮವನ್ನು ಮಾಡಬೇಕು.

೨೫೧–೨೫೨. ಹಿಂದೆ ಹೇಳಿದ ಕ್ರಮದಲ್ಲಿ ಸರ್ವ ದ್ರವ್ಯಗಳಿಂದ ಸಕಲ ಸಿದ್ಧಿಗಳನ್ನೂ ಕೊಡತಕ್ಕ, ದಿವ್ಯವಾದ, ಮೇಲೆ ಹೇಳಿದ "ನಿಮಿನಿಶಿ" ಎಂಬ ಮಂತ್ರದಿಂದ ನೈಋತ್ಯದಿಕ್ಕಿನ ಕುಂಡದಲ್ಲಿ ವಿಧಿಗನುಸಾರವಾಗಿ ಹೋಮಮಾಡಬೇಕು. ಅಲ್ಲದೆ ರಕ್ತದಿಂದ ಅಥವಾ ಒಳ್ಳೆಯ ತುಪ್ಪದಿಂದ ನೆನೆದು ಇರುವ ದ್ರವ್ಯಗಳಿಂದಲೂ, ಹೋಮವನ್ನು ಮಾಡಬೇಕು.

೨೫೩. ಈಶಾನ ಮಂತ್ರದಿಂದ ಲಾಜಾದಿ ನಾನಾ ವಿಧವಾದ ದ್ರವ್ಯಗಳಿಂದ ವಾಯುವ್ಯ ದಿಕ್ಕಿನಲ್ಲಿ ಹೋಮಮಾಡಬೇಕು. ಅನಂತರದಲ್ಲಿ ಪೂರ್ವೋಕ್ತವಾದ ಲಾಜ ಸಮಿದಾದಿದ್ರವ್ಯಗಳಿಂದ ಈಶಾನ್ಯದಿಕ್ಕಿನಲ್ಲಿ ಹೋಮವನ್ನು ಮಾಡಬೇಕು.

ಈಶಾನಾಯ ಕದ್ರುದ್ರಾಯ ಪ್ರಚೇತಸೇ ತ್ರ್ಯಂಬಕಾಯ ಶರ್ವಾಯ
ತನ್ನೋ ರುದ್ರಃ ಪ್ರಚೋದಯಾತ್ ॥೨೫೪॥

ಪ್ರಧಾನಂ ಪೂರ್ವ ವದ್ದ್ರವ್ಯೈ ರೀಶಾನೇನ ದ್ವಿಜೋತ್ತಮಾಃ ।
ಪ್ರತಿದ್ರವ್ಯಂ ಸಹಸ್ರೇಣ ಜುಹುಯಾ ನ್ನೃಪ ಸನ್ನಿಧೌ ॥೨೫೫॥

ಸ್ವಯಂ ವಾ ಜುಹುಯಾದಗ್ನೌ ಭೂಪತಿಃ ಶಿವ ವತ್ಸಲಃ ।
ಈಶಾನಃ ಸರ್ವ ವಿದ್ಯಾನಾ ಮೀಶ್ವರಃ
ಸರ್ವಭೂತಾನಾಂ ಬ್ರಹ್ಮಾಽಧಿ ಪತಿಃ ।
ಬ್ರಹ್ಮಣೋಽಧಿಪತಿಃ ಬ್ರಹ್ಮಾ ಶಿವೋ ಮೇ ಅಸ್ತು ಸದಾ ಶಿವೋಂ ॥

ಪ್ರಾಯಶ್ಚಿತ್ತ ಮಘೋರೇಣ ಶೇಷಂ ಸಾಮಾನ್ಯ ಮಾಚರೇತ್ ।
ಕೃತಾಧಿ ವಾಸಂ ರಾಜಾನಂ ಶಂಖ ಭೇರ್ಯಾದಿ ನಿಸ್ವನೈಃ ॥೨೫೭॥

ಜಯಶಬ್ದ ರವೈ ರ್ದಿವ್ಯೈ ರ್ವೇದ ಘೋಷೈಃ ಸು ಶೋಭನೈಃ ।
ಸೇಚಯೇ ತ್ಕೂರ್ಚ ತೋಯೇನ ಪ್ರೋಕ್ಷಯೇದ್ವಾ ನೃಪೋತ್ತಮಂ

---

೨೫೪. ಈ ಮಂತ್ರಗಳಿಂದಲೂ ಈಶಾನ್ಯದಿಕ್ಕಿನಲ್ಲಿ ಹೋಮ ಮಾಡಬೇಕು.

೨೫೫–೨೫೬. ಓ ಬ್ರಾಹ್ಮಣೋತ್ತಮರೇ, ರಾಜನ ಸಮೀಪದಲ್ಲಿ ಪ್ರತಿಯೊಂದು ದ್ರವ್ಯವನ್ನೂ ಸಹ ಸಹಸ್ರ ಸಂಖ್ಯಾಕವಾಗಿ ಹಿಂದೆ ಹೇಳಿದ ಕ್ರಮದಿಂದಲೂ, "ಈಶಾನಃ" ಎಂಬ ಮಂತ್ರದಿಂದ ಪ್ರಧಾನ ಹೋಮವನ್ನೂ ಮಾಡಬೇಕು. ಅಥವಾ ಶಿವಭಕ್ತನಾದ ರಾಜನು ತಾನೇ ಬೇಕಾದರೂ ಹೋಮ ಮಾಡಬಹುದು.

ಅಘೋರಮಂತ್ರದಿಂದ ಪ್ರಾಯಶ್ಚಿತ್ತ ಶೇಷ ಹೋಮಗಳನ್ನೂ ಸಾಮಾನ್ಯ ನಿಯಮದಂತೆಯೇ ಮಾಡಬೇಕು.

೨೫೭–೨೫೮. ಹೊಸ ವಸ್ತ್ರವನ್ನು ಧರಿಸಿದ ರಾಜನಿಗೆ ದಿವ್ಯವಾದ ಶಂಖ, ಭೇರೀ, ಇವುಗಳ ಧ್ವನಿಗಳಿಂದಲೂ, ಜಯಶಬ್ದದಿಂದಲೂ, ಶೋಭಿಸುವ ವೇದಘೋಷಗಳಿಂದಲೂ ಕೂಡಿ ಅಭಿಷೇಕವನ್ನು ಮಾಡಬೇಕು. ಅಥವಾ ಕೂರ್ಚದಿಂದ ಪ್ರೋಕ್ಷಿಸಬಹುದು.

ರುದ್ರಾಧ್ಯಾಯೇನ ವಿಧಿನಾ ರುದ್ರ ಭಸ್ಮಾಂಗ ಧಾರ(ರಿ)ಣಂ ।
ಶಂಖ ಚಾಮರ ಭೇರ್ಯಾದ್ಯಂ ಛತ್ರಂ ಚಂದ್ರ ಸಮಪ್ರಭಂ ॥೨೫೯॥
ಶಿಬಿಕಾಂ ವೈಜಯಂತೀಂ ಚ ಸಾಧಯೇನ್ನೃಪತೇಃ ಶುಭಾಂ ।
ರಾಜ್ಯಾಭಿಷೇಕ ಯುಕ್ತಾಯ ಕ್ಷತ್ರಿಯಾಯೇಶ್ವರಾಯ ವಾ ॥೨೬೦॥
ನೃಪ ಚಿಹ್ನಾನಿ ನಾನ್ಯೇಷಾಂ ಕ್ಷತ್ರಿಯಾಣಾಂ ವಿಧೀಯತೇ ।
ಪ್ರಮಾಣಂ ಚೈವ ಸರ್ವೇಷಾಂ ದ್ವಾದಶಾಂಗುಲ ಮುಚ್ಯತೇ ॥೨೬೧॥
ಪಲಾಶೋದುಂಬರಾಶ್ವತ್ಥ ವಟಾಃ ಪೂರ್ವಾದಿತಃ ಕ್ರಮಾತ್ ।
ತೋರಣಾದ್ಯಾನಿ ವೈ ತತ್ರ ಪಟ್ಟಮಾತ್ರೇಣ ಪಟ್ಟಿಕಾಃ ॥೨೬೨॥
ಅಷ್ಟಮಾಂಗುಲ ಸಂಯುಕ್ತ ದರ್ಭಮಾಲಾ ಸಮಾವೃತಂ ।
ದಿಗ್ಧ್ವಜಾಷ್ಟಕ ಸಂಯುಕ್ತಂ ದ್ವಾರ ಕುಂಭೈಃ ಸುಶೋಭನಂ ॥೨೬೩॥

---

೨೫೯–೨೬೦. ಶಾಸ್ತ್ರೋಕ್ತವಾದ ವಿಧಿಯಿಂದ ರುದ್ರಾಧ್ಯಾಯದಿಂದ ರಾಜನ ಸಂಬಂಧಿಯಾದ, ರುದ್ರಭಸ್ಮಾಂಗ ಧಾರಿಯಾದ ಶಂಖ, ಚಾಮರ ಭೇರ್ಯಾದಿಗಳನ್ನೂ, ಚಂದ್ರನಂತೆ ಪ್ರಕಾಶ ಮಾನವಾದ ಛತ್ರಿಯನ್ನೂ, ಪಲ್ಲಕ್ಕಿಯನ್ನೂ, ಶುಭ್ರವಾದ ಪತಾಕೆಯನ್ನೂ, ಸಂಪಾದಿಸಬಹುದು. ರಾಜ್ಯದಲ್ಲಿ ಅಭಿಷಿಕ್ತನಾದ ಕ್ಷತ್ರಿಯನಿಗೆ ಮಾತ್ರ ರಾಜಚಿಹ್ನೆಗಳು ಇರಬೇಕು. ಬೇರೇ ಕ್ಷತ್ರಿಯರಿಗಿಲ್ಲವು.

೨೬೧. ಪೂರ್ವಾದಿಯಾಗಿ ಕ್ರಮವಾಗಿ ಹನ್ನೆರಡು ಅಂಗುಲ ಪ್ರಮಾಣವುಳ್ಳ ಪಲಾಶ, ಅತ್ತಿ, ಅಶ್ವತ್ಥ, ವಟ, ಇವುಗಳ ಶಾಖೆಗಳನ್ನು ಹೋಮ ಮಂಟಪದಲ್ಲಿ ಕಟ್ಟಬೇಕು.

೨೬೨. ಆ ಅಭಿಷೇಕ ಮಂಟಪದಲ್ಲಿ ತೋರಣಗಳನ್ನೂ ರೇಷ್ಮೆ ವಸ್ತ್ರದ ಮೇಲ್ಕಟ್ಟುಗಳನ್ನೂ ಕಟ್ಟಬೇಕು.

೨೬೩. ಎಂಟಂಗುಲ ಪ್ರಮಾಣವುಳ್ಳ ದರ್ಭಮಾಲೆಯುಳ್ಳ, ಎಂಟು ದಿಕ್ಕುಗಳಲ್ಲಿಯೂ ಧ್ವಜಗಳಿರುವ, ದ್ವಾರದಲ್ಲಿ ಮಂಗಳಾರ್ಥವಾಗಿ ಇಟ್ಟಿರುವ ಪೂರ್ಣಕುಂಭಗಳಿಂದ ಶೋಭಿಸುವ, ಚಿನ್ನದ ತೋರಣಗಳುಳ್ಳ, ಮಂಟಪವನ್ನು ಮಾಡಿ ಅಲ್ಲಿ ರಾಜನಿಗೆ ಸ್ನಾನವನ್ನು ಮಾಡಿಸಬೇಕು.

ಹೇಮತೋರಣ ಕುಂಭೈಶ್ಚ ಭೂಷಿತಂ ಸ್ನಾಪಯೇನ್ನೃಪಂ ।
ಪೂರ್ವೋಪರಿ ಸಮಾನೀತಂ ಶಿವ ಕುಂಭೇನ ಸೇಚಯೇತ್ ॥೨೬೪॥

ತನ್ಮಹೇಶಾಯ ವಿದ್ಮಹೇ ವಾಗ್ವಿಶುದ್ಧಾಯ ಧೀಮಹಿ ।
ತನ್ನಃ ಶಿವಃ ಪ್ರಚೋದಯಾತ್ ॥೨೬೫॥

ಮಂತ್ರೇಣಾನೇನ ವಿಧಿನಾ ವರ್ಧನ್ಯಾ ಗೌರಿಗೀತಯಾ ।
ರುದ್ರಾಧ್ಯಾಯೇನ ವಾ ಸರ್ವ ಮಘೋರಾಯಾ ಥವಾ ಪುನಃ ॥

ದಿವ್ಯೈರಾಭರಣೈಃ ಶುಕ್ಲೈಃ ಮುಕುಟಾದ್ಯೈಃ ಸುಕಲ್ಪಿತೈಃ ।
ಕ್ಷೌಮ ವಸ್ತ್ರೈಶ್ಚ ರಾಜಾನಂ ತೋಷಯೇನ್ನಿಯತಂ ಶನೈಃ ॥೨೬೭॥

ಅಷ್ಟ ಷಷ್ಟಿಪಲೇನೈವ ಹೇಮ್ನಾ ಕೃತ್ವಾ ಸುದರ್ಶನಂ ।
ನವರತ್ನೈ ರಲಂಕೃತ್ಯ ದದ್ಯಾದ್ವೈ ದಕ್ಷಿಣಾಂ ಗುರೋಃ ॥೨೬೮॥

---

೨೬೪. ಇದೆಲ್ಲವೂ ಆದಮೇಲೆ ಶಿವಕುಂಭಜಲದಿಂದ ಕುಳಿತುಕೊಂಡಿರುವ ಆ ರಾಜನನ್ನೂ ಪ್ರೋಕ್ಷಿಸಬೇಕು.

೨೬೫–೨೬೬. "ತನ್ಮಹೇಶಾಯ" ಎಂಬ ಮೇಲೆಹೇಳಿದ ಮಂತ್ರದಿಂದಲೂ, ಶುದ್ಧಿಮಂತ್ರದಿಂದಲೂ, ಗೌರೀಗಾಯತ್ರಿಯಿಂದಲೂ, ರುದ್ರಾಧ್ಯಾಯದಿಂದಲೂ, ಅಥವಾ ಅಘೋರ ಮಂತ್ರದಿಂದಲೂ, ಸಹ ರಾಜನನ್ನು ಶಿವಕಲಶ ಜಲದಿಂದ ಪ್ರೋಕ್ಷಿಸಬೇಕು.

೨೬೭. ದಿವ್ಯವಾದ ಶುಭ್ರವಾದ ಕಿರೀಟಾದಿ ಆಭರಣಗಳಿಂದಲೂ, ರೇಷ್ಮೆವಸ್ತ್ರಗಳಿಂದಲೂ ಸಹ ರಾಜನನ್ನು ಅಲಂಕರಿಸಿ ಸಂತೋಷಗೊಳಿಸಬೇಕು. ಎಂದರೆ ಅವುಗಳನ್ನು ಕೊಟ್ಟು ಅವನ ಮನಸ್ಸಿಗೆ ಸಂತೋಷವು ಉಂಟಾಗುವಂತೆ ಮಾಡಬೇಕೆಂದು ಅಭಿಪ್ರಾಯವು.

೨೬೮. ಅರವತ್ತು ತೊಲ ತೂಕದ ಚಿನ್ನದ ಸುದರ್ಶನವನ್ನು ಮಾಡಿಸಿ ನವರತ್ನಗಳಿಂದ ಅದನ್ನು ಅಲಂಕರಿಸಿ, ಗುರುವಿಗೆ ದಕ್ಷಿಣೆಯನ್ನಾಗಿ ಆ ಸುದರ್ಶನವನ್ನು ಕೊಡಬೇಕು.

ದಶಧೇನು ಸವಸ್ತ್ರಂ ಚ ದದ್ಯಾತ್ ಕ್ಷೇತ್ರಂ ಸು ಶೋಭನಂ ।
ಶತ ದ್ರೋಣ ತಿಲಂ ಚೈವ ಶತದ್ರೋಣಾಂಶ್ಚ ತಂಡುಲಾನ್ ॥೨೬೯॥

ಶಯನಂ ವಾಹನಂ ಶಯ್ಯಾಂ ಸೋಪಧಾನಾಂ ಪ್ರದಾಪಯೇತ್ ।
ಯೋಗಿನಾಂ ಚೈವ ಸರ್ವೇಷಾಂ ತ್ರಿಂಶತ್ಪಲ ಮುದಾಹೃತಂ ॥೨೭೦॥

ಅಶೇಷಾಂಶ್ಚ ತದರ್ಧೇನ ಶಿವಭಕ್ತಾಂಸ್ತದ ರ್ಧತಃ ।
ಮಹಾ ಪೂಜಾಂ ತತಃ ಕುರ್ಯಾನ್ಮಹಾ ದೇವಸ್ಯ ವೈ ನೃಪಃ ॥೨೭೧॥

ಏವಂ ಸಮಾಸತಃ ಪ್ರೋಕ್ತಂ ಜಯಸೇಚನ ಮುತ್ತಮಂ ।
ಏವಂ ಪುರಾಽಭಿಷಿಕ್ತಸ್ತು ಶಕ್ರಃ ಶಕ್ರತ್ವಮಾಗತಃ ॥೨೭೨॥

ಬ್ರಹ್ಮಾ ಬ್ರಹ್ಮತ್ವ ಮಾಪನ್ನೋ ವಿಷ್ಣು ರ್ವಿಷ್ಣುತ್ವ ಮಾಗತಃ ।
ಅಂಬಿಕಾ ಅಂಬಿಕಾತ್ವಂ ಚ ಸೌಭಾಗ್ಯ ಮತುಲಂ ತಥಾ ॥೨೭೩॥

---

೨೬೯. ಸುವಸ್ತ್ರಗಳಿಂದ ಕೂಡಿದ ಹಾಲುಕರೆಯುತ್ತಿರುವ ಹತ್ತು ಗೋವುಗಳನ್ನೂ, ಚೆನ್ನಾಗಿ ಬೆಳೆ ಬೆಳೆಯುವ ಭೂಮಿಯನ್ನೂ, ನೂರು ಕೊಳಗ ಎಳ್ಳು ಮತ್ತು ಅಕ್ಕಿಯನ್ನೂ, ದಾನಮಾಡಬೇಕು.

೨೭೦–೨೭೧. ಮಂಚ, ವಾಹನ, (ಕುದುರೆ ಮುಂತಾದುವು) ಹಾಸಿಗೆ, ತಲೆದಿಂಬು, ಇವುಗಳನ್ನೆಲ್ಲವನ್ನೂ ದಾನಡಮಾಬೇಕು. ಸಮುಸ್ತ ಯೋಗಿಗಳಿಗೂ ಮುವ್ವತ್ತು ತೊಲಾ ಚಿನ್ನವನ್ನೂ, ಇತರ ಜನರಿಗೆ ಹದಿನೈದು ತೊಲಾ ಚಿನ್ನವನ್ನೂ, ಶಿವಭಕ್ತರಿಗೆ ಅದರಲ್ಲಿ ಅರ್ಧವಾದ ಏಳುವರೆ ತೊಲಾ ಚಿನ್ನವನ್ನೂ ದಾನಮಾಡಬೇಕು. ಅನಂತರ ರಾಜನು ಶಿವನ ಮಹಾ ಪೂಜೆಯನ್ನು ಮಾಡಬೇಕು.

೨೭೨. ಈ ರೀತಿಯಾಗಿ ಉತ್ತಮವಾದ ಜಯಾಭಿಷೇಕವು ಸಂಕ್ಷೇಪವಾಗಿ ಹೇಳಲ್ಪಟ್ಟಿತು. ಇದೇರೀತಿಯಾಗಿ ಪೂರ್ವಕಾಲದಲ್ಲಿ ಇಂದ್ರನು ಅಭಿಷೇಕಮಾಡಿಕೊಂಡು ಇಂದ್ರಪದವಿಯನ್ನು ಪಡೆದನು.

೨೭೩–೨೭೪. ಇದೇ ಅಭಿಷೇಕದಿಂದ ಬ್ರಹ್ಮನು ತನ್ನ ಪದವಿಯನ್ನೂ, ವಿಷ್ಣುವು ತನ್ನ ಅಧಿಕಾರವನ್ನೂ, ಅಂಬಿಕೆಯು ತನ್ನ ಅಂಬಿಕಾತ್ವವನ್ನೂ,

ಸಾವಿತ್ರೀ ಚ ತಥಾ ಲಕ್ಷ್ಮೀರ್ದೇವೀ ಕಾತ್ಯಾಯನೀ ತಥಾ ।
ನಂದಿನಾಥ ಪುರಾ ಮೃತ್ಯೂ ರುದ್ರಾಧ್ಯಾಯೇನ ವೈ ಜಿತಃ ॥೨೭೪॥

ಅಭಿಷಿಕ್ತೋಽಸುರಃ ಪೂರ್ವಂ ತಾರಕಾಖ್ಯೋ ಮಹಾಬಲಃ ।
ವಿದ್ಯುನ್ಮಾಲೀ ಹಿರಣ್ಯಾಕ್ಷೋ ವಿಷ್ಣುನಾ ವೈ ವಿನಿರ್ಜಿತಃ ॥೨೭೫॥

ನೃಸಿಂಹೇನ ಪುರಾ ದೈತ್ಯೋ ಹಿರಣ್ಯ ಕಶಿಪುರ್ಹತಃ ।
ಸ್ಕಂದೇನ ತಾರಕಾದ್ಯಾಶ್ಚ ಕೌಶಿಕ್ಯಾ ಚ ಪುರಾಽಂಬಯಾ ॥೨೭೬॥

ಸುಂದೋಪಸುಂದ ತನಯೌ ಜಿತೌ ದೈತ್ಯೇಂದ್ರ ಪೂಜಿತೌ ।
ವಸುದೇವ ಸುದೇವೌ ತು ನಿಹತೌ ಕೃತ ಕೃತ್ಯಯಾ ॥೨೭೭॥

ಸ್ನಾನ ಯೋಗೇನ ವಿಧಿನಾ ಬ್ರಹ್ಮಣಾ ನಿರ್ಮಿತೇನ ತು ।
ದೈವಾಸುರೇ ದಿತಿಸುತಾ ಜಿತಾ ದೇವೈ ರನಿಂದಿತಾಃ ॥೨೭೮॥

---

ಸಾವಿತ್ರೀ, ಲಕ್ಷ್ಮೀದೇವೀ, ಕಾತ್ಯಾಯನೀ, ಇವರೆಲ್ಲರೂ ಹೆಚ್ಚಾದ ಸೌಭಾಗ್ಯವನ್ನೂ ಹೊಂದಿದರು. ಪೂರ್ವದಲ್ಲಿ ನಂದಿಯು ರುದ್ರಾಧ್ಯಾಯ ಜಪದಿಂದ ಮೃತ್ಯುವನ್ನೂ ಸಹ ಜಯಿಸಿದನು.

೨೭೫. ಪೂರ್ವಕಾಲದಲ್ಲಿ ತಾರಕನೆಂಬ ಮಹಾಸುರನು ವಿದ್ಯುನ್ಮಾಲಿಯೂ ಸಹ ಹೀಗೆ ಅಭಿಷಿಕ್ತರಾಗಿ ದೇವತೆಗಳಿಂದಲೂ ಜಯಿಸಲಸಾಧ್ಯರಾದರು. ವಿಷ್ಣುವೂ ಕೂಡ ಈ ಸ್ನಾನಯೋಗದಿಂದ ಹಿರಣ್ಯಾಕ್ಷನನ್ನು ಸಂಹರಿಸಿದನು.

೨೭೬. ನೃಸಿಂಹನು ಅಭಿಷೇಕಮಾಹಾತ್ಮ್ಯದಿಂದ ಹಿರಣ್ಯಕಶಿಪುವೆಂಬ ದೈತ್ಯನನ್ನೂ, ಷಣ್ಮುಖನು ಈ ಅಭಿಷೇಕದಿಂದ ತಾರಕಾದಿ ರಾಕ್ಷಸರುಗಳನ್ನೂ ಸಂಹರಿಸಿದರು.

೨೭೭. ಕೌಶಿಕೀ ಎಂಬ ದೇವಿಯು ಈ ಅಭಿಷೇಕದಿಂದ ಕೃತಾರ್ಥಳಾಗಿ ದೈತ್ಯೇಂದ್ರನಿಂದ ಪೂಜಿಸಲ್ಪಟ್ಟ ಸುಂದೋಪಸುಂದ ಪುತ್ರರಾದ ವಸುದೇವ ಮತ್ತು ಸುದೇವರೆಂಬುವರನ್ನು ನಾಶಮಾಡಿದಳು.

೨೭೮. ಬ್ರಹ್ಮನಿಂದ ನಿರ್ಮಿತವಾದ ಈ ಅಭಿಷೇಕವಿಧಿಯಿಂದ ಅಭಿಷಿಕ್ತರಾದ ದೇವತೆಗಳು ಪೂತರಾಗಿ ಯುದ್ಧದಲ್ಲಿ ದಿತಿಪುತ್ರರಾದ ರಾಕ್ಷಸರುಗಳನ್ನು ಜಯಿಸಿದರು.

ಸ್ನಾತ್ವೈವ ಸರ್ವ ಭೂಪೈಶ್ಚ ತಥಾಽನ್ಯೈರಪಿ ಭೂಸುರೈಃ ।
ಪ್ರಾಪ್ತಾಶ್ಚ ಸಿದ್ಧಯೋ ದಿವ್ಯಾ ನಾತ್ರಕಾರ್ಯಾ ವಿಚಾರಣಾ ॥೨೭೯॥
ಅಹೋಽಭಿಷೇಕ ಮಾಹಾತ್ಮ್ಯ ಮಹೋ ಶುದ್ಧ ಸುಭಾಷಿತಂ ।
ಯೇನೈವ ಮಭಿಷಿಕ್ತೇನ ಸಿದ್ಧೈ ರ್ಮೃತ್ಯು ರ್ಜಿತ ಸ್ತ್ವಿತಿ ॥೨೮೦॥
ಕಲ್ಪಕೋಟಿ ಶತೇನಾಪಿ ಯತ್ಪಾಪಂ ಸಮುಪಾರ್ಜಿತಂ ।
ಸ್ನಾತ್ವೈವಂ ಮುಚ್ಯತೇ ರಾಜಾ ಸರ್ವ ಪಾಪೈ ರ್ನ ಸಂಶಯಃ ॥
ವ್ಯಾಧಿತೋ ಮುಚ್ಯತೇ ರಾಜಾ ಕ್ಷಯ ಕುಷ್ಠಾದಿಭಿಃ ಪುನಃ ।
ಸ ನಿತ್ಯಂ ವಿಜಯೀ ಭೂತ್ವಾ ಪುತ್ರ ಪೌತ್ರಾದಿಭಿ ರ್ಯುತಃ ॥೨೮೨॥
ಜನಾನುರಾಗ ಸಂಪನ್ನೋ ದೇವರಾಜ ಇವಾಪರಃ ।
ಮೋದತೇ ಪಾಪ ಹೀನಶ್ಚ ಪ್ರಿಯಯಾ ಧರ್ಮ ನಿಷ್ಠಯಾ ॥೨೮೩॥

---

೨೭೯. ಇದೇರೀತಿಯಾಗಿ ಅನೇಕ ರಾಜರು ಬ್ರಾಹ್ಮಣರಿಂದ ಅಭಿಷಿಕ್ತರಾಗಿ ದೇವತಾಸಂಬಂಧವಾದ ಸಿದ್ಧಿಗಳನ್ನೂ ಸಹ ಹೊಂದಿರುತ್ತಾರೆ. ಈ ವಿಷಯದಲ್ಲಿ ವಿಚಾರಮಾಡಬೇಕಾದುದಿಲ್ಲ.

೨೮೦. ಈ ಅಭಿಷೇಕ ಮಾಹಾತ್ಮ್ಯೆಯು ಬಹಳ ಆಶ್ಚರ್ಯಕರವಾದುದು. ಈ ಉಪದೇಶವೂ ಸಹ ಬಹಳ ಶುದ್ಧವಾಗಿದೆ. ಏಕೆಂದರೆ ಈ ಅಭಿಷೇಕದಿಂದ ಸಿದ್ಧರಾದವರು ಮೃತ್ಯುವನ್ನೂ ಕೂಡ ಜಯಿಸಿರುತ್ತಾರೆ.

೨೮೧. ರಾಜನು ಈ ಅಭಿಷೇಕವನ್ನು ಮಾಡಿಕೊಂಡರೆ ಅನೇಕ ಕೋಟಿ ಯುಗಗಳಲ್ಲಿ ಮಾಡಿದ ಪಾಪಗಳೂ ಸಹ ನಿವೃತ್ತವಾಗುತ್ತವೆ. ಈ ವಿಷಯದಲ್ಲಿ ಸಂದೇಹವು ಬೇಕಾಗಿರುವುದಿಲ್ಲ.

೨೮೨-೨೮೩. ಈ ಅಭಿಷೇಕಮಾಡಿಕೊಂಡ ರಾಜನು ಕ್ಷಯಕುಷ್ಠಾದಿ ಮಹಾರೋಗಗಳಿಂದ ವಿಮುಕ್ತನಾಗುತ್ತಾನೆ. ಮತ್ತು ಯಾವಾಗಲೂ ಎಲ್ಲಾ ವಿಷಯಗಳಲ್ಲಿಯೂ, ಜಯಶೀಲನಾಗಿಯೂ, ಮಕ್ಕಳು ಮೊಮ್ಮಕ್ಕಳುಗಳಿಂದ ಕೂಡಿದವನಾಗಿಯೂ, ಜನರ ವಿಶ್ವಾಸಕ್ಕೆ ಪಾತ್ರನಾಗಿಯೂ, ಪಾಪವಿಲ್ಲದವನಾಗಿಯೂ, ಧರ್ಮಪರಾಯಣಳಾದ ತನ್ನ ಧರ್ಮಪತ್ನಿಯೊಂದಿಗೆ, ಎರಡನೆಯ ಇಂದ್ರನಂತೆ, ಸಂತೋಷವುಳ್ಳವನಾಗುವನು.

ಉದ್ದೇಶಮಾತ್ರಂ ಕಥಿತಂ ಫಲಂ ಪರಮ ಶೋಭನಂ ।
ನೃಪಾಣಾ ಮುಪಕಾರಾಯ ಸ್ವಾಯಂಭುವ ಮನೋ ಮಯಾ ॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ಅಭಿಷೇಕ ವಿಧಿರ್ನಾಮ
ಸಪ್ತವಿಂಶೋಽಧ್ಯಾಯಃ ಸಮಾಪ್ತಃ

---

೨೮೪. ಓ ಸ್ವಾಯಂಭುವಮನುವೇ, ಕ್ಷತ್ರಿಯರಾದ ರಾಜರ ಉಪಕಾರಕ್ಕೋಸ್ಕರವಾಗಿ ನನ್ನಿಂದ ಅತ್ಯಂತ ಶೋಭನವಾದ ಈ ಫಲವು ಸ್ವಲ್ಪ ಮಾತ್ರ ಹೇಳಲ್ಪಟ್ಟಿತು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಅಭಿಷೇಕ ವಿಧಿಯೆಂಬ
ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
## ಅಷ್ಟಾವಿಂಶೋಽಧ್ಯಾಯಃ

**॥ ಸೂತ ಉವಾಚ ॥**

**ಸ್ನಾತ್ವಾ ದೇವಂ ನಮಸ್ಕೃತ್ಯ ದೇವದೇವ ಮುಮಾಪತಿಂ ।**
**ದಿವ್ಯೇನ ಚಕ್ಷುಷಾ ರುದ್ರಂ ನೀಲಲೋಹಿತ ಮೀಶ್ವರಂ ॥ ೧ ॥**
**ದೃಷ್ಟ್ವಾ ತುಷ್ಟಾವ ವರದಂ ರುದ್ರಾಧ್ಯಾಯೇನ ಶಂಕರಂ ।**
**ದೇವೋಽಪಿ ತುಷ್ಟ್ಯಾ ನಿರ್ವಾಣಂ ರಾಜ್ಯಾಂತೇ ಕರ್ಮಣೈವ ತು ॥ ೨ ॥**
**ತವಾಸ್ತೀತಿ ಸಕೃ ಚ್ಯೋಕ್ತ್ವಾ ತತ್ರೈವಾಂತರ ಧೀಯತ ।**
**ಸ್ವಾಯಂ ಭುವೋ ಮನುರ್ದೇವಂ ನಮಸ್ಕೃತ್ಯ ವೃಷಧ್ವಜಂ ॥ ೩ ॥**

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯವು.

೧. ಸೂತಮಹರ್ಷಿಯು ಮಹಾದಾನಗಳನ್ನು ನಿರೂಪಿಸಲು ಜಯಾಭಿಷೇಕಾನಂತರದ ವೃತ್ತಾಂತವನ್ನು ಹೇಳಿದನು :–

ಜಯಾಭಿಷೇಕದ ಅನಂತರದಲ್ಲಿ ಮನುವು ದೇವತೆಗಳಿಗೂ ಸಹ ದೇವನಾದ ಉಮಾಪತಿಯಾದ ಶಿವನನ್ನು ನಮಸ್ಕರಿಸಿ ನೀಲ ಲೋಹಿತನಾದ ರುದ್ರದೇವನನ್ನು ದಿವ್ಯಚಕ್ಷುಸ್ಸಿನಿಂದ ನೋಡಿ ಭಕ್ತರಿಗೆ ವರವನ್ನು ಕೊಡುವ ಶಂಕರನನ್ನು ರುದ್ರಾಧ್ಯಾಯದಿಂದ ಸ್ತೋತ್ರಮಾಡಿದನು.

೨-೩. ಶಂಕರನೂ ಸಹ ಮನುವು ಮಾಡಿದ ಸ್ತೋತ್ರದಿಂದ ಸಂತುಷ್ಟನಾಗಿ ರಾಜ್ಯವನ್ನು ಆಳಿ ಆ ಮೇಲೆ ನಿನಗೆ ಕರ್ಮದಿಂದ ಕೈವಲ್ಯ ವುಂಟಾಗುವುದೆಂದು ಒಂದುಬಾರಿ ಹೇಳಿ ಅಲ್ಲಿಯೇ ಅಂತರ್ಧಾನನಾದನು. ಅನಂತರ ಸ್ವಾಯಂಭುವ ಮನುವು ವೃಷಭವೇ ಧ್ವಜವಾಗಿವುಳ್ಳ ಶಿವನನ್ನು ನಮಸ್ಕರಿಸಿ, ಶಿವನು ಮಹಾವೃಷಭವನ್ನು ಏರುವಂತೆ, ಮಹಾಮೇರುಪರ್ವತವನ್ನು ಏರಿದನು ( ಹತ್ತಿದನು. )

ಆರುರೋಹ ಮಹಾ ಮೇರುಂ ಮಹಾವೃಷ ಮಿಂವೇಶ್ವರಃ ।
ತತ್ರ ದೇವಂ ಹಿರಣ್ಯಾಭಂ ಯೋಗೈಶ್ವರ್ಯ ಸಮನ್ವಿತಂ ॥ ೪ ॥
ಸನತ್ಕುಮಾರಂ ವರದ ಮಪಶ್ಯ ದ್ಬ್ರಹ್ಮಣಃ ಸುತಂ ।
ನಮಶ್ಚಕಾರ ವರದಂ ಬ್ರಹ್ಮಣ್ಯಂ ಬ್ರಹ್ಮರೂಪಿಣಂ ॥ ೫ ॥
ಕೃತಾಂಜಲಿ ಪುಟೋ ಭೂತ್ವಾ ತುಷ್ಟಾವ ಚ ಮಹಾದ್ಯುತಿಃ ।
ಸೋಽಪಿ ದೃಷ್ಟ್ವಾ ಮನುಂ ದೇವೋ ಹೃಷ್ಟರೋಮಾಽಭವನ್ಮುನಿಃ ॥
ಸನತ್ಕುಮಾರಃ ಪ್ರಾಹೇದಂ ಘೃಣಯಾ ಚ ಘೃಣಾನಿಧೇ (ಧಿಃ) ।

॥ ಸನತ್ಕುಮಾರ ಉವಾಚ ॥

ದೃಷ್ಟ್ವಾ ಸರ್ವೇಶ್ವರಾ ಚ್ಛಾಂತಾ ಚ್ಛಂಕರಾ ನ್ನೀಲ ಲೋಹಿತಾತ್ ॥

---

೪-೫. ಮೇರುಪರ್ವತದಲ್ಲಿ ಮನುವು ಸುವರ್ಣದಂತೆ ದೇಹ ಕಾಂತಿಯುಳ್ಳ, ಯೋಗಾಭ್ಯಾಸದಿಂದುಂಟಾದ ಅಣಿಮಾದ್ಯಷ್ಟೈಶ್ವರ್ಯ ಸಂಪನ್ನನಾದ, ಬ್ರಹ್ಮನ ಮಾನಸಪುತ್ರನಾದ, ವರಗಳನ್ನು ಭಕ್ತರಿಗೆ ಕೊಡುವ ಸನತ್ಕುಮಾರ ಮಹಾಮುನಿಯನ್ನು ನೋಡಿದನು. ಅನಂತರ ಮಹಾತೇಜಸ್ವಿಯಾದ ಆ ಮನುವು ಬ್ರಹ್ಮೋಪದೇಶವನ್ನು ಮಾಡುವ, ಬ್ರಹ್ಮಸ್ವರೂಪನಾದ, ವರವನ್ನು ಕೊಡುವ ಆ ಮುನಿಯನ್ನು ನಮಸ್ಕರಿಸಿ ಅಂಜಲಿಯನ್ನು ಮಾಡಿ ಸ್ತೋತ್ರಮಾಡಿದನು.

೬. ಓ ದಯಾಶಾಲಿಯೇ, ದೇವನಾದ ಸನತ್ಕುಮಾರಮುನಿಯೂ ಸಹ ಆ ಮನುವನ್ನು ನೋಡಿ ಸಂತೋಷದಿಂದ ರೋಮಾಂಚಿತನಾದನು. ದಯೆಯಿಂದ ಮನುವನ್ನು ಕುರಿತು ಹೀಗೆ ಹೇಳಿದನು.

೭. ಸರ್ವಕ್ಕೂ ಈಶ್ವರನಾಗಿಯೂ, ಶಾಂತಸ್ವಭಾವವುಳ್ಳವನಾಗಿಯೂ, ನೀಲಲೋಹಿತನಾಗಿಯೂ ಇರುವ ಶಿವನಿಂದ ಅಭಿಷೇಕವನ್ನು ಹೊಂದಿ ನೀನು ಬಂದವನಾಗಿರುವೆ. ನೀನು ಹೇಳಬೇಕೆಂದಿರುವ ವಿಷಯವನ್ನು ಹೇಳು.

ಲಬ್ಧ್ವಾಽಭಿಷೇಕಂ ಸಂಪ್ರಾಪ್ತೋ ವಿವಕ್ಷುರ್ವರದ ಯದ್ಯಪಿ ।
ತಸ್ಯ ತದ್ವಚನಂ ಶ್ರುತ್ವಾ ಪ್ರಣಿಪತ್ಯ ಕೃತಾಂಜಲಿಃ ॥ ೮ ॥
ವಿಜ್ಞಾಪಯಾ ಮಾಸ ಕಥಂ ಕರ್ಮಣಾ ನಿರ್ವೃತಿ ರ್ವಿಭೋ ।
ವಕ್ತು ಮರ್ಹಸಿ ಚಾಸ್ಮಾಕಂ ಕರ್ಮಣಾ ಕೇವಲೇನ ಚ ॥ ೯ ॥
ಜ್ಞಾನೇನ ನಿರ್ವೃತಿಃ ಸಿದ್ಧಾ ವಿಭೋ ಮಿಶ್ರೇಣ ವಾ ಕ್ವಚಿತ್ ।
ಅಥ ತಸ್ಯ ವಚಃ ಶ್ರುತ್ವಾ ಶ್ರುತಿಸಾರ ವಿದಾಂ ವರಃ ॥೧೦॥

---

೮–೯. ಈ ರೀತಿಯಾದ ಸನತ್ಕುಮಾರನ ಮಾತನ್ನು ಕೇಳಿ ಮನುವು ಸಾಷ್ಟಾಂಗವೆರಗಿ ಅಂಜಲಿಬದ್ಧನಾಗಿ ಈ ರೀತಿಯಾಗಿ ಹೇಳಿದನು :—

ಓ ಪ್ರಭುವೇ, ಕೇವಲ ಕರ್ಮದಿಂದ ಹೇಗೆ ನಿತ್ಯಸುಖವು ಪ್ರಾಪ್ತವಾಗುತ್ತದೆ? ಜ್ಞಾನದಿಂದ ಅಂತಹ ಸುಖವು ಪ್ರಾಪ್ತವಾಗುವದೆಂಬ ವಿಷಯವು ಸರ್ವಸಂಮತವಾಗಿದೆಯೇ? ಅಥವಾ ಜ್ಞಾನಕರ್ಮಸಮುಚ್ಚಯದಿಂದ ಮೋಕ್ಷವು ಪ್ರಾಪ್ತವಾಗುತ್ತದೆಯೇ? ಈ ವಿಷಯವನ್ನು ನನಗೆ ಚೆನ್ನಾಗಿ ವಿವರಿಸಿ ಹೇಳಬೇಕೆಂದು ವಿಜ್ಞಾಪಿಸಿ ಕೊಂಡನು.

೧೦–೧೧. ಅನಂತರ ಮನುವಿನ ವಾಕ್ಯವನ್ನು ಕೇಳಿ ಶ್ರುತ್ಯರ್ಥದ ಸಾರಾಂಶವನ್ನು ತಿಳಿದವರಲ್ಲಿ ಶ್ರೇಷ್ಠನಾಗಿಯೂ, ಷಡ್ಗುಣೈಶ್ವರ್ಯ ಸಂಪನ್ನನಾಗಿಯೂ, ಇರುವ ಸನತ್ಕುಮಾರನು ಈ ರೀತಿಯಾಗಿ ಹೇಳಿದನು :—

ಓ ಮನನ ಶೀಲನಾದ ಮನುವೇ, ಕೇವಲ ಕರ್ಮದಿಂದಲಾಗಲೀ, ಅಥವಾ ಜ್ಞಾನಕರ್ಮ ಸಮುಚ್ಚಯದಿಂದಾಗಲೀ ನಿತ್ಯಸುಖವು ಪರಂಪರೆಯಿಂದ ಉಂಟಾಗುತ್ತದೆ. ಎಂದರೆ ಜ್ಞಾನಸಾಧ್ಯವಾದ ಮೋಕ್ಷವು ಅಜ್ಞಾನ ನಿವೃತ್ತಿಪೂರ್ವಕವಾದುದರಿಂದ, ಆ ಅಜ್ಞಾನನಿವೃತ್ತಿಯಾಗಬೇಕಾದರೆ ಕೇವಲ ಕರ್ಮದಿಂದಾಗಲೀ ಜ್ಞಾನಕರ್ಮ ಸಮುಚ್ಚಯದಿಂದಲಾಗಲೀ ಆಗಲಾರದು. ಕರ್ಮವನ್ನು ಮಾಡಿದರೆ ಚಿತ್ತಶುದ್ಧಿ

ಸನತ್ಕುಮಾರೋ ಭಗವಾನ್ ಕರ್ಮಣಾ ನಿರ್ವೃತಿಂ ಕ್ರಮಾತ್ ।
ನಿಃಶ್ರೇಣ ಚ ಕ್ರಮಾದೇವ ಕ್ಷಣಾತ್ ಜ್ಞಾನೇನ ವೈ ಮುನೇ ॥೧೧॥
ಪುರಾಽಪಮಾನೇನ ಚೋಽಪ್ಯತ್ರ ಮುಗಮಂ ನಂದಿನಃ ಪ್ರಭೋಃ ।
ಶಾಪಾತ್ಪುನಃ ಪ್ರಸಾದಾದ್ಧಿ ಶಿವಮಭ್ಯರ್ಚ್ಯ ಶಂಕರಂ ॥೧೨॥
ಪ್ರಸಾದಾನ್ನಂದಿನ ಸ್ತಸ್ಯ ಕರ್ಮಣೈವ ಸುತೋ ಹ್ಯಹಂ ।
ಶ್ರುತ್ವೋತ್ತಮಾಂ ಗತಿಂ ದಿವ್ಯಾಮವಸ್ಥಾಂ ಪ್ರಾಪ್ತವಾನಹಂ ॥೧೩॥
ಶಿವಾರ್ಚನ ಪ್ರಕಾರೇಣ ಶಿವಧರ್ಮೇಣ ನಾನ್ಯಥಾ ।
ರಾಜ್ಞಾಂ ಷೋಡಶ ದಾನಾನಿ ನಂದಿನಾ ಕಥಿತಾನಿ ಚ ॥೧೪॥

---

ಯಾಗಿ ಆ ಮೇಲೆ ವೇದಾಂತವಿಚಾರದಿಂದ ಜ್ಞಾನೋದಯವಾಗಿ ಮೋಕ್ಷ ವಾಗುತ್ತದೆ. ಈ ರೀತಿಯಾಗಿ ಕರ್ಮವು ಕ್ರಮವಾಗಿ ಮೋಕ್ಷಕ್ಕೆ ಸಾಧನವು. ಸಾಕ್ಷಾತ್ಸಾಧನವಾದುದು ಜ್ಞಾನವೇ ಸರಿ. ಇದೇ ಅಜ್ಞಾನ ನಿವರ್ತಕವಾಗಿದೆ.

೧೨-೧೩. ಸನತ್ಕುಮಾರನು ತನ್ನ ಪೂರ್ವಜನ್ಮದ ವೃತ್ತಾಂತವನ್ನೂ ಶಿವಾರ್ಚನಮಹಿಮೆಯನ್ನೂ ಹೇಳುತ್ತಾನೆ. ನಾನು ಪೂರ್ವದಲ್ಲಿ ಪ್ರಭುವಾದ ನಂದಿಕೇಶ್ವರನನ್ನು ಅವಮಾನ ಪಡಿಸಿ ಅವನ ಶಾಪದಿಂದ ಒಂಟೆಯ ಜನ್ಮವನ್ನು ಹೊಂದಿದೆನು ಅನಂತರ ಶಿವನನ್ನು ನಿಷ್ಕಾಮ ಕರ್ಮದಿಂದ ಪೂಜಿಸಿಯೂ, ಆ ನಂದಿಕೇಶ್ವರನ ಅನುಗ್ರಹದಿಂದಲೂ ಸಹ ಬ್ರಹ್ಮನ ಮಾನಸ ಪುತ್ರನಾಗಿ ಪುನಃ ಜನಿಸಿ, ಆ ನಂದಿಯ ಮುಖದಿಂದಲೇ ಮೋಕ್ಷ ಮಾರ್ಗವನ್ನು ಕೇಳಿ, ಈಗ ದಿವ್ಯವಾದ ಜೀವನ್ಮುಕ್ತನ ಸ್ಥಿತಿಯನ್ನು ಹೊಂದಿರುತ್ತೇನೆ.

೧೪-೧೫. ನಿತ್ಯಸುಖವು ಶಿವಾರ್ಚನ ಪ್ರಕಾರದ ಧರ್ಮದಿಂದ ಪ್ರಾಪ್ತವಾಗಬೇಕೇ ಹೊರತು ಇನ್ನು ಯಾವುದರಿಂದಲೂ ಪ್ರಾಪ್ತವಾಗಲಾರದು. ಆ ಮಹಾತ್ಮನಾದ ನಂದಿಯು ರಾಜರು ತಮ್ಮ ಕರ್ಮಗಳಿಂದ ಮಾಡಲು ಯೋಗ್ಯಗಳಾಗಿಯೂ, ಧರ್ಮಾರ್ಥಕಾಮಗಳೆಂಬ ಪುರುಷಾರ್ಥಗಳಿಗೆ ಸಾಧನಗಳಾಗಿಯೂ, ಗ್ರಹಣಾದಿ ಪುಣ್ಯಕಾಲಗಳಲ್ಲಿಯೂ, ಶುಭ

ಧರ್ಮ ಕಾಮಾರ್ಥ ಮುಕ್ತ್ಯರ್ಥಂ ಕರ್ಮಣ್ಯೈವ ಮಹಾತ್ಮನಾ ।
ತುಲಾಧಿ ರೋಹಣಾ ದ್ಯಾನಿ ಶೃಣು ತಾನಿ ಯಥಾ ಯಥಂ ॥೧೫॥

ಗ್ರಹಣಾದಿಷು ಕಾಲೇಷು ಶುಭ ದೇಶೇಷು ಶೋಭನಂ ।
ವಿಂಶದ್ಧಸ್ತ ಪ್ರಮಾಣೇನ ಮಂಟಪಂ ಕೂಟ ಮೇವಚ ॥೧೬॥

ಯಥಾಽಷ್ಟಾ ದಶ ಹಸ್ತೇನ ಕಲಾ ಹಸ್ತೇನ ವಾ ಪುನಃ ।
ಕೃತ್ವಾ ವೇದಿಂ ತಥಾ ಮಧ್ಯೇ ನವಹಸ್ತ ಪ್ರಮಾಣ ತಃ ॥೧೭॥

ಅಷ್ಟ ಹಸ್ತೇನ ವಾ ಕಾರ್ಯಾ ಸಪ್ತ ಹಸ್ತೇನ ವಾ ಪುನಃ ।
ದ್ವಿಹಸ್ತಾ ಸಾರ್ಧ ಹಸ್ತಾವಾ ವೇದಿಕಾ ಚಾತಿ ಶೋಭನಾ ॥೧೮॥

ದ್ವಾದಶಸ್ತಂಭ ಸಂಯುಕ್ತಾ ಸಾಧುರಮ್ಯಾ ಭ್ರಮಂತಿ ಕಾ ।
ಪರಿತೋ ನವ ಕುಂಡಾನಿ ಚತುರಸ್ರಾಣಿ ಕಾರಯೇತ್ ॥೧೯॥

---

ತಮವಾದ ಕ್ಷೇತ್ರಗಳಲ್ಲಿಯೂ, ಅನುಷ್ಠಿಸಲು ಯೋಗ್ಯಗಳಾದ ಷೋಡಶ ದಾನಗಳನ್ನೂ, ತುಲಾರೋಹಣಾದಿಗಳನ್ನೂ, (ತುಲಾಭಾರ) ಸಹ ನನಗೆ ಹೇಳಿರುತ್ತಾನೆ. ಅವುಗಳನ್ನು ಯಥಾವಿಧಿಯಾಗಿ ಹೇಳುವೆನು ಕೇಳು.

೧೬-೧೮. ಇಪ್ಪತ್ತು ಹಸ್ತ ಪ್ರಮಾಣವುಳ್ಳದ್ದಾಗಲೀ, ಹದಿನೆಂಟು ಹಸ್ತಪ್ರಮಾಣವುಳ್ಳದ್ದಾಗಲೀ, ಅಥವಾ ಹದಿನಾರು ಹಸ್ತಪ್ರಮಾಣ ವುಳ್ಳ ಮಂಟಪವನ್ನಾಗಲೀ, ಕುಟೀರವನ್ನಾಗಲೀ ರಚಿಸಬೇಕು. ಅದರ ಮಧ್ಯದಲ್ಲಿ ಒಂಬತ್ತು ಹಸ್ತಪ್ರಮಾಣವುಳ್ಳದ್ದಾಗಲೀ, ಎಂಟು ಹಸ್ತ ಪ್ರಮಾಣವುಳ್ಳದ್ದಾಗಲೀ, ಏಳು ಹಸ್ತಪ್ರಮಾಣವುಳ್ಳದ್ದಾಗಲೀ, ಎರಡು ಹಸ್ತಪ್ರಮಾಣವುಳ್ಳದ್ದಾಗಲೀ ಅಥವಾ ಒಂದೂವರೆ ಹಸ್ತಪ್ರಮಾಣವುಳ್ಳ ದ್ದಾಗಲೀ, ಶೋಭಿಸುವ ವೇದಿಕೆಯನ್ನು ಮಾಡಬೇಕು.

೧೯. ಆ ವೇದಿಕೆಯು ಹನ್ನೆರಡು ಕಂಬಗಳುಳ್ಳದ್ದಾಗಿಯೂ, ಲಕ್ಷಣ ಯುಕ್ತವಾಗಿಯೂ, ಮನೋಹರವಾಗಿಯೂ ಇರಬೇಕು. ಅದರ ಸುತ್ತಲೂ ನಾಲ್ಕು ಮೂಲೆಗಳುಳ್ಳ ಚೌಕವಾದ ಒಂಬತ್ತುಕುಂಡಗಳನ್ನು ಮಾಡಿಸಬೇಕು.

ಐಂದ್ರಿಕೇಶಾನಯೋರ್ಮಧ್ಯೇ ಪ್ರಧಾನಂ ಬ್ರಹ್ಮಣಃ ಸುತ ।
ಅಥವಾ ಚತುರಸ್ರಂ ಚ ಯೋನ್ಯಾಕಾರ ಮತಃ ಪರಂ ॥೨೦॥
ಸ್ತ್ರೀಣಾಂ ಕುಂಡಾನಿ ವಿಪ್ರೇಂದ್ರಾ ಯೋನ್ಯಾಕಾರಾಣಿ ಕಾರಯೇತ್
ಅರ್ಧ ಚಂದ್ರಂ ತ್ರಿಕೋಣಂ ಚ ವರ್ತುಲಂ ಕುಂಡಮೇವ ಚ ॥೨೧॥
ಷಡಸ್ರಂ ಸರ್ವತೋ ವಾಽಪಿ ತ್ರಿಕೋಣಂ ಪದ್ಮ ಸನ್ನಿಭಂ ।
ಅಷ್ಟಾಸ್ರಂ ಸರ್ವ ಮಾನೇ ತು ಸ್ಥಂಡಿಲಂ ಕೇವಲಂ ತು ವಾ ॥೨೨॥
ಚತುರ್ದ್ವಾರ ಸಮೋಪೇತಂ ಚತು ಸ್ತೋರಣ ಭೂಷಿತಂ ।
ದಿಗ್ಗಜಾಷ್ಟಕ ಸಂಯುಕ್ತಂ ದರ್ಭಮಾಲಾ ಸಮಾವೃತಂ ॥೨೩॥
ಅಷ್ಟಮಂಗಲ ಸಂಯುಕ್ತಂ ವಿತಾನೋಪರಿ ಶೋಭಿತಂ ।
ತುಲಾಸ್ತಂಭ ದ್ರುಮಾಶ್ಚಾತ್ರ ಬಿಲ್ವಾದೀನಿ ವಿಶೇಷತಃ ॥೨೪॥

---

ಓ ಬ್ರಹ್ಮಪುತ್ರನಾದ ಮನುವೇ, ಪೂರ್ವ ಮತ್ತು ಈಶಾನ್ಯದಿಕ್ಕಿನ ಮಧ್ಯದಲ್ಲಿ ಪ್ರಧಾನಕುಂಡವನ್ನು ಮಾಡಿಸಬೇಕು.

೨೦–೨೧. ಅಥವಾ ನಾಲ್ಕು ಮೂಲೆಗಳುಳ್ಳ ಯೋನ್ಯಾಕಾರವಾದ ಕುಂಡವನ್ನಾದರೂ ಮಾಡಿಸಬೇಕು. ಮತ್ತು ಯೋನ್ಯಾಕಾರಗಳಾದ ಸ್ತ್ರೀಕುಂಡಗಳನ್ನೂ ಎಂದರೆ ಅರ್ಧಚಂದ್ರಾಕಾರವಾದ ತ್ರಿಕೋಣಾಕಾರವಾದ ದುಂಡಾದ ಕುಂಡಗಳನ್ನು ಮಾಡಿಸಬೇಕು.

೨೨. ಆರುಕೋಣಗಳುಳ್ಳ ಅಥವಾ ತ್ರಿಕೋಣವಾದ ಪದ್ಮಾಕಾರವಾದ ಎಂಟು ಕೋಣಗಳುಳ್ಳ ಸ್ಥಂಡಿಲವನ್ನು ಮಾಡಿಸಬೇಕು.

೨೩–೨೪. ಈಗ ಮಂಟಪದ ಲಕ್ಷಣವನ್ನು ಹೇಳುತ್ತಾನೆ:– ಮಂಟಪವು ನಾಲ್ಕು ತೋರಣಗಳುಳ್ಳದ್ದಾಗಿಯೂ, ಎಂಟುದಿಕ್ಕುಗಳಲ್ಲಿ ಆನೆಗಳುಳ್ಳದ್ದಾಗಿಯೂ. ದರ್ಭೆಯ ಮಾಲೆಯಿಂದ ಅಲಂಕೃತವಾಗಿಯೂ ಎಂಟಂಗುಲವುಳ್ಳ ಮೇಲ್ಕಟ್ಟಿನಿಂದ ಪ್ರಕಾಶಮಾನವಾಗಿಯೂ ಇರಬೇಕು. ತುಲಾಸ್ತಂಭವನ್ನು ವಿಶೇಷವಾಗಿ ಬಿಲ್ವ, ಅಶ್ವತ್ಥ, ಪಲಾಶ ಈ ವೃಕ್ಷ

ಬಿಲ್ವಾಶ್ವತ್ಥ ಪಲಾಶಾದ್ಯಾಃ ಕೇವಲಂ ಖಾದಿರಂ ತು ವಾ ।
ಯೇನ ಸ್ತಂಭಃ ಕೃತಃ ಪೂರ್ವಂ ತೇನ ಸರ್ವಂ ತು ಕಾರಯೇತ್ ॥
ಅಥವಾ ಮಿಶ್ರಮಾರ್ಗೇಣ ವೇಣುನಾ ವಾ ಪ್ರಕಲ್ಪಯೇತ್ ।
ಅಷ್ಟಹಸ್ತ ಪ್ರಮಾಣಂ ತು ಹಸ್ತದ್ವಯ ಸಮಾವೃತಂ ॥೨೬॥
ತುಲಾಸ್ತಂಭಸ್ಯ ವಿಷ್ಕಂಭೋಽನಾಹತ ಸ್ತ್ರಿಗುಣೋ ಮತಃ ।
ದ್ವ್ಯಂಗುಲೇನ ವಿಹೀನಂ ತು ಸುವೃತ್ತಂ ನಿರ್ವ್ರಣಂ ತಥಾ ॥೨೭॥
ಉಭಯೋ ರಂತರಂ ಚೈವ ಷಡ್ಢಸ್ತಂ ನೃಪತೇ ಸ್ಮೃತಂ ।
ದ್ವಯೋಶ್ಚತು ರ್ಹಸ್ತ ಕೃತ ಮಂತರಂ ಸ್ತಂಭಯೋರಪಿ ॥೨೮॥
ಷಡ್ಢಸ್ತ ಮಂತರಂ ಜ್ಞೇಯಂ ಸ್ತಂಭಯೋ ರುಪರಿ ಸ್ಥಿತಂ ।
ವಿತಸ್ತಿಮಾತ್ರಂ ವಿಸ್ತಾರೋ ವಿಷ್ಕಂಭ ಸ್ತಾವ ದುತ್ತರಂ ॥೨೯॥

---

ಗಳಿಂದಾಗಲೀ, ಅಥವಾ ಖದಿರವೃಕ್ಷದಿಂದಾಗಲೀ ಮಾಡಿಸಬೇಕು. ಯಾವಜಾತಿಯ ಮರವು ಹಿಂದೆ ಉಪಯೋಗಿಸಲ್ಪಟ್ಟಿದೆಯೋ ಅದೇ ಜಾತಿಯ ಮರದಿಂದ ತುಲಾಸ್ತಂಭವನ್ನು ಮಾಡಿಸಬೇಕು.

೨೬. ಅಥವಾ ಮಿಶ್ರಮಾರ್ಗದಿಂದ ಬಿದಿರಿನಿಂದಾಗಲೀ ಮಾಡಬಹುದು. ಆ ತುಲಾಸ್ತಂಭವು ಎಂಟುಹಸ್ತ ಪ್ರಮಾಣವುಳ್ಳದ್ದಾಗಿಯೂ, ಎರಡುಹಸ್ತಪ್ರಮಾಣ ಭೂಮಿ ಯೊಳಗೆಸಂಯುಕ್ತವಾಗಿಯೂ ಇರಬೇಕು.

೨೭. ಆ ತುಲಾಸ್ತಂಭದ ಮೂರುಭಾಗವು ಅನಾಚ್ಛಾದಿತವಾಗಿ ತ್ರಿಗುಣವಾಗಿರಬೇಕು. ಎರಡಂಗುಲಕ್ಕಿಂತ ಕಮ್ಮಿಯಾಗದೆಯೂ, ಚೆನ್ನಾಗಿ ಮಾಡಲ್ಪಟ್ಟದ್ದಾಗಿಯೂ ಏರುತಗ್ಗು ಇಲ್ಲದೇ ಸಮವಾಗಿರಬೇಕು.

೨೮. ಓ ನೃಪತಿಯೇ, ಎರಡುಸ್ತಂಭದ ಅಂತರವು ಎರಡಂಗುಲಕ್ಕೆ ಕಮ್ಮಿಯಾಗದೇ ಆರು ಹಸ್ತಗಳಿರಬೇಕು. ಎರಡು ಕಂಬಗಳಿಗೆ ನಾಲ್ಕು ಹಸ್ತದಷ್ಟು ಅಂತರವಿರಬೇಕು.

೨೯. ಎರಡು ಹಸ್ತಗಳ ಮೇಲ್ಭಾಗದಲ್ಲಿರತಕ್ಕ ಅಂತರವು ಆರು ಹಸ್ತ ಪ್ರಮಾಣವುಳ್ಳದ್ದಾಗಿರಬೇಕು. ಎತ್ತರ ವಿಸ್ತಾರವು ವಿತಸ್ತಿಮಾತ್ರ ಹನ್ನೆರಡಂಗುಲ ಇರಬೇಕು.

ಸ್ತಂಭಯೋಸ್ತು ಪ್ರಮಾಣೇನ ಉತ್ತರ ದ್ವಾರ ಸಂಮಿತಂ ।
ಷಟ್ತ್ರಿಂಶನ್ಮಾತ್ರ ಸಂಯುಕ್ತಂ ವ್ಯಾಯಾಮಂ ತು ತುಲಾತ್ಮಕಂ ॥೩೦॥
ವಿಷ್ಕಂಭ ಮಷ್ಟಮಾತ್ರಂ ತು ಯವ ಪಂಚ ಕ ಸಂಯುತಂ ।
ಷಟ್ತ್ರಿಂಶ ಮಾತ್ರ ನಾಭಂ ಸ್ಯಾ ನ್ನಿಮ್ನಾಣಾ ದ್ವರ್ತುಲಂ ಶುಭಂ ॥
ಅಗ್ರೇ ಮೂಲೇ ಚ ಮಧ್ಯೇ ಚ ಹೇಮ ಪಟ್ಟೇನ ಬಂಧಯೇತ್ ।
ಪಟ್ಟಮಧ್ಯೇ ಪ್ರಕರ್ತವ್ಯ ಮವಲಂಬನ ಕ ತ್ರಯಂ ॥೩೨॥
ತಾಮ್ರೇಣ ಚ ಪ್ರಕರ್ತವ್ಯ ಮವಲಂಬನ ಕ ತ್ರಯಂ ।
ಆರೇಣ ಚ ಪ್ರಕರ್ತವ್ಯ ಮಾಯಸಂ ನೈವ ಕಾರಯೇತ್ ॥೩೩॥
ಮಧ್ಯೇ ಚೋರ್ಧ್ವಮುಖಂ ಕಾರ್ಯ ಮವಲಂಬಃ ಸು ಶೋಭನಃ ।
ರಶ್ಮಿಭಿ ಸ್ತೋರಣಾ ಗ್ರೇ ವಾ ಬಂಧಯೇ ಚ್ಚ ವಿಧಾನತಃ ॥೩೪॥

---

೩೦. ಉತ್ತರದ್ವಾರದ ಸ್ತಂಭಗಳ ಪ್ರಮಾಣದಂತೆ ತುಲಾ ರೂಪದ ವಿಸ್ತಾರವೂ ಮುವ್ವತ್ತಾರು ಮಾತ್ರೆಯುಳ್ಳದ್ದಾಗಿರಬೇಕು.

೩೧. ತುಲಾದಂಡದ ವಿಸ್ತಾರವು ಯವಪಂಚ ಸಂಯುಕ್ತವಾಗಿಯೂ ಅಷ್ಟಮಾತ್ರೆಯುಳ್ಳದ್ದಾಗಿಯೂ ಇರಬೇಕು. ಆ ತುಲಾದಂಡದ ಮಧ್ಯ ಭಾಗವು ದುಂಡಾಗಿಯೂ, ಮಂಗಳಕರವಾಗಿಯೂ, ಮುವ್ವತ್ತಾರು ಯವಗಳ ಪ್ರಮಾಣವುಳ್ಳದ್ದಾಗಿಯೂ ಇರಬೇಕು.

೩೨. ಆ ಕಂಬಗಳ ಮೇಲ್ಭಾಗದಲ್ಲಿಯೂ ಮೂಲಭಾಗಗಳಲ್ಲಿಯೂ, ಸಹ ಚಿನ್ನದ ಪಟ್ಟಿಗಳನ್ನು ಹೊಡೆಯಿಸಬೇಕು. ಆ ಪಟ್ಟಿಗಳ ಮಧ್ಯದಲ್ಲಿ ಮೂರು ಜೋಲಾಡುವ ಸರಗಳನ್ನು ಮಾಡಿಸಬೇಕು.

೩೩. ಆ ಜೋಲಾಡುವ ಪದಾರ್ಥಗಳನ್ನು ತಾಮ್ರದಿಂದಲಾಗಲೀ, ಹಿತ್ತಾಳೆಯಿಂದಲಾಗಲೀ, ಮಾಡಿಸಬಹುದು. ಕಬ್ಬಿಣದ್ದನ್ನು ಖಂಡಿತ ವಾಗಿಯೂ ಮಾಡಿಸಬಾರದು.

೩೪. ಶೋಭಿಸುವ ಆಲಂಬಕವನ್ನು ಮಧ್ಯಭಾಗದಲ್ಲಿ ಮೇಲು ಮುಖವಾಗಿ ಹಗ್ಗಗಳಿಂದ ಕಟ್ಟಬೇಕು. ಅಥವಾ ಮೇಲ್ಭಾಗದಲ್ಲಿ ಶಾಸ್ತ್ರೋಕ್ತವಾದ ವಿಧಿಯಿಂದ ಹಗ್ಗದಿಂದ ಕಟ್ಟಬಹುದು.

ಜಿಹ್ವಾ ಮೇಕಾಂ ತುಲಾ ಮಧ್ಯೇ ತೋರಣಂ ತು ವಿಧೀಯತೇ ।
ಉತ್ತರಸ್ಯ ಚ ಮಧ್ಯೇ ಚ ಶಂಕುಂ ದೃಢ ಮನುತ್ತಮಂ ॥೩೫॥

ವಿ ತಾನೇ ನೋಪರಿ ಛಾದ್ಯ ದೃಢಂ ಸಮ್ಯಕ್ಪ್ರಯೋಜಯೇತ್ ।
ಶಂಕೋಃ ಸುಷಿರ ಸಂಪನ್ನಂ ವಲಯಂ ಕಾರಯೇನ್ಮುನೇ ॥೩೬॥

ತುಲಾಮಧ್ಯೇ ವಿತಾನೇನ ತುಲಯಾ ಲಂಬಕೇ ತಥಾ ।
ವಲಯೇನ ಪ್ರಯೋಕ್ತವ್ಯಂ ಕುಂಡಲಂ ವಾಽವ ಲಂಬನಂ ॥೩೭॥

ಸು ದೃಢಂ ಚ ತುಲಾ ಮಧ್ಯೇ ನವಮಾಂಗುಲ ಮಾನತಃ ।
ಪಟ್ಟಿ ಸ್ಯೈವ ತು ವಿಸ್ತಾರಂ ಪಂಚ ಮಾತ್ರ ಪ್ರಮಾಣತಃ ॥೩೮॥

ಅಪ ರೌ ಸುದೃಢೌ ಪಿಂಡೌ ಶುಭ ದ್ರವ್ಯೇಣ ಕಾರಯೇತ್ ।
ಶಿಕ್ಯಾ ಧಸ್ತಾ ತ್ಪ್ರಕರ್ತವ್ಯೌ ಪಂಚ ಪ್ರಾದೇಶ ವಿಸ್ತರೌ ॥
ಸಹಸ್ರೇಣ ತು ಕರ್ತವ್ಯೌ ಪಲಾನಾಂ ಧಾರಕಾ ವುಭೌ ॥೩೯॥

---

೩೫. ತುಲಾಮಧ್ಯದಲ್ಲಿ ಒಂದುನಾಲಿಗೆಯನ್ನು ಮಾಡಿಸಿ ತೋರಣ ವನ್ನು ಕಟ್ಟಬೇಕು. ಉತ್ತರದ ಮಧ್ಯದಲ್ಲಿ ಮೇಲ್ಕಟ್ಟುನಿಲ್ಲುವಂತೆ ಗಟ್ಟಿ ಯಾದ ಮಳೆಯನ್ನು ಹೊಡೆಯಬೇಕು.

೩೬. ಓ ಮುನಿಯೇ, ಮಧ್ಯಭಾಗದಲ್ಲಿ ರಂಧ್ರವುಳ್ಳ ಒಂದು ಕಡಗವನ್ನು ಆ ಮಳೆಗೆ ಸೇರಿಸಬೇಕು.

೩೭. ತುಲಾಮಧ್ಯದಲ್ಲಿ ಮೇಲ್ಕಟ್ಟಿನಿಂದಲೂ, ಕಡಗದಿಂದಲೂ ಸಹ ಅಲಂಕೃತವಾಗಿಯೂ, ಲಂಬಕವುಳ್ಳದ್ದಾಗಿಯೂ, ಇರಬೇಕು. ಕಡಗದಿಂದಲಾಗಲೀ, ಕುಂಡಲದಿಂದಲಾಗಲೀ, ಅವಲಂಬನದಿಂದಲಾಗಲೀ ಅದನ್ನು ಪ್ರಯೋಗಿಸಬೇಕು.

೩೮. ಐದುಗೇಣುವಿಸ್ತಾರವುಳ್ಳ ರೇಷ್ಮೆವಸ್ತ್ರದಿಂದ ತುಲಾಮಧ್ಯ ದಲ್ಲಿ ಒಂಬತ್ತಂಗುಲ ವಿಸ್ತಾರವಾದ ಗಟ್ಟಿಯಾದ ನೆಲುವನ್ನು ಹಾಕ ಬೇಕು.

೩೯. ತುಲಾವನ್ನು ಧರಿಸಿರತಕ್ಕ ಸಹಸ್ರತೊಲೆಯುಳ್ಳ ಎರಡು ಉಂಡೆಯ ಆಕೃತಿಗಳನ್ನೂ ಮಂಗಳ ದ್ರವ್ಯಗಳಿಂದ ಐದುಗೇಣು ಪ್ರಮಾಣ ವುಳ್ಳವುಗಳನ್ನು ಮಾಡಿಸಿ ಅದನ್ನು ಶಿಕ್ಯಗಳ ಕೆಳಭಾಗದಲ್ಲಿಡಬೇಕು.

ಶತಾಷ್ಟಕೇನ ವಾ ಕುರ್ಯಾತ್ ಪಲೈಃ ಷಟ್ಶತಮೇವ ವಾ ।
ಚತುಸ್ತಾಲಂ ಚ ಕರ್ತವ್ಯೋ ವಿಸ್ತಾರೋ ಮಧ್ಯಮಸ್ತಥಾ ॥೪೦॥

ಸಾರ್ಧ ತ್ರಿತಾಲ ವಿಸ್ತಾರಃ ಕಲಶಸ್ಯ ವಿಧೀಯತೇ ।
ಬಧ್ನೀಯಾತ್ಪಂಚ ಪಾತ್ರಂ ತು ತ್ರಿಮಾತ್ರಂ ಷಟ್ಕಮುಚ್ಯತೇ ॥೪೧॥

ಚತುರ್ದ್ವಾರ ಸಮೋಪೇತಂ ದ್ವಾರಮಂಗುಲ ಮಾತ್ರಕಂ ।
ಕುಂಡಲೈಶ್ಚ ಸಮೋಪೇತೈಃ ಶುಕ್ಲ ಶುದ್ಧ ಸಮನ್ವಿತೈಃ ॥೪೨॥

ಕುಂಡಲೇ ಕುಂಡಲೇ ಕಾರ್ಯಂ ಶೃಂಖಲಾ ಪರಿಮಂಡಲಂ ।
ಶೃಂಖಲಾ ಧಾರವಲಯ ಮವಲಂಬೇನ ಯೋಜಯೇತ್ ॥೪೩॥

---

೪೦. ಅಥವಾ ಆ ತುಲಾಧಾರಕಪಿಂಡಗಳನ್ನು ಎಂಟುನೂರು ತೊಲೆಯುಳ್ಳದ್ದಾಗಿಯಾಗಲೀ ಆರುನೂರು ತೊಲೆಯುಳ್ಳದ್ದನ್ನಾಗಲೀ, ಮಾಡಿಸಬಹುದು. ತುಲಾಪಾತ್ರದ ಮಧ್ಯದ ವಿಸ್ತಾರವು ಚತುಸ್ತಾಲವೆಂಬ ಮಾನ (ಅಳತೆ) ಉಳ್ಳದ್ದಾಗಿರಬೇಕು.

೪೧. ಕಲಶದ ವಿಸ್ತಾರವು ಮೂರುವರೆ ತಾಲವೆಂಬ ಅಳತೆಯುಳ್ಳದ್ದಾಗಿರಬಹುದು. ವಿಸ್ತಾರವಾದ ತೂಕದ ಪಾತ್ರೆಯು ಅಳತೆಯಲ್ಲಿ ಮೂರರಿಂದ ಆರುಸಂಖ್ಯೆಯೊಳಗಿರಬೇಕು.

೪೨. ನಾಲ್ಕು ದ್ವಾರಗಳುಳ್ಳ ಪಾತ್ರೆಯ ಒಂದೊಂದು ದ್ವಾರವೂ, ಒಂದು ಅಂಗುಲ ಪರಿಮಾಣವುಳ್ಳದ್ದಾಗಿಯೂ ಇರಬೇಕು. ಶುಕ್ಲವಾಗಿಯೂ, ಪರಿಶುದ್ಧವಾಗಿಯೂ ಇರುವ ಕುಂಡಲಗಳಿಂದ ಶೋಭಿಸತಕ್ಕದ್ದಾಗಿಯೂ, ಇರಬೇಕು.

೪೩. ಪ್ರತಿಯೊಂದು ಕುಂಡಲಕ್ಕೂ ದುಂಡು ಸರಪಣಿಯನ್ನು ಮಾಡಿಸಬೇಕು. ಆ ಸರಪಣಿಗಳ ಸಮೂಹವನ್ನು ಅವಲಂಬದೊಂದಿಗೆ ಸೇರಿಸಬೇಕು.

ಪ್ರಾದೇಶಂ ವಾ ಚತು ರ್ಮಾತ್ರಂ ಭೂಮೇ ಸ್ತ್ಯಕ್ತ್ವಾವಲಂಬಯೇತ್
ಘಟೌ ಪುರುಷ ಮಾತ್ರೌ ತು ಕರ್ತವ್ಯೌ ಶೋಭನಾ ವುಭೌ ॥೪೪॥
ತೌ ವಾಲುಕಾಭಿಃ ಸಂಪೂರ್ಯ ಶಿವಂ ತತ್ರ ವಿನಿಕ್ಷಿಪೇತ್ ।
ದ್ವಿಹಸ್ತಮಾತ್ರ ಮವಟೇ ಸ್ಥಾಪನೀ ಯೌ ಪ್ರಯತ್ನತಃ ॥೪೫॥
ನಿಶ್ಶೇಷಂ ಪೂರಯೇದ್ವಿದ್ವಾನ್ ವಾಲುಕಾಭಿಃ ಸಮಂತತಃ ।
ಯೇನ ನಿಶ್ಚಲತಾಂ ಗಚ್ಛೇತ್ತೇನ ಮಾರ್ಗೇಣ ಕಾರಯೇತ್ ॥೪೬॥
ಶ್ರೂಯತಾಂ ಪರಮಂ ಗುಹ್ಯಂ ವೇದಿಕೋಪರಿ ಮಂಡಲಂ ।
ಅಷ್ಟಮಾಂಗುಲ ಸಂಯುಕ್ತಂ ಮಂಗಲಾಂಕುರ ಶೋಭಿತಂ ॥೪೭॥

---

೪೪. ಭೂಮಿಗಿಂತ ತರ್ಜನೀ ಮತ್ತು ಅಂಗುಷ್ಠ ಪರಿಮಾಣವನ್ನಾಗಲೀ, ನಾಲ್ಕು ಅಂಗುಲಗಳನ್ನಾಗಲೀ, ಅಂತರಿಸಿ ತುಲಾವಲಂಬನವನ್ನು ಮಾಡಬೇಕು ಒಂದುಪುರುಷ ಪ್ರಮಾಣವುಳ್ಳ ಮಂಗಳಕರಗಳಾದ ಎರಡು ಘಟಗಳನ್ನು ಮಾಡಬೇಕು.

೪೫. ಆ ಎರಡು ಕುಂಭಗಳಲ್ಲಿಯೂ ಸಹ ಮರಳನ್ನು ತುಂಬಿ ಅದರಮೇಲೆ ಶಿವನನ್ನು ಸ್ಥಾಪಿಸಬೇಕು. ಅನಂತರ ಆ ಎರಡು ಘಟಗಳನ್ನು ಎರಡು ಗೇಣುಳ್ಳ ಹೊಂಡವನ್ನು ಮಾಡಿ ಅದರಲ್ಲಿ ಪ್ರಯತ್ನಪೂರ್ವಕವಾಗಿ ಇಡಬೇಕು.

೪೬. ಆ ಗರ್ತದಿಂದ ಆ ಘಟಗಳು ಅಲುಗಾಡದಂತೆ ಬುದ್ಧಿವಂತನಾದವನು ಮರಳುಗಳಿಂದ ಚೆನ್ನಾಗಿ ತುಂಬಬೇಕು.

೪೭. ಈಗ ಮಂಡಲ ವಿಧಾನವನ್ನು ಹೇಳುತ್ತಾರೆ.—ಅತ್ಯಂತ ಗೋಪ್ಯವಾದ (ರಹಸ್ಯವಾದ) ವೇದಿಕೆಯ ಮೇಲ್ಭಾಗದ ಮಂಡಲವನ್ನು ಹೇಳುವೆನು ಕೇಳು. ಆ ಮಂಡಲವು ಎಂಟಂಗುಲ ಪ್ರಮಾಣವುಳ್ಳದ್ದಾಗಿಯೂ ಮಂಗಳ ಕರಗಳಾದ ಅಂಕುರ ಪುಷ್ಪ (ಕೊಳ್ಳಹುವ್ವು) ಗಳಿಂದ ಶೋಭಿಸತಕ್ಕದ್ದಾಗಿಯೂ ಇರಬೇಕು.

ಫಲಪುಷ್ಪ ಸಮಾಕೀರ್ಣಂ ಧೂಪ ದೀಪ ಸಮನ್ವಿತಂ ।
ವೇದಿಮಧ್ಯೇ ಪ್ರಕರ್ತವ್ಯಂ ದರ್ಪಣೋದರ ಸನ್ನಿಭಂ ॥೪೮॥

ಆಲಿಖೇನ್ಮಂಡಲಂ ಪೂರ್ವಂ ಚತುರ್ದ್ವಾರ ಸಮನ್ವಿತಂ ।
ಶೋಭೋಪ ಶೋಭಾ ಸಂಪನ್ನಂ ಕರ್ಣಿಕಾ ಕೇಸರಾನ್ವಿತಂ ॥೪೯॥

ವರ್ಣ ಜಾತಿ ಸಮೋಪೇತಂ ಪಂಚ ವರ್ಣಂ ತು ಕಾರಯೇತ್ ।
ವಜ್ರಂ ಪ್ರಾಗಂತರೇ ಭಾಗೇ ಆಗ್ನೇಯ್ಯಾಂ ಶಕ್ತಿ ಮುಜ್ವಲಾಂ ॥

ಆಲಿಖೇದ್ದಕ್ಷಿಣೇ ದಂಡಂ ನೈಋತ್ಯಾಂ ಖಡ್ಗಮಾಲಿಖೇತ್ ।
ಪಾಶಶ್ಚ ವಾರುಣೇ ಲೇಖ್ಯೋ ಧ್ವಜಂ ವೈ ವಾಯುಗೋಚರೇ ॥

ಕೌಬೇರ್ಯಾಂ ತು ಗದಾ ಲೇಖ್ಯಾ ಐಶಾನ್ಯಾಂ ಶೂಲಮಾಲಿಖೇತ್ ।
ಶೂಲಸ್ಯ ವಾಮದೇಶೇನ ಚಕ್ರಂ ಪದ್ಮಂ ಚ ದಕ್ಷಿಣೇ ॥೫೨॥

---

೪೮. ಫಲಪುಷ್ಪಗಳಿಂದ ಕೂಡಿದ್ದಾಗಿಯೂ ಧೂಪದೀಪಗಳುಳ್ಳದ್ದಾಗಿಯೂ, ಇರಬೇಕು. ಆ ಮಂಡಲವನ್ನು ವೇದಿ ಮಧ್ಯದಲ್ಲಿ ದರ್ಪಣದ ಮಧ್ಯಭಾಗಕ್ಕೆ ಸಮಾನವಾದದ್ದನ್ನಾಗಿ ಮಾಡಬೇಕು.

೪೯. ಪೂರ್ವದಲ್ಲಿ ಆ ಮಂಡಲವನ್ನು ಬರೆಯಬೇಕು. ನಾಲ್ಕು ದ್ವಾರವುಳ್ಳದ್ದಾಗಿಯೂ ಶೋಭಾಯಮಾನವಾಗಿಯೂ, ಕರ್ಣಿಕಾ ಕೇಸರಗಳುಳ್ಳದ್ದಾಗಿಯೂ, ಐದು ಬಗೆಯ ಬಣ್ಣದ ಪುಡಿಗಳಿಂದ ಮಾಡಿದ್ದಾಗಿಯೂ ಇರಬೇಕು.

೫೦–೫೨. ಆ ಮಂಡಲದ ಪೂರ್ವದಿಕ್ಕಿನಲ್ಲಿ ವಜ್ರವನ್ನೂ, ಆಗ್ನೇಯದಲ್ಲಿ ಪ್ರಕಾಶಮಾನವಾದ ಶಕ್ತಿಯನ್ನೂ, ದಕ್ಷಿಣದಿಕ್ಕಿನಲ್ಲಿ ದಂಡವನ್ನೂ, ನೈಋತ್ಯದಿಕ್ಕಿನಲ್ಲಿ ಖಡ್ಗವನ್ನೂ, ಪಶ್ಚಿಮದಿಕ್ಕಿನಲ್ಲಿ ಪಾಶಾಯುಧವನ್ನೂ ವಾಯುವ್ಯದಿಕ್ಕಿನಲ್ಲಿ ಧ್ವಜವನ್ನೂ, ಉತ್ತರದಿಕ್ಕಿನಲ್ಲಿ ಗದೆಯನ್ನೂ ಈಶಾನ್ಯ ದಿಕ್ಕಿನಲ್ಲಿ ಶೂಲವನ್ನೂ ಸಹ ಬರೆಯಬೇಕು. ಆ ಶೂಲದ ಎಡಭಾಗದಲ್ಲಿ ಚಕ್ರವನ್ನೂ ಬಲಭಾಗದಲ್ಲಿ ಪದ್ಮವನ್ನೂ ಬರೆಯಬೇಕು.

ಏವಂ ಲಿಖಿತ್ವಾ ಪಶ್ಚಾಚ್ಚ ಹೋಮ ಕರ್ಮ ಸಮಾಚರೇತ್ ।
ಪ್ರಧಾನ ಹೋಮಂ ಗಾಯತ್ರ್ಯಾ ಸ್ವಾಹಾ ಶಕ್ರಾಯ ವಹ್ನಯೇ ॥
ಯಮಾಯ ರಾಕ್ಷಸೇಶಾಯ ವರುಣಾಯ ಚ ವಾಯವೇ ।
ಕುಬೇರಾಯೇಶ್ವರಾ ಯಾಥ ವಿಷ್ಣವೇ ಬ್ರಹ್ಮಣೇ ಪುನಃ ॥೫೪॥
ಸ್ವಾಹಾಂತಂ ಪ್ರಣವೇ ನೈವ ಹೋತವ್ಯಂ ವಿಧಿ ಪೂರ್ವಕಂ ।
ಸ್ವಶಾಖಾಗ್ನಿ ಮುಖೇನೈವ ಜಯಾದಿ ಪ್ರತಿ ಸಂಯುತಂ ॥೫೫॥
ಸ್ವಿಷ್ಟಾಂತಂ ಸರ್ವಕಾರ್ಯಾಣಿ ಕಾರಯೇ ದ್ವಿಧಿ ವತ್ತದಾ ।
ಸರ್ವ ಹೋ ಮಾಗ್ರ ಹೋಮೇ ಚ ಸಮಿತ್ಪಾಲಾಶ ಮುಚ್ಯತೇ ॥
ಏಕವಿಂಶತಿ ಸಂಖ್ಯಾಂತಂ ಮಂತ್ರೇಣಾನೇನ ಹೋಮಯೇತ್ ॥೫೬॥
ಅಯಂತ ಇಧ್ಮ ಆತ್ಮಾ ಜಾತವೇದ ಸ್ತೇನೇಧ್ಯಸ್ವವರ್ಧಸ್ವ
ಚೇದ್ಧವರ್ಧಯ ಚಾಸ್ಮಾನ್ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನಾ
ನ್ನಾದ್ಯೇನ ಸಮೇಧಯ ಸ್ವಾಹಾ ।

---

೫೩–೫೪. ಈ ರೀತಿಯಾಗಿ ಮಂಡಲವನ್ನು ಬರೆದು ಆಮೇಲೆ ಹೋಮವನ್ನು ಆಚರಿಸಬೇಕು. ಈಗ ಹೋಮ ವಿಧಿಯನ್ನು ಹೇಳುತ್ತಾನೆ.—ಪ್ರಧಾನ ಹೊಮವನ್ನು ಗಾಯತ್ರಿಯಿಂದ ಓಂಕಾರ ಪೂರ್ವಕವಾಗಿ ಸ್ವಾಹಾಂತವಾಗಿ ಮಾಡಬೇಕು. ಅನಂತರ ವಿಧಿ ಪೂರ್ವಕವಾಗಿ ಓಂಕಾರಾದಿಯಾಗಿ ಸ್ವಾಹಾಂತವಾಗಿ ಇಂದ್ರ, ಅಗ್ನಿ, ಯಮ, ನಿಋುತಿ ವರುಣ, ವಾಯು, ಕುಬೇರ, ಈಶಾನರೆಂಬ ಅಷ್ಟದಿಕ್ಪಾಲಕರಿಗೂ ಬ್ರಹ್ಮ, ವಿಷ್ಣು, ಇವರಿಗೂ ಸಹ ಹೋಮವನ್ನು ಮಾಡಬೇಕು.

೫೫–೫೬. ತಮ್ಮ ತಮ್ಮ ಮುಗಾದಿ ಶಾಖೋಕ್ತವಾದ ಅಗ್ನಿಮುಖ ಪ್ರಯೋಗದಿಂದ ಜಯಾದಿ ಪ್ರತಿಸಂಯುಕ್ತವಾದ ಸ್ವಿಷ್ಟಾಂತವಾದ ಸಮಸ್ತ ಕರ್ಮಗಳನ್ನೂ ವಿಧಿವತ್ತಾಗಿ ಮಾಡಿಸಬೇಕು. ಪ್ರಧಾನ ಹೋಮದಲ್ಲಿಯೂ, ಉಪಹೋಮದಲ್ಲಿಯೂ ಸಹ ಪಾಲಾಶಸಮಿತ್ತನ್ನು (ಮುತ್ತುಗ) ಉಪಯೋಗಿಸಬೇಕು. ಇಪ್ಪತ್ತೊಂದು ಸಮಿತ್ತನ್ನು ತೆಗೆದುಕೊಂಡು ಮುಂದೆ ಹೇಳುವ ಮಂತ್ರದಿಂದ ಹೋಮ ಮಾಡಬೇಕು.

೫೭. ಹೋಮದ್ರವ್ಯ ಮತ್ತು ಚರುವನ್ನು ಹೇಳುತ್ತಾನೆ.—ಹೋಮವನ್ನು ಸಮಿತ್ತಿನಿಂದಲೂ, ಚರುವಿನಿಂದಲೂ, ತುಪ್ಪದಿಂದಲೂ,

ಭೂಃ ಸ್ವಾಹಾ ಭುವಃ ಸ್ವಾಹಾ ಸ್ವಃ ಸ್ವಾಹಾ ಭೂರ್ಭುವಃ
ಸ್ವಸ್ತ್ಥೈವಚ ॥

ಸಮಿದ್ಧೋಮಶ್ಚ ಚರುಣಾ ಘೃತಸ್ಯ ಚ ಯಥಾ ಕ್ರಮಂ ।
ಶುಕ್ಲಾನ್ನ ಪಾಯಸಂ ಚೈವ ಮುದ್ಗಾನ್ನಂ ಚರವಃ ಸ್ಮೃತಾಃ ॥೫೭॥

ಸಹಸ್ರಂ ವಾ ತದ ರ್ಧಂವಾ ಶತ ಮಷ್ಟೋತ್ತರಂ ತು ವಾ ॥೫೮॥

ಅಗ್ನ ಆಯೂಂಷಿ ಪವಸ ಆಸುವೋರ್ಜ ಮಿಷಂ ಚ ನಃ ।
ಆರೇ ಬಾಧ ಸ್ವ ದುಚ್ಛುನಾಂ ॥

ಅಗ್ನಿ ಋರ್ ಋಷಿಃ ಪವಮಾನಃ ಪಾಂಚಜನ್ಯಃ ಪುರೋಹಿತಃ ॥
ತಮೀಮಹೇ ಮಹಾಗಯಂ ॥

ಅಗ್ನೇಪವಸ್ವ ಸ್ವಪಾ ಅಸ್ಮೇ ವರ್ಚಃ ಸುವೀರ್ಯಂ ।
ದಧದ್ರಯಿಂ ಮಯಿ ಪೋಷಂ ॥

ಪ್ರಜಾಪತೇ ನತ್ವದೇತಾನ್ಯನ್ಯೋ ವಿಶ್ವಾಜಾತಾನಿ ಪರಿತಾ
ಬಭೂವ । ಯತ್ಕಾಮಾಸ್ತೇ ಜುಹುಮ ಸ್ತನ್ನೋ ಆಸ್ತು
ವಯಂ ಸ್ಯಾಮ ಪತಯೋ ರಯೀಣಾಂ ॥

ಗಾಯತ್ರ್ಯಾಚ ಪ್ರಧಾನಸ್ಯ ಸಮಿದ್ಧೋಮ ಸ್ತಥೈವ ಚ ।
ಚರುಣಾ ಚ ಯಥಾಽಜ್ಯಸ್ಯ ಶಕ್ರಾದೀನಾಂ ಚ ಹೋಮಯೇತ್ ॥

---

ಬೆಳ್ಳಗಿರತಕ್ಕ ಅನ್ನದ ಪಾಯಸದಿಂದಲೂ, ಕೃಸರಾನ್ನದಿಂದಲೂ, ಮಾಡಬೇಕು.

೫೮. ಸಹಸ್ರವಾಗಲೀ, ಐನೂರಾಗಲೀ, ಅಷ್ಟೋತ್ತರಶತವಾಗಲೀ ಹೋಮಮಾಡಬೇಕು ಹೋಮಕ್ಕೆ ಮೇಲೆ ಹೇಳಿದ ಮಂತ್ರಗಳನ್ನು ಉಪಯೋಗಿಸಬೇಕು.

೫೯. ಪ್ರಧಾನಹೋಮವನ್ನು ಗಾಯತ್ರೀ ಮಂತ್ರದಿಂದ ಸಮಿತ್ತಿನಿಂದಲೂ, ಆಜ್ಯ ಚರುವಿನಿಂದ ಇಂದ್ರಾದಿ ದಿಕ್ಪಾಲಕ ಹೋಮವನ್ನೂ ಮಾಡಬೇಕು.

ವಜ್ರಾದೀನಾಂ ಚ ಹೋತವ್ಯಂ ಸಹಸ್ರಾರ್ಧಂ ತತಃ ಕ್ರಮಾತ್ ।
ಬ್ರಹ್ಮ ಜಜ್ಞೇತಿ ಮಂತ್ರೇಣ ಬ್ರಹ್ಮಣೇ ವಿಷ್ಣವೇ ಪುನಃ ॥೬೦॥
ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ ।
ತನ್ನೋ ವಿಷ್ಣುಃ ಪ್ರಚೋದಯಾತ್ ॥
ಅಯಂ ವಿಶೇಷಃ ಕಥಿತೋ ಹೋಮ ಮಾರ್ಗಃ ಸು ಶೋಭನಃ ।
ದೂರ್ವಯಾ ಕ್ಷೀರಯುಕ್ತೇನ ಪಂಚ ವಿಂಶತ್ ಪೃಥಕ್ ಪೃಥಕ್॥
ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ ।
ಉರ್ವಾರುಕ ಮಿವ ಬಂಧನಾ ನ್ಮೃತ್ಯೋ ರ್ಮುಕ್ಷೀಯ ಮಾಮೃತಾತ್ ।
ದೂರ್ವಾ ಹೋಮಃ ಪ್ರಶಸ್ತೋಯಂ ವಾಸ್ತು ಹೋಮಶ್ಚ ಸರ್ವಥಾ
ಪ್ರಾಯಶ್ಚಿತ್ತ ಮಘೋರೇಣ ಸರ್ಪಿಷಾ ಚ ಶತಂ ಶತಂ ॥೬೩॥
ಬ್ರಹ್ಮಾಣಂ ದಕ್ಷಿಣೇ ವಾಮೇ ವಿಷ್ಣುಂ ವಿಶ್ವಗುರುಂ ಶಿವಂ ।
ಮಧ್ಯೇ ದೇವ್ಯಾ ಸಮಂ ಜ್ಞೇಯ ಮಿಂದ್ರಾದಿ ಗಣ ಸೇವಿತಂ ॥೬೪॥

---

೬೦. ಐನೂರಾವರ್ತಿ ವಜ್ರಾದಿಗಳಿಗೆ ಕ್ರಮವಾಗಿ ಹೋಮವನ್ನು ಮಾಡಬೇಕು. "ಬ್ರಹ್ಮಜಜ್ಞಾನಂ" ಎಂಬ ಮಂತ್ರದಿಂದ ಬ್ರಹ್ಮನಿಗೂ "ನಾರಾಯಣಾಯ ವಿದ್ಮಹೇ" ಎಂಬ ಮಂತ್ರದಿಂದ ವಿಷ್ಣುವಿಗೂ ಹೋಮ ಮಾಡಬೇಕು.

೬೧–೬೨. ಈ ಮಂತ್ರದಿಂದ ಇಪ್ಪತ್ತೈದಾವೃತ್ತಿ ಬೇರೆಬೇರೆಯಾಗಿ ಹಾಲಿನಿಂದ ಮಿಶ್ರಿತವಾದ ದೂರ್ವೆಯಿಂದ ಹೋಮ ಮಾಡಬೇಕು. ಈ ಹೋಮಮಾರ್ಗವು ಬಹಳ ಮಂಗಳಕರವಾದುದು. ಇದನ್ನು ನಾನು ನಿನಗೆ ಹೇಳಿರುವೆನು.

೬೩. ಈ ದೂರ್ವಾಹೋಮವೂ ಮತ್ತು ವಾಸ್ತುಹೋಮವೂ ಸಹ ಬಹಳ ಪ್ರಶಸ್ತವಾಗಿದೆ. ತುಪ್ಪದಿಂದ ಅಘೋರಮಂತ್ರದಿಂದ ನೂರಾವೃತ್ತಿ ಪ್ರಾಯಶ್ಚಿತ್ತಹೋಮವನ್ನು ಮಾಡಬೇಕು.

೬೪. ಈಗ ದೇವತಾ ಮಂಡಲವನ್ನು ಹೇಳುತ್ತಾನೆ.—ದೇವೀ ಸಹಿತನಾದ ಜಗತ್ತಿಗೆ ಗುರುವಾದ ಶಿವನ ಬಲಭಾಗದಲ್ಲಿ ಬ್ರಹ್ಮನನ್ನು ಎಡಭಾಗದಲ್ಲಿ ವಿಷ್ಣುವನ್ನೂ, ಸುತ್ತಲೂ ಇಂದ್ರಾದಿ ದೇವತೆಗಳನ್ನೂ, ಆವಾಹಿಸಬೇಕು.

ಆದಿತ್ಯಂ ಭಾಸ್ಕರಂ ಭಾನುಂ ರವಿಂ ದೇವಂ ದಿವಾಕರಂ।
ಉಷಾಂ ಪ್ರಭಾಂ ತಥಾ ಪ್ರಜ್ಞಾಂ ಸಂಧ್ಯಾಂ ಸಾವಿತ್ರಿ ಮೇವಚ ॥
ಪಂಚ ಪ್ರಕಾರವಿಧಿನಾ ಖಖೋಲ್ಕಾಯ ಮಹಾತ್ಮನೇ ।
ವಿಸ್ತರಾಂ ಸುಭಗಾಂ ಚೈವ ವರ್ಧನೀಂ ಚ ಪ್ರದಕ್ಷಿಣಾಂ ॥೬೬॥
ಆಪ್ಯಾಯನೀಂ ಚ ಸಂಪೂಜ್ಯ ದೇವೀಂ ಪದ್ಮಾಸನೇ ರವಿಂ ।
ಪ್ರಭೂತಂ ವಾಽಥ ಕರ್ತವ್ಯಂ ವಿಮಲಂ ದಕ್ಷಿಣೇ ತಥಾ ॥೬೭॥
ಸಾರಂ ಪಶ್ಚಿಮ ಭಾಗೇಚ ಆರಾಧ್ಯಂ ಚೋತ್ತರೇ ಯಜೇತ್ ।
ಮಧ್ಯೇ ಸುಖಂ ವಿಜಾನೀಯಾತ್ ಕೇಸರೇಷು ಯಥಾ ಕ್ರಮಂ ॥೬೮॥
ದೀಪ್ತಾಂ ಸೂಕ್ಷ್ಮಾಂ ಜಯಾಂ ಭದ್ರಾಂ ವಿಭೂತಿಂ ವಿಮಲಾಂ ಕ್ರಮಾತ್ ।
ಅಮೋಘಾಂ ವಿದ್ಯುತಾಂ ಚೈವ ಮಧ್ಯತಃ ಸರ್ವತೋ ಮುಖೀಂ ॥

---

೬೫. ಆದಿತ್ಯ, ಭಾಸ್ಕರ, ಭಾನು, ರವಿ, ದಿವಾಕರರೆಂಬ ಪಂಚ ಆದಿತ್ಯರನ್ನೂ ಉಷಾ, ಪ್ರಭಾ, ಪ್ರಜ್ಞಾ, ಸಂಧ್ಯಾ, ಸಾವಿತ್ರಿಯೆಂಬ ಪಂಚ ದೇವಿಯರನ್ನೂ ಆವಾಹಿಸಬೇಕು.

೬೬–೬೭. ಪಂಚ ಪ್ರಕಾರ ವಿಧಿಯಿಂದ ಮಹಾತ್ಮನಾದ ಖಖೋಲ್ಕನೆಂಬ ದೇವನನ್ನು ಪೂಜಿಸಬೇಕು. ವಿಸ್ತರಾ, ಸುಭಗಾ, ವರ್ಧನೀ ಪ್ರದಕ್ಷಿಣಾ, ಆಪ್ಯಾಯನೀ ಎಂಬೀ ದೇವತೆಗಳನ್ನು ಪೂಜಿಸಿ, ಪದ್ಮಾಸನದಲ್ಲಿ ರವಿಯನ್ನು ಪೂಜಿಸಬೇಕು. ಒಳ್ಳೆಯ ಆಸನವನ್ನು ಕಲ್ಪಿಸಿ, ಅದನ್ನು ಹೆಚ್ಚಾಗಿ ವಿಮಲವನ್ನಾಗಿ ಮಾಡಬೇಕು.

೬೮. ಪಶ್ಚಿಮಭಾಗದಲ್ಲಿ ಸಾರವನ್ನೂ ಆರಾಧ್ಯನನ್ನೂ ಉತ್ತರದಲ್ಲಿ ಮಧ್ಯದಲ್ಲಿ ಸುಖವನ್ನೂ ಪೂಜಿಸಬೇಕು.

೬೯. ಕೇಸರದ ಸುತ್ತಲೂ, ಕ್ರಮವಾಗಿ ದೀಪ್ತಾ, ಸೂಕ್ಷ್ಮಾ, ಜಯಾ, ಭದ್ರಾ, ವಿಭೂತಿ, ವಿಮಲಾ, ಅಮೋಘಾ, ವಿದ್ಯುತಾ, ಈ ದೇವತೆಗಳನ್ನೂ, ಮಧ್ಯದಲ್ಲಿ ಸರ್ವತೋಮುಖಿಯನ್ನೂ ಪೂಜಿಸಬೇಕು.

ಸೋಮ ಮಂಗಾರಕಂ ಚೈವ ಬುಧಂ ಗುರು ಮನುಕ್ರಮಾತ್ ।
ಭಾರ್ಗವಂ ಚ ತಥಾ ಮಂದಂ ರಾಹುಂ ಕೇತುಂ ತಥೈವ ಚ ॥೨೦॥

ಪೂಜಯೇ ದ್ಧೋಮಯೇ ದೇವಂ ದಾಪಯೇಚ್ಚ ವಿಶೇಷತಃ ।
ಯೋಗಿನೋ ಭೋಜಯೇ ತ್ತತ್ರ ಶಿವತತ್ವೈಕ ಪಾರಗಾನ್ ॥೨೧॥

ದಿವ್ಯಾಧ್ಯಯನ ಸಂಪನ್ನಾನ್ ಕೃತ್ವೈವಂ ವಿಧಿ ವಿಸ್ತರಂ ।
ಹೋಮೇ ಪ್ರವರ್ತ ಮಾನೇ ಚ ಪೂರ್ವ ದಿ ಕ್ಸ್ಥಾನ ಮಧ್ಯಮೇ ॥
ಆರೋಹಯೇ ದ್ವಿಧಾನೇನ ರುದ್ರಾಧ್ಯಾಯೇನ ವೈ ನೃಪಂ ।
ಧಾರಯೇ ತ್ತತ್ರ ಭೂ ಪಾಲಂ ಘಟಿಕೈಕಾಂ ವಿಧಾನತಃ ॥೨೩॥

ಯಜಮಾನೋ ಜಪೇನ್ಮಂತ್ರಂ ರುದ್ರ ಗಾಯತ್ರಿ ಸಂಜ್ಞಕಂ ।
ಘಟಿಕಾಽರ್ಧಂ ತದರ್ಧಂ ವಾ ತತ್ರೈವಾಽಽಸನ ಮಾಲಭೇತ್ ॥೨೪॥

---

೨೦. ಚಂದ್ರ, ಅಂಗಾರಕ, ಬುಧ, ಗುರು, ಶುಕ್ರ, ಶನಿ, ರಾಹು, ಕೇತು, ಈ ಗ್ರಹಗಳನ್ನು ಕ್ರಮವಾಗಿ ಆವಾಹಿಸಿ ಪೂಜಿಸಬೇಕು.

೨೧. ಈ ಕ್ರಮವಾಗಿ ಹೆಚ್ಚಾಗಿ ಪೂಜೆಯನ್ನೂ, ಹೋಮವನ್ನೂ, ದಾನವನ್ನೂ ಸಹ ಮಾಡಬೇಕು. ಮತ್ತು ಶಿವನ ಮಾಹಾತ್ಮ್ಯೆಯನ್ನು ತಿಳಿದ ಶಿವ ಯೋಗಿಗಳಿಗೆ ಭೋಜನವನ್ನು ಮಾಡಿಸಬೇಕು.

೨೨-೨೩. ಅತ್ಯಂತ ಶ್ರೇಷ್ಠವಾದ ವೇದ ಮತ್ತು ಅದರ ಅರ್ಥವನ್ನು ಬಲ್ಲ ಬ್ರಾಹ್ಮಣರಿಗೆ ದಾನವನ್ನು ಕೊಡಿಸಿ ಅನಂತರ ಭೋಜನವನ್ನು ವಿಧಿಗನುಸಾರವಾಗಿ ಮಾಡಿಸಬೇಕು. ಹೋಮವಾಗುವ ಕಾಲದಲ್ಲಿ ರುದ್ರಾಧ್ಯಾಯವನ್ನು ಹೇಳುತ್ತಾ ಪೂರ್ವದಿಕ್ಕಿನ ಮಧ್ಯಭಾಗದಲ್ಲಿ ರಾಜನನ್ನು ತುಲಾರೋಹಣ ಮಾಡಿಸಬೇಕು. ಅಲ್ಲಿ ಶಾಸ್ತ್ರಾನುಸಾರವಾಗಿ ಒಂದು ಘಳಿಗೆಯುವರೆಗೆ ಅವನನ್ನು ಅಲ್ಲಿಯೇ ಕೂರಿಸಬೇಕು.

೨೪. ಯಜಮಾನನು ರುದ್ರ ಗಾಯತ್ರೀ ಎಂಬ ಮಂತ್ರವನ್ನು ಜಪ ಮಾಡುತ್ತಾ ಅರ್ಧಘಳಿಗೆ ಯಾಗಲೀ, ಆದರ ಅರ್ಧವಾಗಲೀ, ಅಲ್ಲಿಯೇ ಕೂತಿರಬೇಕು.

ಆಲೋಕ್ಯ ವಾರುಣಂ ಧೀಮಾನ್ ಕೂರ್ಚಹಸ್ತಃ ಸಮಾಹಿತಃ ।
ನೃಪಶ್ಚ ಭೂಷಣೈ ರ್ಯುಕ್ತಃ ಖಡ್ಗ ಖೇಟಕ ಧಾರಕಃ ॥೭೫॥
ಸ್ವಸ್ತಿರಿತ್ಯಾದಿಭಿ ಶ್ಚಾದಾ ವಂತೇ ಚೈವ ವಿಶೇಷತಃ ।
ಪುಣ್ಯಾಹಂ ಬ್ರಾಹ್ಮಣೈಃ ಕಾರ್ಯಂ ವೇದ ವೇದಾಂಗ ಪಾರಗೈಃ ॥೭೬॥
ಜಯಮಂಗಲ ಶಬ್ದಾದಿ ಬ್ರಹ್ಮಘೋಷೈಃ ಸು ಶೋಭನೈಃ ।
ನೃತ್ತ ವಾದ್ಯಾದಿಭಿ ರ್ಗೀತೈಃ ಸರ್ವ ಶೋಭಾ ಸಮನ್ವಿತೈಃ ॥೭೭॥
ಸ್ವನೋೀವಂ ಚಂದ್ರ ದಿಗ್ಭಾಗೇ ಸುವರ್ಣಂ ತತ್ರ ನಿ(ವಿ)ಕ್ಷಿಪೇತ್ ।
ತುಲಾಧಾರೌ ಸಮೌ ವೃತ್ತೌ ತುಲಾಭಾರಃ ಸದಾ ಭವೇತ್ ॥೭೮॥
ಶತನಿಷ್ಕಾಧಿಕಂ ಶ್ರೇಷ್ಠಂ ತದರ್ಧಂ ಮಧ್ಯಮಂ ಸ್ಮೃತಂ ।
ತಸ್ಯಾರ್ಧಂ ಚ ಕನಿಷ್ಠಂ ಸ್ಯಾತ್ತ್ರಿವಿಧಂ ತತ್ರ ಕಲ್ಪಿತಂ ॥೭೯॥

---

೭೫. ಬುದ್ಧಿವಂತನಾದ ಬ್ರಾಹ್ಮಣನು ಕೂರ್ಚವನ್ನು ಕೈಯ್ಯಲ್ಲಿ ಹಿಡಿದುಕೊಂಡು ಶಾಂತವಾದ ಮನಸ್ಸುಳ್ಳವನಾಗಿ ಸೂರ್ಯಬಿಂಬವನ್ನು ನೋಡುತ್ತಿರಬೇಕು. ರಾಜನು ಅಲಂಕಾರಗಳಿಂದ ಅಲಂಕೃತನಾಗಿಯೂ ಖಡ್ಗ, ಗುರಾಣಿ ಮುಂತಾದ ಆಯುಧಧಾರಿಯಾಗಿಯೂ ಇರಬೇಕು.

೭೬. ವೇದ ಮತ್ತು ಅದರ ಅಂಗಗಳನ್ನು ಚೆನ್ನಾಗಿತಿಳಿದ ಬ್ರಾಹ್ಮಣ ನೊಡನೆ "ಸ್ವಸ್ತಿನ ಇಂದ್ರೋವೃದ್ಧ ಶ್ರವಾಃ" ಇತ್ಯಾದಿ ಮಂತ್ರಗಳಿಂದ ಸ್ವಸ್ತಿಪುಣ್ಯಾಹ ವಾಚನಗಳನ್ನು ಆರಂಭದಲ್ಲಿಯೂ, ಕೊನೆಯಲ್ಲಿಯೂ, ಮಾಡಿಸಬೇಕು.

೭೭. ಅತ್ಯಂತ ಮಂಗಳ ಕರಗಳಾದ ಜಯ ಶಬ್ದಗಳನ್ನೂ, ಮಂಗಳ ಬೋಧಕ ಶಬ್ದಗಳನ್ನೂ, ವೇದ ಘೋಷಗಳನ್ನೂ, ನರ್ತನ, ವಾದ್ಯ, ಗಾನ, ಇವುಗಳನ್ನೂ ಮಾಡಿಸಬೇಕು.

೭೮. ಪೂರ್ವೋಕ್ತಪ್ರಕಾರವಾಗಿ ಸ್ವಕೀಯವಾದ ಸುವರ್ಣವನ್ನು ಆ ತುಲಾದಲ್ಲಿ ಇಡಬೇಕು. ಈರೀತಿಯಾಗಿ ಸಮವಾದ ತುಲಾಭಾರವು ಅಕ್ಷಯವಾಗುತ್ತದೆ.

೭೯. ಆ ತುಲಾದಲ್ಲಿ ಇಡತಕ್ಕ ಸುವರ್ಣನಾಣ್ಯವು ನೂರಕ್ಕಿಂತ ಹೆಚ್ಚಾದರೆ ಉತ್ತಮವು. ಅದರ ಅರ್ಧ ಮಧ್ಯಮವಾದುದು. ಅದರ ಅರ್ಧವು ಕನಿಷ್ಠವಾದುದು. ಈ ರೀತಿಯಾಗಿ ಮೂರು ವಿಧವಾಗಿದೆ.

ವಸ್ತ್ರಯುಗ್ಮ ಮಥೋಷ್ಣೀಷಂ ಕುಂಡಲಂ ಕಂಠಶೋಭನಂ ।
ಅಂಗುಲೀ ಭೂಷಣಂ ಚೈವ ಮಣಿ ಬಂಧಸ್ಯ ಭೂಷಣಂ ॥೮೦॥

ಏತಾನಿ ಚೈವ ಸರ್ವಾಣಿ ಪ್ರಾರಂಭೇ ಧರ್ಮ ಕರ್ಮಣಿ ।
ಪಾಶುಪತ ವ್ರತಾ ಯಾಥ ಭಸ್ಮಾಂಗಾಯ ಪ್ರದಾಪಯೇತ್ ॥೮೧॥

ಪೂರ್ವೋಕ್ತ ಭೂಷಣಂ ಸರ್ವಂ ಸೋಷ್ಣೀಷಂ ವಸ್ತ್ರ ಸಂಯುತಂ ।
ದದ್ಯಾದೇತ ತ್ರ್ಯಯೋಕ್ತ್ರ್ಯಭ್ಯ ಆಚ್ಛಾದನ ಪಟಂ ಬುಧಃ ॥೮೨॥

ದಕ್ಷಿಣಾಂ ಚ ಶತಂ ಸಾರ್ಧಂ ತದರ್ಧಂವಾ ಪ್ರದಾಪಯೇತ್ ।
ಯೋಗಿನಾಂ ಚೈವ ಸರ್ವೇಷಾಂ ಪೃಥಙ್ನಿಷ್ಕಂ ಪ್ರದಾಪಯೇತ್ ॥

ಯೋಗೋಪ ಕರಣಂ ದಿವ್ಯ ಮಾಚಾರ್ಯಾಯ ಪ್ರದಾಪಯೇತ್ ।
ಇತರೇಷಾಂ ಯತೀನಾಂ ತು ಪೃಥಙ್ನಿಷ್ಕಂ ಪ್ರದಾಪಯೇತ್ ॥೮೪॥

---

೮೦–೮೧. ಎರಡು ಹೊಸ ವಸ್ತ್ರಗಳು, ರುಮಾಲು, ಕಿವಿಗೆ ಹಾಕುವ ಕುಂಡಲ, ಹಾರ, ಉಂಗುರ, ಕಡಗ, ಇವೇ ಮುಂತಾದ ಆಭರಣಗಳನ್ನು ಧರ್ಮಕರ್ಮದ ಅಗ್ರಪೂಜೆಯನ್ನಾಗಿ ಪಾಶುಪತ ವ್ರತನಿಷ್ಠನಾದ ಶೈವ ವ್ರತಾಚಾರ್ಯನಿಗೆ ದಾನಮಾಡಬೇಕು. ಅಂದರೆ ಹಿಂದೆಹೇಳಿದ ಆಭರಣಗಳನ್ನು ಅವನಿಗೆ ಕೊಡಬೇಕು.

೮೨. ಹಿಂದೆ ಹೇಳಿದ ಎಲ್ಲಾ ಒಡವೆಗಳನ್ನೂ, ರುಮಾಲು ಉಡುವ ಬಟ್ಟೆ,ಹೊದೆಯುವ ಬಟ್ಟೆ ಇತ್ಯಾದಿಗಳನ್ನು ಋತ್ವಿಕ್ ಜನರಿಗೆ ದಾನಮಾಡಬೇಕು.

೮೩. ಋತ್ವಿಜರಿಗೆ ನೂರೈವತ್ತಾಗಲೀ, ಅದರ ಅರ್ಧದಷ್ಟಾಗಲಿ, ಸುವರ್ಣ ನಾಣ್ಯಗಳನ್ನು ದಕ್ಷಿಣೆ ಕೊಡಿಸಬೇಕು. ಸಮಸ್ತರಾದ ಶಿವಯೋಗಿಗಳಿಗೆ ಪ್ರತ್ಯೇಕವಾಗಿ ನಾಣ್ಯಗಳನ್ನು ಕೊಡಿಸಬೇಕು.

೮೪. ಆಚಾರ್ಯನಿಗೆ ಯಾಗಕ್ಕೆ ಬೇಕಾದ ಶ್ರೇಷ್ಠವಾದ ಸಲಕರಣೆಗಳನ್ನು ಕೊಡಬೇಕು. ಶಾಂತರಾದ ಇತರರಿಗೂ ಸಹ ಸುವರ್ಣನಾಣ್ಯವನ್ನು ಬೇರೆ ಬೇರೆಯಾಗಿ ಕೊಡಬೇಕು.

ತುಲಾರೋಹ ಸುವರ್ಣಂ ಚ ಶಿವಾಯ ವಿನಿವೇದಯೇತ್ ।
ಪ್ರಾಸಾದಂ ಮಂಡಪಂ ಚೈವ ಪ್ರಾಕಾರಂ ಭೂಷಣಂ ತಥಾ ॥೮೫॥

ಸುವರ್ಣ ಪುಷ್ಪಂ ಪಟಹಂ ಖಡ್ಗಂ ವೈ ಕೋಶಮೇವ ಚ ।
ಕೃತ್ವಾ ದತ್ವಾ ಶಿವಾಯಾಥ ಕಿಂಚಿಚ್ಛೇಷಂ ಚ ಬುದ್ಧಿಮಾನ್ ॥೮೬॥

ಆಚಾರ್ಯೇಭ್ಯಃ ಪ್ರದಾತವ್ಯಂ ಭಸ್ಮಾಂಗೇಭ್ಯೋ ವಿಶೇಷತಃ ।
ಬಂದೀಕೃತಾನ್ ವಿಸೃಜ್ಯಾಥ ಕಾರಾಗೃಹ ನಿವಾಸಿನಃ ॥೮೭॥

ಸಹಸ್ರ ಕಲಶೈ ಸ್ತತ್ರ ಸೇಚಯೇ ತ್ಪರಮೇಶ್ವರಂ ।
ಘೃತೇನ ಕೇವಲೇನಾಪಿ ದೇವದೇವ ಮುಮಾಪತಿಂ ॥೮೮॥

ಪಯಸಾ ವಾಽಥ ದಧ್ನಾವಾ ಸರ್ವದ್ರವ್ಯೈ ರಥಾಪಿ ವಾ ।
ಬ್ರಹ್ಮ ಕೂರ್ಚೇನ ವಾ ದೇವಂ ಪಂಚ ಗವ್ಯೇನ ವಾ ಪುನಃ ॥೮೯॥

ಗಾಯತ್ರ್ಯಾ ಚೈವ ಗೋಮೂತ್ರಂ ಗೋಮಯಂ ಪ್ರಣವೇನ ವಾ ।
ಆಪ್ಯಾಯಸ್ವೇತಿ ವೈ ಕ್ಷೀರಂ ದಧಿಕ್ರಾವ್ಣೇತಿ ವೈ ದಧಿ ॥೯೦॥

---

೮೫–೮೭. ತುಲಾರೋಹಣವನ್ನು ಮಾಡಿಸಿಕೊಂಡ ಬುದ್ಧಿವಂತನಾದ ರಾಜನು ಹಿಂದೆ ಹೇಳಿದ ಪ್ರಕಾರವಾಗಿ ತುಲಾದಲ್ಲಿ ಇರಿಸಿದ ಸವರ್ಣದಿಂದ ಪರಮೇಶ್ವರನಿಗೋಸ್ಕರವಾಗಿ ಮಹಡಿಯುಳ್ಳ ದೇವಾಲಯ, ಮಂಟಪ, ಕೋಟೆ, ಆಭರಣ, ಚಿನ್ನದ ಹೂವು, ಪಟಹವೆಂಬ ವಾದ್ಯ ವಿಶೇಷ, ಖಡ್ಗ, ಒರೆ, ಇತ್ಯಾದಿಗಳನ್ನು ಮಾಡಿಸಿ, ಶಿವನಿಗೆ ಅರ್ಪಿಸಬೇಕು. ಆ ಸುವರ್ಣದಲ್ಲಿ ಸ್ವಲ್ಪ ಭಾಗವನ್ನು ಭಸ್ಮವನ್ನು ಬಳಿದುಕೊಂಡಿರುವ ಆಚಾರ್ಯರಿಗೆ ದಾನಮಾಡಬೇಕು. ಮತ್ತು ಈ ಉತ್ಸವದ ಸಂತೋಷದ ಜ್ಞಾಪಕಾರ್ಥವಾಗಿ ಸೆರೆಯಲ್ಲಿರತಕ್ಕ ದುಃಖಿಗಳನ್ನು ಬಿಡಿಸಿ ಅವರಿಗೆ ಸಂತೋಷವುಂಟಾಗುವಂತೆ ಮಾಡಬೇಕು.

೮೮–೮೯. ಉಮಾದೇವಿಯ ಪತಿಯೂ, ದೇವತೆಗಳಿಗೆ ದೇವನೂ ಆದ ಪರಮೇಶ್ವರನನ್ನು ಬ್ರಹ್ಮಕೂರ್ಚದಿಂದ ಸಹಸ್ರ ಕಲಶಗಳ ತೀರ್ಥಗಳಿಂದಾಗಲೀ ಅಥವಾ ಬರಿಯ ತುಪ್ಪದಿಂದಾಗಲೀ, ಹಾಲಿನಿಂದಾಗಲೀ, ಮೊಸರಿನಿಂದಾಗಲೀ, ಸರ್ವದ್ರವ್ಯಗಳಿಂದಾಗಲೀ, ಪಂಚಗವ್ಯದಿಂದಾಗಲೀ ಪ್ರೋಕ್ಷಿಸಬೇಕು.

೯೦–೯೧. ದೇವೇಶನಾದ ಪರಮೇಶ್ವರನಿಗೆ ಗಾಯತ್ರಿಯಿಂದ ಗೋಮೂತ್ರವನ್ನೂ, ಓಂಕಾರದಿಂದ ಗೋಮಯವನ್ನೂ, '' ಆಪ್ಯಾಯಸ್ವ''

ತೇಜೋಽಸೀ ತ್ಯಾಜ್ಯಮೀಶಾನ ಮಂತ್ರೇಣೈವಾಭಿ ಷೇಚಯೇತ್ ।
ದೇವ ಸ್ಯತ್ವೇತಿ ದೇವೇಶಂ ಕುಶಾಂಬು ಕಲಶೇನ ವೈ ॥೯೧॥
ರುದ್ರಾಧ್ಯಾಯೇನ ವಾ ಸರ್ವಂ ಸ್ನಾಪಯೇ ತ್ಪರಮೇಶ್ವರಂ ।
ಸಹಸ್ರ ಕಲಶಂ ಶಂಭೋ ರ್ನಾಮ್ನಾಂ ಚೈವ ಸಹಸ್ರ ಕೈಃ ॥೯೨॥
ವಿಷ್ಣುನಾ ಕಥಿ ತೈ ರ್ವಾಽಪಿ ದಂಡಿನಾ ಕಥಿತೈ ಸ್ತು ವಾ ।
ದಕ್ಷೇಣ ಮುನಿ ಮುಖ್ಯೇನ ಕೀರ್ತಿತೈ ರಥ ವಾ ಪುನಃ ॥೯೩॥
ಮಹಾಪೂಜಾ ಪ್ರಕರ್ತವ್ಯಾ ಮಹಾ ದೇವಸ್ಯ ಭಕ್ತಿತಃ ।
ಶಿವಾರ್ಚಕಾಯ ದಾತವ್ಯಾ ದಕ್ಷಿಣಾ ಸ್ವಗುರೋಃ ಸದಾ ॥೯೪॥
ದೇಹಾರ್ಣವಂ ಚ ಸರ್ವೇಷಾಂ ದಕ್ಷಿಣಾಂ ಚ ಯಥಾ ಕ್ರಮಂ ।
ದೀನಾಂಧ ಕೃಪಣಾ ನಾಂ ಚ ಬಾಲವೃದ್ಧ ಕೃಶಾತುರಾನ್ ॥೯೫॥

---

ಎಂಬ ಮಂತ್ರದಿಂದ ಹಾಲನ್ನೂ, ದಧಿಕ್ರಾವ್ಣೋ ಅಕಾರಿಷಂ'' ಎಂಬ ಮಂತ್ರದಿಂದ ಮೊಸರನ್ನೂ, ''ತೆಜೋಽಸಿ'' ಎಂಬ ಮಂತ್ರದಿಂದ ತುಪ್ಪವನ್ನೂ, ''ದೇವಸ್ಯತ್ವಾ'' ಎಂಬ ಮಂತ್ರದಿಂದ ದರ್ಭೆಸಹಿತವಾದ ಕಲಶದ ನೀರನ್ನೂ ರುದ್ರಾಧ್ಯಾಯದಿಂದ ಎಳನೀರು ಮುಂತಾದ ದ್ರವ್ಯಗಳನ್ನೂ ಸಹ ಉಪಯೋಗಿಸಿ ಸ್ನಾನಮಾಡಿಸಬೇಕು.

೯೨–೯೪. ವಿಷ್ಣುವಿನಿಂದ ಹೇಳಲ್ಪಟ್ಟ, ದಂಡಿಯು ಹಿಂದಿನ ಭಾಗದಲ್ಲಿ ಹೇಳಿದ, ಅಥವಾ ಶಿವರಹಸ್ಯದಲ್ಲಿ ಮುನಿಶ್ರೇಷ್ಠನಾದ ದಕ್ಷನಿಂದ ಹೇಳಲ್ಪಟ್ಟ ಶಿವಸಹಸ್ರನಾಮಗಳಿಂದ ಶಿವಸಹಸ್ರ ಕಲಶಗಳಲ್ಲಿ ಮಹಾದೇವನ ಪೂಜೆಯನ್ನೂ, ಸಹ ಅತಿಭಕ್ತಿಯಿಂದ ಮಾಡಬೇಕು. ಶಿವನ ಪೂಜೆಯನ್ನು ಮಾಡಿದ ತನ್ನ ಗುರುವಿಗೆ ದಕ್ಷಿಣೆಯನ್ನು ಕೊಡಬೇಕು.

೯೫–೯೬. ತುಲಾದಲ್ಲಿ ಇರಿಸಿದ ದ್ರವ್ಯವನ್ನು ಕ್ರಮವನ್ನನುಸರಿಸಿ ಋತ್ವಿಜರಿಗೆ ದಕ್ಷಿಣೆಯನ್ನಾಗಿ ಕೊಡಬೇಕು. ದೀನರಿಗೂ, ಕುರುಡರಿಗೂ, ಕೃಪಣರಿಗೂ, ಆ ದ್ರವ್ಯವನ್ನು ಕ್ರಮವಾಗಿ ದಾನಮಾಡಬೇಕು.

ಭೋಜಯೇಚ್ಚ ವಿಧಾನೇನ ದಕ್ಷಿಣಾಮಪಿ ದಾಪಯೇತ್ ॥೯೬॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ತುಲಾಪುರುಷ ದಾನ ವಿಧಾನಂ ನಾಮ ಅಷ್ಟಾವಿಂಶತಿತಮೋಽಧ್ಯಾಯಃ

---

ಬಾಲಕರೂ, ವೃದ್ಧರೂ ಅನ್ನವಿಲ್ಲದೇ ಕೃಶರಾದವರೂ, ರೋಗಿಗಳೂ, ಇವರಿಗೆ ಊಟವನ್ನು ಮಾಡಿಸಿ ಯಥಾವಿಧಿಯಾಗಿ ದಕ್ಷಿಣೆಗಳನ್ನುಕೊಡಿಸಬೇಕು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರ ಭಾಗದಲ್ಲಿ ತುಲಾಪುರುಷ ದಾನ ವಿಧಿಯೆಂಬ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ಏಕೋನ ತ್ರಿಂಶೋಽಧ್ಯಾಯಃ

**॥ ಸನತ್ಕುಮಾರ ಉವಾಚ ॥**

**ತುಲಾ ತೇ ಕಥಿತಾ ಹ್ಯೇಷಾ ಆದ್ಯಾ ಸಾಮಾನ್ಯರೂಪಿಣೀ ।**
**ಹಿರಣ್ಯ ಗರ್ಭಂ ವಕ್ಷ್ಯಾಮಿ ದ್ವಿತೀಯಂ ಸರ್ವ ಸಿದ್ಧಿದಂ ॥ ೧ ॥**
**ಹೈಮ ಮೇವಂ ಶುಭಂ ಕುರ್ಯಾ ತ್ಸರ್ವಾಲಂಕಾರ ಸಂಯುತಂ ।**
**ಅಧಃ ಪಾತ್ರೇ ಸ್ಮರೇದ್ದೇವೀಂ ಗುಣತ್ರಯ ಸಮನ್ವಿತಾಂ ॥ ೨ ॥**
**ಚತುರ್ವಿಂಶತಿ ಕಾಂ ದೇವೀಂ ಬ್ರಹ್ಮ ವಿಷ್ಣ್ವಗ್ನಿ ರೂಪಿಣೀಂ ॥ ೩ ॥**

---

ಶ್ರೀ ಲಿಂಗಮಹಾಪುರಾಣದ ಉತ್ತರ ಭಾಗದಲ್ಲಿ ಇಪ್ಪತ್ತೊಂಬತ್ತನೆಯ ಅಧ್ಯಾಯವು.

೧. ಸನತ್ಕುಮಾರ ಮುನಿಯು ಹೇಳಿದನು:— ಓ ಮನುವೇ, ನಿನಗೆ ನಾನು ಸಾಮಾನ್ಯರೂಪವಾದ ಮೊದಲನೆಯದಾದ ಈ ತುಲಾ ದಾನವನ್ನು ಹೇಳಿರುವೆನು. ಇನ್ನುಮುಂದೆ ಎರಡನೆಯದಾದ ಸಕಲ ಸಿದ್ಧಿಗಳನ್ನೂ ಸಹ ಕೊಡುವ ಹಿರಣ್ಯಗರ್ಭವೆಂಬ ದಾನವನ್ನು ಹೇಳುವೆನು ಕೇಳು.

೨–೩. ಸಮಸ್ತ ಅಲಂಕಾರವುಳ್ಳ ಸುವರ್ಣಮಯವಾದ ಮಂಗಳಕರವಾದ ಪಾತ್ರೆಯನ್ನು ಮಾಡಿಸಬೇಕು. ಅಧಃಪಾತ್ರದಲ್ಲಿ ಸತ್ವರಜಸ್ತಮಸ್ಸುಗಳೆಂಬ ಮೂರುಗುಣಗಳುಳ್ಳವಳಾಗಿಯೂ, ಬ್ರಹ್ಮ, ವಿಷ್ಣು, ಅಗ್ನಿಸ್ವರೂಪಳಾಗಿಯೂ, ಇಪ್ಪತ್ತು ನಾಲ್ಕನೆಯತತ್ವ ಸ್ವರೂಪಳಾಗಿಯೂ, ಇರುವ ಚತುರ್ವಿಂಶತಿಕಾದೇವಿಯನ್ನು ಸ್ಮರಿಸಬೇಕು.

ಊರ್ಧ್ವಪಾತ್ರೇ ಗುಣಾತೀತಂ ಷಡ್ವಿಂಶಕ ಮುಮಾಪತಿಂ ॥ ೪ ॥
ಆತ್ಮಾನಂ ಪುರುಷಂ ಧ್ಯಾಯೇತ್ ಪಂಚ ವಿಂಶಕ ಮಗ್ರಜಂ ।
ಪೂರ್ವೋಕ್ತ ಸ್ಥಾನ ಮಧ್ಯೇಽಥ ವೇದಿಕೋಪರಿ ಮಂಡಲೇ ॥ ೫ ॥
ಶಾಲಿಮಧ್ಯೇ ಕ್ಷಿಪೇನ್ನೀತ್ವಾ ನವ ವಸ್ತ್ರೈಶ್ಚ ವೇಷ್ಟಯೇತ್ ।
ಮಾಷ ಕಲ್ಕೇನ ಚಾಲಿಪ್ಯ ಪಂಚ ದ್ರವ್ಯೇಣ ಪೂಜಯೇತ್ ॥ ೬ ॥
ಈಶಾನಾದ್ಯೈ ರ್ಯಥಾ ನ್ಯಾಯ್ಯಂ ಪಂಚಭಿಃ ಪರಿಪೂಜಯೇತ್ ।
ಪೂರ್ವವಚ್ಛಿವ ಪೂಜಾ ಚ ಹೋಮಶ್ಚೈವ ಯಥಾ ಕ್ರಮಂ ॥ ೭ ॥
ದೇವೀಂ ಗಾಯತ್ರಿಕಾಂ ಜಪ್ತ್ವಾ ಪ್ರವಿಶೇ ತ್ಪ್ರಾಙ್ಮುಖಃ ಸ್ವಯಂ ।
ವಿಧಿನೈವ ತು ಸಂಪಾದ್ಯ ಗರ್ಭಾಧಾನಾದಿಕಾಂ ಕ್ರಿಯಾಂ ॥ ೮ ॥
ಕೃತ್ವಾ ಷೋಡಶ ಮಾರ್ಗೇಣ ವಿಧಿನಾ ಬ್ರಾಹ್ಮಣೋತ್ತಮಃ ।
ದೂರ್ವಾಂಕುರೈಸ್ತು ಕರ್ತವ್ಯಾ ಸೇಚನಾ ದಕ್ಷಿಣೇ ಪುಟೇ ॥ ೯ ॥

---

೪-೬. ಊರ್ಧ್ವಪಾತ್ರದಲ್ಲಿ ಸತ್ತ್ವರಜಸ್ತಮೋಗುಣಗಳಿಲ್ಲದವನಾಗಿಯೂ, ಉಮಾಪತಿಯಾಗಿಯೂ, ಮೊದಲು ಹುಟ್ಟಿದವನಾದ, ಇಪ್ಪತ್ತೊಂದನೆಯ ತತ್ತ್ವವಾದ, ಆತ್ಮನೆಂಬ ಪುರುಷನನ್ನು ಧ್ಯಾನಿಸಬೇಕು. ಅನಂತರ ಹಿಂದೆ ಹೇಳಿದ ಸ್ಥಾನವಾದ ವೇದಿಕೆಯ ಮೇಲ್ಭಾಗದಲ್ಲಿ ಮಂಡಲದಲ್ಲಿ ತೆಗೆದುಕೊಂಡು ಹೋಗಿ ಅಕ್ಕಿಯ ಮಧ್ಯದಲ್ಲಿ ಇಡಬೇಕು. ಹೊಸ ವಸ್ತ್ರವನ್ನು ಸುತ್ತಿ ಉದ್ದಿನ ಹಿಟ್ಟಿನಿಂದ ಲೇಪಿಸಿ ಪಂಚದ್ರವ್ಯಗಳಿಂದ ಪೂಜಿಸಬೇಕು.

೭. ಈಶಾನಾದಿ ಪಂಚ ಮಂತ್ರಗಳಿಂದ ವಿಧಿಗನುಸಾರವಾಗಿ ಪೂಜೆಮಾಡಬೇಕು. ಶಿವಪೂಜೆಯನ್ನೂ, ಹೋಮವನ್ನೂ ಸಹ ಹಿಂದಿನಂತೆಯೇ ಆಚರಿಸಬೇಕು.

೮. ಗಾಯತ್ರಿಯನ್ನು ಜಪಿಸಿ ತಾನು ಪೂರ್ವ ದಿಕ್ಕನ್ನು ಅನುಸರಿಸಿ ಪ್ರವೇಶಿಸಬೇಕು. ಅನಂತರ ಷೋಡಶ ಸಂಸ್ಕಾರ ಕ್ರಮದಿಂದ ಗರ್ಭಾಧಾನಾದಿ ಷೋಡಶ ಕರ್ಮಗಳನ್ನು ವಿಧಿಗನುಸಾರವಾಗಿ ಮಾಡಬೇಕು.

೯-೧೦. ದಕ್ಷಿಣ ಕರ್ಣಪ್ರದೇಶದಲ್ಲಿ ದೂರ್ವೆಗಳಿಂದ ಪ್ರೋಕ್ಷಿಸ

ಔದುಂಬರ ಫಲ್ಯೈ ಸ್ಸಾರ್ಧ ಮೇಕ ವಿಂಶ ತ್ಕು ಶೋದಕಂ ।
ಈಶಾನ್ಯಾಂ ತಾ ವ ದೇವಾ ತ್ರ ಕುರ್ಯಾ ತ್ಸೀಮಂತ ಕರ್ಮಣಿ ॥೧೦॥
ಉದ್ವಹೇ ತ್ಕನ್ಯಕಾಂ ಕೃತ್ವಾ ತ್ರಿಂಶನ್ನಿಷ್ಕೇಣ ಶೋಭನಾಂ ।
ಅಲಂಕೃತ್ಯ ತಥಾ ಹುತ್ವಾ ಶಿವಾಯ ವಿನಿವೇದಯೇತ್ ॥೧೧॥
ಅನ್ನ ಪ್ರಾಶನಕೇ ವಿದ್ವಾನ್ ಭೋಜಯೇ ತ್ಪಾಯಸಾ ದಿಭಿಃ ।
ಏವಂ ವಿಶ್ವಜಿತಾಂತಾ ನ್ಯೈ ಗರ್ಭಾಧಾನಾದಿಕಾಃ ಕ್ರಿಯಾಃ ॥೧೨॥
ಶಕ್ತಿಬೀಜೇನ ಕರ್ತವ್ಯಾ ಬ್ರಾಹ್ಮಣೈ ರ್ವೇದ ಪಾರಗೈಃ ।
ಶೇಷಂ ಸರ್ವಂ ಚ ವಿಧಿವತ್ ತುಲಾ ಹೇಮವದಾ ಚರೇತ್ ॥೧೩॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ಏಕೋನ
ತ್ರಿಂಶೋಽಧ್ಯಾಯ

---

ಬೇಕು. ಸೀಮಂತಕರ್ಮದಲ್ಲಿ ಅತ್ತಿಯ ಹಣ್ಣಿನೊಂದಿಗೆ ಇಪ್ಪತ್ತೊಂದು ದರ್ಭೆಯೊಡನೆ ತರ್ಪಣದ ನೀರನ್ನು ಈಶಾನ್ಯ ದಿಕ್ಕಿನಲ್ಲಿ ಬಿಡಬೇಕು.

೧೧. ಮುವ್ವತ್ತು ಚಿನ್ನದ ನಾಣ್ಯಗಳಿಂದ ಮಂಗಳಕರವಾದ ಕನ್ಯೆಯನ್ನು ಮಾಡಿಸಿ ಅದನ್ನು ಅಲಂಕರಿಸಿ ವಿವಾಹ ಮಾಡಿ ಅನಂತರದಲ್ಲಿ ಹೋಮವನ್ನು ಮಾಡಿ, ಶಿವನಿಗೆ ಅರ್ಪಿಸಬೇಕು.

೧೨–೧೩. ಪಾಯಸಾದಿಗಳಿಂದ ವಿದ್ವಾಂಸನಾದವನು ಅನ್ನಪ್ರಾಶನವನ್ನು ಮಾಡಿಸಬೇಕು. ಈ ರೀತಿಯಾಗಿ ವೇದ ಮತ್ತು ಅದರ ಅರ್ಥವನ್ನು ತಿಳಿದ ಪಂಡಿತರಾದ ಬ್ರಾಹ್ಮಣೋತ್ತಮರೊಂದಿಗೆ ಶಕ್ತಿಬೀಜದಿಂದ ಗರ್ಭಾದಾನಾದಿಯಾಗಿ ವಿಶ್ವಜಿದಾಪ್ತೋರ್ಯಾಮಾಂತವಾದ ಕರ್ಮಗಳನ್ನು ಮಾಡಬೇಕು. ಮತ್ತು ಉಳಿದ ಕರ್ಮಗಳನ್ನು ತುಲಾಹೋಮದಂತೆ ವಿಧಿಗನುಸಾರವಾಗಿ ಮಾಡಬೇಕು. ಹೆಚ್ಚಿನ ವಿವರಗಳನ್ನು ಆಗ್ನೇಯ ಪುರಾಣದಲ್ಲಿ ಹೇಳಿದೆ.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಇಪ್ಪತ್ತೊಂಬತ್ತನೆಯ
ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
## ತ್ರಿಂಶೋಽಧ್ಯಾಯಃ

**॥ ಸನತ್ಕುಮಾರ ಉವಾಚ ॥**

**ಅಧುನಾ ಸಂಪ್ರವಕ್ಷ್ಯಾಮಿ ತಿಲಪರ್ವತ ಮುತ್ತಮಂ ।**
**ಪೂರ್ವೋಕ್ತ ಸ್ಥಾನಕಾಲೇ ತು ಕೃತ್ವಾ ಸಂಪೂಜ್ಯ ಯತ್ನತಃ ॥ ೧ ॥**

**ಸುಸಮೇ ಭೂತಲೇ ರಮ್ಯೇ ವೇದಿನಾ ಚ ವಿವರ್ಜಿತೇ ।**
**ದಶತಾಲ ಪ್ರಮಾಣೇನ ದಂಡಂ ಸಂಸ್ಥಾಪ್ಯ ವೈ ಮುನೇ ॥ ೨ ॥**

**ಅದ್ಭಿಃ ಸಂಪ್ರೋಕ್ಷ್ಯ ಪಶ್ಚಾದ್ಧಿ ತಿಲಾಂ ಸ್ತ್ವಸ್ಮಿನ್ವಿನಿಕ್ಷಿಪೇತ್ ।**
**ಪಂಚಗವ್ಯೇನ ತಂ ದೇಶಂ ಪ್ರೋಕ್ಷಯೇ ದ್ಬ್ರಾಹ್ಮಣೋತ್ತಮಃ ॥**

**ಮಂಡಲಂ ಕಲ್ಪಯೇ ದ್ವಿದ್ವಾನ್ ಪೂರ್ವವತ್ಸುಸಮಂತತಃ ।**
**ನವವಸ್ತ್ರೈಶ್ಚ ಸಂಸ್ಥಾಪ್ಯ ರಮ್ಯ ಪುಷ್ಪೈ ರ್ವಿಕೀರ್ಯ ಚ ॥ ೪ ॥**

---

**ಶ್ರೀ ಲಿಂಗಮಹಾಪುರಾಣದ ಉತ್ತರ ಭಾಗದಲ್ಲಿ ಮುವ್ವತ್ತನೆಯ ಅಧ್ಯಾಯವು.**

೧–೨. ಈಗ ಉತ್ತಮವಾದ ತಿಲಪರ್ವತದ ದಾನವನ್ನು ಯಥಾ ವಿಧಿಯಾಗಿ ಹೇಳುವೆನು ಕೇಳು. ಹಿಂದೆ ಹೇಳಿದ ಸ್ಥಾನ ಮತ್ತು ಕಾಲ ಗಳಲ್ಲಿ ಪ್ರಯತ್ನ ಪೂರ್ವಕವಾಗಿ ಪೂಜಿಸಿ ಸಮವಾಗಿಯೂ, ಮನೋಹರ ವಾಗಿಯೂ, ವೇದಿಯಿಲ್ಲದೆಯೂ, ಇರತಕ್ಕ ಭೂತಲದಲ್ಲಿ ಕರತಲಾಂಗುಷ್ಠ ಮಧ್ಯಮರೂಪವಾದ ಹತ್ತು ತಾಳಿಗಳಷ್ಟು ಪ್ರಮಾಣದ ದಂಡವನ್ನು ಸ್ಥಾಪಿಸಿ ನೀರಿನಿಂದ ಪ್ರೋಕ್ಷಿಸಬೇಕು. ಅನಂತರ ಎಳ್ಳನ್ನು ಹಾಕಬೇಕು.

೩–೪. ವಿದ್ವಾಂಸನಾದ ಬ್ರಾಹ್ಮಣ ಶ್ರೇಷ್ಠನು ಆ ಪ್ರದೇಶವನ್ನು ಪಂಚಗವ್ಯದಿಂದ ಪ್ರೋಕ್ಷಿಸಿ ಹಿಂದೆ ಹೇಳಿದಂತೆ ಸುತ್ತಲೂ ಮಂಡಲ ವನ್ನು ಬರೆಯಬೇಕು. ಅನಂತರ ಹೋಮ ವಸ್ತ್ರಗಳನ್ನಿಟ್ಟು ಸುಗಂಧ ವಾದ ಪುಷ್ಪಗಳನ್ನು ಇಡಬೇಕು.

ತಸ್ಮಿನ್ಸಂಚಯನಂ ಕಾರ್ಯಂ ತಿಲಭಾರೈ ರ್ವಿಶೇಷತಃ ।
ದಂಡ ಪ್ರಾದೇಶ ಮುತ್ಸೇಧ ಮುತ್ತಮಂ ಪರಿಕೀರ್ತಿತಂ ॥ ೫ ॥

ಚತು ರಂಗುಲ ಹೀನಂ ತು ಮಧ್ಯಮಂ ಮುನಿ ಪುಂಗವಾಃ ।
ದಂಡತುಲ್ಯಂ ಕನಿಷ್ಠಂ ಸ್ಯಾ ದ್ದಂಡ ಹೀನಂ ನ ಕಾರಯೇತ್ ॥ ೬ ॥

ವೇಷ್ಟಯಿತ್ವಾ ನವೈ ರ್ವಸ್ತ್ರೈಃ ಪರಿತಃ ಪೂಜಯೇ ತ್ಕ್ರಮಾತ್ ।
ಸದ್ಯಾದೀನಿ ಪ್ರವಿನ್ಯಸ್ಯ ಪೂಜಯೇ ದ್ವಿಧಿಪೂರ್ವಕಂ ॥ ೭ ॥

ಅಷ್ಟ ದಿಕ್ಷು ಚ ಕರ್ತವ್ಯಾಃ ಪೂರ್ವೋಕ್ತಾ ಮೂರ್ತಯಃ ಕ್ರಮಾತ್
ತ್ರಿನಿಷ್ಕೇಣ ಸುವರ್ಣೇನ ಪ್ರತ್ಯೇಕಂ ಕಾರಯೇ ತ್ಕ್ರಮಾತ್ ॥ ೮ ॥

ದಕ್ಷಿಣಾ ವಿಧಿನಾ ಕಾರ್ಯಾ ತುಲಾ ಭಾರವದೇವ ತು ।
ಹೋಮ ಶ್ಚ ಪೂರ್ವ ವ ತ್ಪ್ರೋಕ್ತೋ ಯಥಾ ವನ್ಮುನಿ ಸತ್ತಮಾಃ ॥

---

೫. ಆ ಪ್ರದೇಶದಲ್ಲಿ ವಿಶೇಷವಾಗಿ ಎಳ್ಳುಗಳ ರಾಶಿಯನ್ನು ಹಾಕಬೇಕು. ಹಿಂದೆ ಹೇಳಿದ ದಂಡಗಳಿಂದ ಒಂದು ಪ್ರಾದೇಶ ಮಾತ್ರ ಎತ್ತರವುಳ್ಳ ರಾಶಿಯು ಉತ್ತಮವಾದುದು.

೬. ಓ ಮುನಿ ಶ್ರೇಷ್ಠರೇ, ನಾಲ್ಕಂಗುಲಕ್ಕಿಂತ ಕಮ್ಮಿಯಾದರೆ ಮಧ್ಯಮವು. ದಂಡದ ಪ್ರಮಾಣವು ಕನಿಷ್ಠವಾದುದು. ಆದರೆ ದಂಡಕ್ಕಿಂತಲೂ ಕಮ್ಮಿಯಾಗಿ ಮಾಡಿಸಬಾರದು.

೭. ಹೊಸವಸ್ತ್ರಗಳನ್ನು ಸುತ್ತಲೂ ಸುತ್ತಿ ಕ್ರಮವಾಗಿ ಪೂಜಿಸಬೇಕು. ಸದ್ಯೋಜಾತಾದಿ ಪಂಚ ಬ್ರಹ್ಮರನ್ನು ಶಾಸ್ತ್ರೋಕ್ತವಾದ ವಿಧಾನದಿಂದ ಸ್ಥಾಪಿಸಿ ಪೂಜಿಸಬೇಕು.

೮. ಮೂರು ಸುವರ್ಣ ನಾಣ್ಯಗಳಿಂದ ಪ್ರತ್ಯೇಕವಾಗಿ ಹಿಂದೆ ಹೇಳಿದಂತೆ ಎಂಟು ದಿಕ್ಕುಗಳಲ್ಲಿಯೂ, ಎಂಟು ಮೂರ್ತಿಗಳನ್ನು ಕ್ರಮವಾಗಿ ಮಾಡಿಸಬೇಕು.

೯. ಓ ಉತ್ತಮರಾದ ಮುನಿಗಳೇ, ತುಲಾಭಾರದಲ್ಲಿ ಕೊಟ್ಟಂತೆಯೇ ವಿಧಿವತ್ತಾಗಿ ದಕ್ಷಿಣೆಯನ್ನೂ ಕೊಡಬೇಕು.

ಅರ್ಚಯೇದ್ದೇವ ದೇವೇಶಂ ಲೋಕಪಾಲ ಸಮಾವೃತಂ ।
ತಿಲ ಪರ್ವತ ಮಧ್ಯಸ್ಥಂ ತಿಲಪರ್ವತ ರೂಪಿಣಂ ॥೧೦॥

ಶಿವಾರ್ಚನಾ ಚ ಕರ್ತವ್ಯಾ ಸಹಸ್ರ ಕಲಶಾದಿಭಿಃ ।
ದರ್ಶಯೇತ್ತಿಲ ಮಧ್ಯಸ್ಥಂ ದೇವದೇವ ಮುಮಾಪತಿಂ ॥೧೧॥

ಪೂಜಯಿತ್ವಾ ವಿಧಾನೇನ ಕ್ರಮೇಣ ಚ ವಿಸರ್ಜಯೇತ್ ।
ಶ್ರೋತ್ರಿಯಾಯ ದರಿದ್ರಾಯ ದಾಪಯೇತ್ತಿಲ ಪರ್ವತಂ ॥೧೨॥

ಏವಂ ತಿಲನಗಃ ಪ್ರೋಕ್ತಃ ಸರ್ವಸ್ಮಾದಧಿಕಃ ಪರಃ ॥೧೩॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ತಿಲಪರ್ವತ ದಾನಂ ನಾಮ ತ್ರಿಂಶೋಽಧ್ಯಾಯಃ

---

೧೦. ತಿಲಪರ್ವತದ ಮಧ್ಯದಲ್ಲಿರುವವನಾಗಿಯೂ, ದೇವತೆಗಳಿಗೂ ಸಹ ದೇವನಾಗಿಯೂ ಇಂದ್ರಾದಿ ಅಷ್ಟದಿಕ್ಪಾಲಕರಿಂದ ಸುತ್ತುವರಿಯಲ್ಪಟ್ಟವನಾಗಿಯೂ, ಇರುವ ತಿಲಪರ್ವತ ಸ್ವರೂಪನಾದ ದೇವನನ್ನು ಪೂಜಿಸಬೇಕು.

೧೧. ಸಹಸ್ರ ಕಲಶಗಳಿಂದ ಶಿವನನ್ನು ಪೂಜೆಮಾಡಿ, ತಿಲಮಧ್ಯದಲ್ಲಿರತಕ್ಕ ಉಮಾಪತಿಯಾದ ದೇವತೆಗಳಿಗೂ ಸಹ ದೇವನಾದ ಶಿವನನ್ನು ತನ್ನ ಜನರಿಗೆ ತೋರಿಸಬೇಕು.

೧೨-೧೩. ವಿಧಿಗನುಸಾರವಾಗಿ ಪೂಜಿಸಿ ಕ್ರಮವಾಗಿ ವಿಸರ್ಜನೆಯನ್ನೂ ಮಾಡಬೇಕು. ವೇದಾಧ್ಯಯನ ಸಂಪನ್ನನಾದ ದರಿದ್ರನಾದ ಬ್ರಾಹ್ಮಣನಿಗೆ ಆ ತಿಲಪರ್ವತವನ್ನು ದಾನಮಾಡಬೇಕು. ಈ ರೀತಿಯಾಗಿ ಎಲ್ಲಕ್ಕಿಂತಲೂ ಉತ್ತಮವಾದ ತಿಲಪರ್ವತದ ದಾನವು ಹೇಳಲ್ಪಟ್ಟಿತು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರ ಭಾಗದಲ್ಲಿ ತಿಲಪರ್ವತದ ದಾನ ಕಥನವೆಂಬ ಮುವ್ವತ್ತನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
## ಏಕ ತ್ರಿಂಶೋಽಧ್ಯಾಯಃ

**॥ ಸನತ್ಕುಮಾರ ಉವಾಚ ॥**

**ಅಥಾನ್ಯಂ ಪರ್ವತಂ ಸೂಕ್ಷ್ಮ ಮಲ್ಪದ್ರವ್ಯಂ ಮಹಾಫಲಂ ।**
**ದ್ರವ್ಯ ಮಾತ್ರೋಪ ಸಂಯುಕ್ತೋ ಕಾಲೇ ಮಧ್ಯಂ ವಿಧೀಯತೇ ॥**
**ಗೋಮಯಾ ಲಿಪ್ತ ಭೂ ಮೌ ತು ಹ್ಯಂಬರಾಣಿ ಪ್ರಕೀರ್ಯ ಚ ।**
**ತನ್ಮಧ್ಯೇ ನಿಕ್ಷಿಪೇ ದ್ಧೀಮಾಂ ಸ್ತಿಲ ಭಾರ ತ್ರಯಂ ಶುಭಂ ॥ ೨ ॥**

---

### ಶ್ರೀ ಲಿಂಗಮಹಾಪುರಾಣದ ಉತ್ತರ ಭಾಗದಲ್ಲಿ ಮುವ್ವತ್ತೊಂದನೆಯ ಅಧ್ಯಾಯವು.

ಸನತ್ಕುಮಾರನು ಹೇಳಿದನು.

( ಈ ಅಧ್ಯಾಯದಲ್ಲಿ ಸನತ್ಕುಮಾರನು ಋಷಿಗಳಿಗೆ ಸೂಕ್ಷ್ಮ ತಿಲ ಪರ್ವತ ದಾನದ ವಿಧಿಯನ್ನು ಹೇಳುತ್ತಾನೆ. )

೧. ಎಲೈ ಋಷಿಗಳೇ, ಮಹತ್ತರವಾದ ಫಲವನ್ನು ಕೊಡತಕ್ಕದ್ದೂ, ಅಲ್ಪದ್ರವ್ಯ ವಿನಿಯೋಗದಿಂದ ಸಾಧ್ಯವಾದುದೂ ಆದ ಇನ್ನೊಂದು ತಿಲ ಪರ್ವತದ ದಾನದ ಕ್ರಮವು ಹೇಳಲ್ಪಟ್ಟಿರುತ್ತದೆ. ಈ ದಾನವನ್ನು ದ್ರವ್ಯ ಸಮೃದ್ಧಿಯುಳ್ಳ ಕಾಲದಲ್ಲಿ ಆಚರಿಸಬೇಕು.

೨. ಗೋಮಯದಿಂದ ಸಂಸ್ಕೃತವಾದ ಭೂಮಿಯಲ್ಲಿ ವಸ್ತ್ರಗಳನ್ನು ಹಾಸಿ, ಆ ವಸ್ತ್ರಗಳ ಮಧ್ಯಭಾಗದಲ್ಲಿ ಮೂರು ಭಾರಗಳ ಪರಿಮಾಣವುಳ್ಳ ತಿಲವನ್ನು ಸ್ಥಾಪಿಸಬೇಕು. ( ಭಾರವೆಂದರೆ ಈಗ ಲೋಕ ವ್ಯವಹಾರ ದಲ್ಲಿ ಪಾವು, ಸೇರು, ಪಲ್ಲ, ಖಂಡುಗ, ಎಂಬ ಪರಿಮಾಣಗಳಿದ್ದಂತೆ ಪ್ರಾಚೀನ ಕಾಲದಲ್ಲಿ ಒಂದು ಪರಿಮಾಣ ವಿಶೇಷಕ್ಕೆ ಭಾರವೆಂದು ಸಂಜ್ಞೆ

ಪದ್ಮ ಮಷ್ಟದಲಂ ಕುರ್ಯಾ ತ್ಕರ್ಣಿಕಾ ಕೇಸರಾನ್ವಿತಂ ।
ದಶ ನಿಷ್ಕೇಣ ತತ್ಕಾರ್ಯಂ ತದರ್ಧಾರ್ಧೇನ ವಾ ಪುನಃ ॥ ೩ ॥

ತಿಲಮಧ್ಯೇ ನ್ಯಸೇತ್ಪದ್ಮಂ ಪದ್ಮಮಧ್ಯೇ ಮಹೇಶ್ವರಂ ।
ಆರಾಧ್ಯ ವಿಧಿವದ್ದೇವಂ ವಾಮಾದೀನಿ ಪ್ರಪೂಜಯೇತ್ ॥ ೪ ॥

ಶಕ್ತಿರೂಪಂ ಸುವರ್ಣೇನ ತ್ರಿನಿಷ್ಕೇಣ ತು ಕಾರಯೇತ್ ।
ನ್ಯಾಸಂ ತು ಪರಿತಃ ಕುರ್ಯಾ ದ್ವಿ ಘ್ನೇಶಾ ನ್ಪರಿಭಾಗತಃ ॥ ೫ ॥

---

ಯಿತ್ತು. ಎಂದು ತಿಳಿಯತಕ್ಕದ್ದು. ಹತ್ತು ಪಲ್ಲ ಒಂದು ಭಾರ. ಇಂತಹ ಭಾರಗಳನ್ನು ಮೂರಾವೃತ್ತಿ ಹಾಕಿದರೆ ಎಷ್ಟು ತಿಲವಾಗುತ್ತದೋ ಅಷ್ಟು ತಿಲವನ್ನು ದಾನಮಾಡಬೇಕೆಂದರ್ಥ. )

೩. ಎಂಟು ದಳಗಳಿಂದ ಯುಕ್ತವಾಗಿಯೂ, ಕರ್ಣಿಕಾ ಕೇಸರ ಮುಂತಾದ ಪುಷ್ಪದ ಅವಯುವಗಳಿಂದ ಕೂಡಿರುವುದೂ, ಆದ ಪದ್ಮವನ್ನೂ ರಚಿಸಬೇಕು. ಇದನ್ನು ಹತ್ತು ಸುವರ್ಣ ನಾಣ್ಯಗಳಿಂದಲಾಗಲೀ, ಅಥವಾ ಐದು ಸುವರ್ಣ ನಾಣ್ಯಗಳಿಂದಲಾಗಲೀ ಅದಿಲ್ಲದಿದ್ದರೆ ಎರಡೂವರೆ ಸುವರ್ಣ ನಾಣ್ಯಗಳಿಂದಲಾಗಲೀ ನಿರ್ಮಿಸಬೇಕು.

೪. ತಿಲರಾಶಿಯ ಮಧ್ಯದಲ್ಲಿ ಆ ಪದ್ಮವನ್ನು ಸ್ಥಾಪಿಸಿ ಅದರ ಮಧ್ಯಭಾಗದಲ್ಲಿ ಪರಮೇಶ್ವರನನ್ನು ಸ್ಥಾಪಿಸಿ (ಆವಾಹನೆ ಮಾಡಿ) ಯಥಾ ಶಾಸ್ತ್ರವಾಗಿ ಪೂಜಿಸಿ ವಾಮಾದಿ ಪಂಚ ಬ್ರಹ್ಮಾಂಗಗಳನ್ನು ಪೂಜಿಸಬೇಕು.

೫. ಶಕ್ತಿದೇವತೆಯ ಮೂರ್ತಿಯನ್ನು ಮೂರು ಸುವರ್ಣ ನಾಣ್ಯಗಳಿಂದ ಮಾಡಿಸಬೇಕು. ಮತ್ತು ಪ್ರತ್ಯಂಗಗಳಲ್ಲಿ ನ್ಯಾಸವನ್ನು ಮಾಡಬೇಕು. ಬಳಿಕ ಅಷ್ಟವಿನಾಯಕರನ್ನು ಶಕ್ತಿದೇವತೆಯ ಸುತ್ತಲೂ, ಸ್ಥಾಪಿಸಬೇಕು.

ಪೂರ್ವೋಕ್ತ ಹೇಮ ಮಾನೇನ ವಿಘ್ನೇಶಾನ ಪಿ ಕಾರಯೇತ್ ।
ತಾ ನಭ್ಯರ್ಚ್ಯ ವಿಧಾನೇನ ಗಂಧ ಪುಷ್ಪಾದಿಭಿಃ ಕ್ರಮಾತ್ ॥ ೬ ॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ಏಕತ್ರಿಂಶೋಽಧ್ಯಾಯಃ

---

೬. ಅಷ್ಟ ವಿಘ್ನೇಶ್ವರರನ್ನು ಪೂರ್ವೋಕ್ತರೀತಿಯಂತೆ ಮೂರು ಸುವರ್ಣನಾಣ್ಯಗಳಿಂದ ಮಾಡಿಸಬೇಕು. ವಿನಾಯಕರನ್ನು ಸ್ಥಾಪಿಸಿದ ತರುವಾಯ ಅವರನ್ನು ಪೂರ್ವಾದಿಕ್ರಮದಿಂದ ಪೂಜಿಸಬೇಕು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರ ಭಾಗದಲ್ಲಿ ಮುಂವತ್ತೊಂದನೆಯ
ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
## ದ್ವಾತ್ರಿಂಶತಿತಮೋಽಧ್ಯಾಯಃ

**॥ ಸನತ್ಕುಮಾರ ಉವಾಚ ॥**

**ಜಪಹೋಮಾರ್ಚನಾ ದಾನಾಭಿ ಷೇಕಾದ್ಯಂ ಚ ಪೂರ್ವವತ್ ।**
**ಸುವರ್ಣ ಮೇದಿನೀ ದಾನಂ ಪ್ರವಕ್ಷ್ಯಾಮಿ ಸಮಾಸತಃ ॥ ೧ ॥**

**ಪೂರ್ವೋಕ್ತ ದೇಶ ಕಾಲೇ ತು ಕಾರಯೇನ್ಮುನಿಭಿಃ ಸಹ ।**
**ಲಕ್ಷಣೇನ ಯಥಾ ಸರ್ವಂ ಕುಂಡೇ ವಾ ಮಂಡಲೇಽಥವಾ ॥ ೨ ॥**

**ಮೇದಿನೀಂ ಕಾರಯೇ ದ್ದಿವ್ಯಾಂ ಸಹಸ್ರೇಣಾಪಿ ವಾ ಪುನಃ ।**
**ಏಕ ಹಸ್ತಾ ಪ್ರಕರ್ತವ್ಯಾ ಚತುರಸ್ರಾ ಸು ಶೋಭನಾ ॥ ೩ ॥**

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಮುವ್ವತ್ತೆರಡನೆಯ ಅಧ್ಯಾಯವು.

೧. ಸನತ್ಕುಮಾರನು ಹೇಳಿದನು :—ಸೂಕ್ಷ್ಮ ತಿಲಪರ್ವತ ದಾನದ ವಿಧಿಯಲ್ಲಿ ಜಪ, ಹೋಮ, ಪೂಜೆ, ದಾನ, ಅಭಿಷೇಕ, ಮುಂತಾದ ಸಕಲ ಕಾರ್ಯಗಳನ್ನೂ ಪೂರ್ವೋಕ್ತರೀತಿಯಂತೆ ನೆರವೇರಿಸ ಬೇಕು. ಇನ್ನುಮುಂದೆ ಸುವರ್ಣಭೂಮಿಯ ದಾನದ ವಿಧಿಯನ್ನು ಸಂಕ್ಷೇಪವಾಗಿ ಹೇಳುವೆನು.

೨. ಈ ಹಿಂದೆ ಹೇಳಿದ ದೇಶಕಾಲಾದಿಗಳಲ್ಲಿ ಸುವರ್ಣ ಮೇದಿನೀ ದಾನವನ್ನು ಆಚರಿಸಬೇಕು. ಕುಂಡದಲ್ಲಾಗಲೀ, ಮಂಡಲದಲ್ಲಾಗಲೀ, ಅರ್ಚನಾದಿ ವಿಧಿಗಳನ್ನುಮಾಡಬೇಕು.

೩. ಸಹಸ್ರ ಸುವರ್ಣಗಳಿಂದಲಾಗಲೀ, ಅದರ ಅರ್ಧದಿಂದ ಲಾಗಲೀ, ಅಥವಾ ಅದರ ಅರ್ಧದಿಂದಲಾಗಲೀ, ಒಂದು ಹಸ್ತಪ್ರಮಾಣ ಅಗಲವುಳ್ಳ ಮತ್ತು ಚಚ್ಚೌಕವಾದ ಸ್ವರ್ಣಭೂಮಿಯನ್ನು ಮಾಡಿಸಬೇಕು.

ಸಪ್ತದ್ವೀಪ ಸಮುದ್ರಾದ್ಯೈಃ ಪರ್ವತೈ ರಭಿ ಸಂವೃತಾ ।
ಸರ್ವತೀರ್ಥ ಸಮೋಪೇತಾ ಮಧ್ಯೇ ಮೇರು ಸಮನ್ವಿತಾ ॥ ೪ ॥

ಅಥವಾ ಮಧ್ಯತೋ ದ್ವೀಪಂ ನವ ಖಂಡಂ ಪ್ರಕಲ್ಪಯೇತ್ ।
ಪೂರ್ವವ ನ್ನಿಖಿಲಂ ಕೃತ್ವಾ ಮಂಡಲೇ ವೇದಿ ಮಧ್ಯತಃ ॥ ೫ ॥

ಸಪ್ತ ಭಾಗೈಕ ಭಾಗೇನ ಸಹಸ್ರಾ ದ್ವಿಧಿ ಪೂರ್ವಕಂ ।
ಶಿವಭಕ್ತೇ ಪ್ರದಾತವ್ಯಾ ದಕ್ಷಿಣಾ ಪೂರ್ವ ಚೋದಿತಾ ॥ ೬ ॥

ಸಹಸ್ರ ಕಲಶಾ ದ್ಯೈಶ್ಚ ಶಂಕರಂ ಪೂಜಯೇ ಚ್ಛಿವಂ ।
ಸುವರ್ಣ ಮೇದಿನೀ ಪ್ರೋಕ್ತಂ ಲಿಂಗೇಽಸ್ಮಿನ್ ದಾನ ಮುತ್ತಮಂ ॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ಸುವರ್ಣ ಮೇದಿನೀ
ದಾನ ವಿಧಾನಂ ನಾಮ ದ್ವಾತ್ರಿಂಶೋಽಧ್ಯಾಯಃ

---

೪. ಆ ಸುವರ್ಣಭೂಮಿಯು ಸುತ್ತಲೂ ಸಪ್ತದ್ವೀಪಗಳಿಂದಲೂ, ಗಂಧಮಾದನಾದಿ ಪರ್ವತಗಳಿಂದಲೂ, ಸಕಲ ತೀರ್ಥ ಸ್ಥಳಗಳಿಂದಲೂ. ಯುಕ್ತವಾದುದಾಗಿರಬೇಕು. ಆ ಭೂಮಿಯ ಮಧ್ಯಭಾಗದಲ್ಲಿ ಮೇರು ಪರ್ವತವನ್ನು ರಚಿಸಬೇಕು. (ಎಂದರೆ ಭೂಮಿಯ ಆಯಾಭಾಗಗಳಲ್ಲಿ ಆಯಾಪರ್ವತ, ತೀರ್ಥ, ದ್ವೀಪ, ಮುಂತಾದುವನ್ನು ಗುರುತಿಸಿರಬೇಕು. ಎಂದರ್ಥವು.) ಮತ್ತು ಮಧ್ಯದಲ್ಲಿ ಜಂಬೂ ದ್ವೀಪವನ್ನೂ ರಚಿಸಿರಬೇಕು.

೫–೬. ಹಿಂದೆ ಹೇಳಿದ ರೀತಿಯಲ್ಲಿ ವೇದಿಕೆಯ ಮಧ್ಯದಲ್ಲಿರುವ ಮಂಡಲದಲ್ಲಿ ಪೂಜಾದಿ ಕಾರ್ಯಗಳನ್ನು ಮಾಡಬೇಕು. ಸಹಸ್ರ ಸುವರ್ಣ ನಾಣ್ಯಗಳ ಏಳನೆಯ ಒಂದು ಭಾಗವನ್ನು ಸದಕ್ಷಿಣಾಕವಾಗಿ ಶಿವಭಕ್ತ ನಾದ ಬ್ರಾಹ್ಮಣನಿಗೆ ದಾನಮಾಡಬೇಕು. ಸಹಸ್ರ ಕಲಶಗಳಿಂದ ಶಿವ ನನ್ನು ಪೂಜಿಸಬೇಕು.

೭. ಈ ಲಿಂಗಮಹಾಪುರಾಣದಲ್ಲಿ ಸುವರ್ಣ ಮೇದಿನೀ ದಾನವು ಸಕಲದಾನಗಳಿಂತಲೂ ಶ್ರೇಷ್ಠವಾದುದಾಗಿ ಹೇಳಲ್ಪಟ್ಟಿರುತ್ತದೆ.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರ ಭಾಗದಲ್ಲಿ ಮುವ್ವತ್ತೆರಡನೆಯ
ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
## ತ್ರಯ ಸ್ತ್ರಿಂಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಅಥಾನ್ಯತ್ಸಂಪ್ರವಕ್ಷ್ಯಾಮಿ ಕಲ್ಪ ಪಾದಪ ಮುತ್ತಮಂ ।
ಶತ ನಿಷ್ಕೇಣ ಕೃತ್ವೈವ ಸರ್ವ ಶಾಖಾ ಸಮನ್ವಿತಂ ॥ ೧ ॥

ಶಾಖಾನಾಂ ವಿವಿಧಂ ಕೃತ್ವಾ ಮುಕ್ತಾ ದಾಮಾದ್ಯ ಲಂಬನಂ ।
ದಿವ್ಯೈ ರ್ಮಾರಕತೈ ಶ್ಚೈವ ಚಾಂಕುರಾಗ್ರಂ ಪ್ರವಿನ್ಯಸೇತ್ ॥ ೨ ॥

ಪ್ರವಾಲಂ ವಿನ್ಯಸೇ ದ್ವಿದ್ವಾನ್ ಪ್ರವಾಲೇನ ದ್ರುಮಸ್ಯ ತು ।
ಫಲಾನಿ ಪದ್ಮ ರಾಗೈಶ್ಚ ಪರಿತೋಽಸ್ಯ ಸು ಶೋಭಯೇತ್ ॥ ೩ ॥

ಮೂಲಂ ಚ ನಾಲ ರತ್ನೇನ ವಜ್ರೇಣ ಸ್ಕಂಧಮುತ್ತಮಂ ।
ವೈಡೂರ್ಯೇಣ ದ್ರುಮಾಗ್ರಂ ಚ ಪುಷ್ಯರಾಗೇಣ ಮಸ್ತಕಂ ॥ ೪ ॥

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಮೂವತ್ತುಮೂರನೆಯ ಅಧ್ಯಾಯವು.

೧-೨. ಸನತ್ಕುಮಾರನು ಹೇಳಿದನು:— ಎಲೈ ಋಷಿಗಳೇ, ಕಲ್ಪದ್ರುಮದಾನವೆಂಬ ಇನ್ನೊಂದು ದಾನದ ವಿಧಿಯನ್ನು ನಿಮಗೆ ಹೇಳುವೆನು. ನೂರು ಸುವರ್ಣನಾಣ್ಯಗಳಿಂದ ಶಾಖಾದಿ ಅವಯವಗಳಿಂದ ಯುಕ್ತವಾದ ವೃಕ್ಷವನ್ನು ಮಾಡಿಸಿ, ನಾನಾಶಾಖೆಗಳನ್ನು ರಚಿಸಿ, ದಿವ್ಯವಾದ ಮರಕತ ಮಣಿಗಳಿಂದ ಚಿಗುರಾದ ಎಳೆಯ ಚಿಗುರುಗಳನ್ನು ಮಾಡಿಸಬೇಕು.

೩. ವೃಕ್ಷದ ಚಿಗುರೆಲೆಗಳನ್ನು ಹವಳದಿಂದ ಮಾಡಿಸಿ, ವೃಕ್ಷದ ಸುತ್ತಲೂ ಪದ್ಮರಾಗ ಮಣಿಗಳಿಂದ ಹಣ್ಣುಗಳನ್ನು ಮಾಡಿಸಬೇಕು.

೪. ವೃಕ್ಷದ ಮೂಲಭಾಗವನ್ನು ನಾಲರತ್ನದಿಂದಲೂ, ಮಧ್ಯಭಾಗವನ್ನು (ದಿಂಡನ್ನು) ವಜ್ರದಿಂದಲೂ, ದಿಂಡಿನ ಮೇಲುಭಾಗವನ್ನು,

ಗೋಮೇದಕೇನ ವೈ ಕಂದಂ ಸೂರ್ಯಕಾಂತೇನ ಸುವ್ರತ ।
ಚಂದ್ರಕಾಂತೇನ ವಾ ವೇದಿಂ ದ್ರುಮಸ್ಯ ಸ್ಫಟಿಕೇನ ವಾ ॥ ೫ ॥
ವಿತಸ್ತಿ ಮಾತ್ರ ಮಾಯಾಮಂ ವೃಕ್ಷಸ್ಯ ಪರಿಕೀರ್ತಿತಂ ।
ಶಾಖಾಽಷ್ಟಕಸ್ಯ ಮಾನಂ ಚ ವಿಸ್ತಾರಂ ಚೋರ್ಧ್ವತ ಸ್ತಥಾ ॥ ೬ ॥
ತನ್ಮೂಲೇ ಸ್ಥಾಪಯೇ ಲ್ಲಿಂಗಂ ಲೋಕಪಾಲೈಃ ಸಮಾವೃತಂ ।
ಪೂರ್ವೋಕ್ತ ವೇದಿಮಧ್ಯೇ ತು ಮಂಡಲೇ ಸ್ಥಾಪ್ಯ ಪಾದಪಂ ॥ ೭ ॥
ಪೂಜಯೇ ದ್ದೇವ ಮೀಶಾನಂ ಲೋಕ ಪಾಲಾಂಶ್ಚ ಯತ್ನತಃ ।
ಪೂರ್ವವಜ್ಜಪ ಹೋಮಾದ್ಯಂ ತುಲಾಭಾರವದಾ ಚರೇತ್ ॥ ೮ ॥

---

ವೈಡೂರ್ಯದಿಂದಲೂ, ವೃಕ್ಷಾಗ್ರ ಭಾಗವನ್ನು ಪುಷ್ಯರಾಗ, ಹಳದಿಯ ಬಣ್ಣದ ರತ್ನ, ಇವುಗಳಿಂದಲೂ. ಮಾಡಿಸಬೇಕು.

೫. ಕಂದವನ್ನು (ಗೆಡ್ಡೆಯನ್ನು) ಗೋಮೇದಕದಿಂದಲೂ, ವೃಕ್ಷವನ್ನು ಸ್ಥಾಪಿಸುವ ವೇದಿಕೆಯನ್ನು ಸೂರ್ಯಕಾಂತ ಮಣಿಯಿಂದ ಲಾಗಲೀ ಚಂದ್ರಕಾಂತ ಮಣಿಯಿಂದಲಾಗಲೀ, ಅಥವಾ ಸ್ಫಟಿಕದಿಂದ ಲಾಗಲೀ ಮಾಡಿಸಬೇಕು.

೬. ವೃಕ್ಷದ ಕೆಳಭಾಗದ ಸುತ್ತಳತೆಯು ಹನ್ನೆರಡು ಅಂಗುಲ ದಷ್ಟಿರಬೇಕು. ವೃಕ್ಷಾಗ್ರ ಭಾಗವು ಮುವ್ವತ್ತೆರಡು ಅಂಗುಲದಷ್ಟು ವಿಸ್ತಾರವಾಗಿರಬೇಕು.

೭. ವೃಕ್ಷದ ಮೂಲಭಾಗದಲ್ಲಿ ಇಂದ್ರಾದಿ ಅಷ್ಟದಿಕ್ಪಾಲ ಕರಿಂದ ಸಮಾವೃತವಾದ ಶಿವಲಿಂಗವನ್ನು ಸ್ಥಾಪಿಸಬೇಕು. ಅನಂತರ ದಲ್ಲಿ ಪೂರ್ವೋಕ್ತವಾದ ವೇದಿಕೆಯ ಮಧ್ಯದಲ್ಲಿರುವ ಮಂಡಲದಲ್ಲಿ ಸುವರ್ಣ ವೃಕ್ಷವನ್ನು ಸ್ಥಾಪಿಸಿ ಶಿವನನ್ನೂ ಮತ್ತು ಇಂದ್ರಾದಿ ಲೋಕ ಪಾಲಕರನ್ನೂ ಪೂಜಿಸಬೇಕು.

೮–೯. ಹಿಂದೆ ಹೇಳಿದಂತೆ ತುಲಾಭಾರದಾನ ವಿಧಿಯಲ್ಲಿ ಆಚರಿಸು ವಂತೆ ಜಪಹೋಮಾದಿಗಳನ್ನು ಆಚರಿಸಿ ಶಿವನಿಗಾಗಲೀ, ಕರ್ಮನಿರತ

**ನಿವೇದಯೇದ್ದ್ರುಮಂ ಶಂಭೋಃ ಯೋಗೀನಾಂ ವಾಽಥವಾ ನೃಪ।**
**ಭಸ್ಮಾಂಗಿಭ್ಯೋಽಥವಾ ರಾಜಾ ಸಾರ್ವಭೌಮೋ ಭವಿಷ್ಯತಿ ॥ ೯ ॥**

**ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ಕಲ್ಪಪಾದಪ ದಾನ ವಿಧಿರ್ನಾಮ ತ್ರಯಸ್ತ್ರಿಂಶೋಽಧ್ಯಾಯಃ**

---

ನಾದ ಯೋಗಿಗಾಗಲೀ, ಅಥವಾ ಭಸ್ಮಧಾರಿಗಳಾದ ಬ್ರಾಹ್ಮಣರಿಗಾಗಲೀ ಆ ಸುವರ್ಣ ವೃಕ್ಷವನ್ನು ಸದಕ್ಷಿಣಾಕವಾಗಿ ದಾನಮಾಡಬೇಕು. ಹೀಗೆ ದಾನವನ್ನು ಆಚರಿಸುವವನು ಸಾರ್ವಭೌಮನಾಗುವನು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರ ಭಾಗದಲ್ಲಿ ಕಲ್ಪ ಪಾದಪ ದಾನ ವಿಧಿಯೆಂಬ ಮೂವತ್ತು ಮೂರನೆಯ ಅಧ್ಯಾಯವು ಮುಗಿದುದು.

अथ श्री लिंगमहापुराणे उत्तरभागे
चतुस्त्रिंशोऽध्यायः

॥ सनत्कुमार उवाच ॥

ಗಣೇಶೇಶಂ ಪ್ರವಕ್ಷ್ಯಾಮಿ ದಾನಂ ಪೂರ್ವೋಕ್ತ ಮಂಡಪೇ ।
ಸಂಪೂಜ್ಯ ದೇವದೇವೇಶಂ ಲೋಕಪಾಲ ಸಮಾವೃತಂ ॥ ೧ ॥

ವಿಶ್ವೇಶ್ವರಾ ನ್ಯಥಾ ಶಾಸ್ತ್ರಂ ಸರ್ವಾಭರಣ ಸಂಯುತಾನ್ ।
ದಶ ನಿಷ್ಕೇಣ ವೈ ಕೃತ್ವಾ ಸಂಪೂಜ್ಯ ಚ ವಿಧಾನತಃ ॥ ೨ ॥

ಅಷ್ಟ ದಿಕ್ಷ್ವಷ್ಟ ಕುಂಡೇಷು ಪೂರ್ವವದ್ಧೋಮ ಮಾಚರೇತ್ ।
ಪಂಚಾವರಣ ಮಾರ್ಗೇಣ ಪಾರಂ ಪರ್ಯಕ್ರಮೇಣ ಚ ॥ ೩ ॥

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಮುವ್ವತ್ತು ನಾಲ್ಕನೆಯ
ಅಧ್ಯಾಯವು.

೧-೨. ಸನತ್ಕುಮಾರನು ಹೇಳಿದನು :—ಎಲೈ ಋಷಿಗಳೇ, ಇನ್ನು ಮುಂದೆ ಗಣೇಶೇಶನ (ಈಶ್ವರನ) ದಾನದ ಕ್ರಮವನ್ನು ಹೇಳುವೆನು. ಹಿಂದೆ ಹೇಳಿದಂತೆ ದೇವಮಂಟಪದಲ್ಲಿ ಇಂದ್ರಾದಿ ಲೋಕಪಾಲಕರಿಂ ದೊಡಗೂಡಿದ ಶಿವನನ್ನು ಪೂಜಿಸಿ, ಹತ್ತು ಸುವರ್ಣನಾಣ್ಯ ಪರಿಮಿತ ವಾದ ಸುವರ್ಣದಿಂದ ಅಷ್ಟದಿಕ್ಪಾಲಕರನ್ನು ಮಾಡಿಸಿ ಅವರನ್ನು ಸಕಲ ಆಭರಣಗಳಿಂದಲಂಕರಿಸಿ, ಯಥಾಶಾಸ್ತ್ರವಾಗಿ ಪೂಜಿಸಿ, ಎಂಟು ದಿಕ್ಕು ಗಳಲ್ಲಿ ಎಂಟು ಕುಂಡಗಳನ್ನು ನಿರ್ಮಿಸಿ, ಆ ಕುಂಡಗಳಲ್ಲಿ ಪೂರ್ವೋಕ್ತ ರೀತಿಯಂತೆ ಹೋಮಮಾಡಬೇಕು.

೩. ಶಿವಪೂಜಾದಿ ಪಂಚಾವರಣ ಪೂಜೆಯ ಕ್ರಮದಿಂದಾಗಲೀ, ಕುಲಕ್ರಮಾಗತವಾದ ಕ್ರಮದಿಂದಲಾಗಲೀ, ಆಚರಿಸಬೇಕು.

ಸಪ್ತ ವಿಪ್ರಾನ್ ಸಮಭ್ಯರ್ಚ್ಯ ಕನ್ಯಾಮೇಕಾಂ ತಥೋತ್ತರೇ ।
ದಾಪಯೇತ್ಸರ್ವ ಮಂತ್ರಾಣಿ ಸ್ವೈಃ ಸ್ವೈರ್ಮಂತ್ರೈರನುಕ್ರಮಾತ್ ॥
ದತ್ವೈವಂ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥ ೫ ॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ಗಣೇಶೇಶಾನ ದಾನ ವಿಧಿ ನಿರೂಪಣಂ ನಾಮ ಚತುಸ್ತ್ರಿಂಶೋऽಧ್ಯಾಯಃ

---

೪–೫. ಏಳುಜನ ಬ್ರಾಹ್ಮಣರನ್ನು ಪೂರ್ವಾಭಿಮುಖವಾಗಿಯೂ, ಒಬ್ಬ ಕನ್ಯೆಯನ್ನು ಉತ್ತರಾಭಿಮುಖವಾಗಿಯೂ, ಆಸನದಲ್ಲಿ ಕುಳ್ಳಿರಿಸಿ ಅವರನ್ನು ಕ್ರಮವಾಗಿ ಆಯಾ ಮಂತ್ರಗಳಿಂದ ಪೂಜಿಸಿ, ಆಯಾ ದೇವತಾ ಪ್ರಸಾದ ರೂಪವಾದ ಪ್ರತಿಮೆಗಳನ್ನು ದಾನಮಾಡಬೇಕು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಗಣೇಶೇಶಾನ ದಾನವಿಧಿ ನಿರೂಪಣವೆಂಬ ಮುವ್ವತ್ತು ನಾಲ್ಕನೆಯ ಅಧ್ಯಾಯವು ಮುಗಿದುದು.

ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
ಪಂಚ ತ್ರಿಂಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಅಥ ತೇ ಸಂಪ್ರವಕ್ಷ್ಯಾಮಿ ಹೇಮಧೇನು ವಿಧಿಕ್ರಮಂ ।
ಸರ್ವ ಪಾಪ ಪ್ರಶಮನಂ ಗ್ರಹದುರ್ಭಿಕ್ಷ ನಾಶನಂ ॥ ೧ ॥

ಉಪಸರ್ಗ ಪ್ರಶಮನಂ ಸರ್ವವ್ಯಾಧಿ ನಿವಾರಣಂ ।
ನಿಷ್ಕಾಣಾಂ ಚ ಸಹಸ್ರೇಣ ಸುವರ್ಣೇನ ತು ಕಾರಯೇತ್ ॥ ೨ ॥

ತದರ್ಧೇನಾಪಿ ವಾ ಸಮ್ಯಕ್ ತದರ್ಧಾರ್ಧೇನ ವಾ ಪುನಃ ।
ಶತೇನ ವಾ ಪ್ರಕರ್ತವ್ಯಾ ಸರ್ವರೂಪ ಗುಣಾನ್ವಿತಾ ॥ ೩ ॥

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಮೂವತ್ತೈದನೆಯ
ಅಧ್ಯಾಯವು.

೧. ಸನತ್ಕುಮಾರನು ಹೇಳಿದನು:—ಎಲೈ ಋಷಿಗಳೇ, ಇನ್ನು ಮುಂದೆ ಸರ್ವಪಾಪಗಳನ್ನೂ ನಾಶಮಾಡುವ ಸಾಮರ್ಥ್ಯವುಳ್ಳದ್ದೂ, ದುಷ್ಟಗ್ರಹಾವೇಶ, ದುರ್ಭಿಕ್ಷ ಮುಂತಾದುವುಗಳನ್ನು ಹೋಗಲಾಡಿಸುವುದೂ, ಆದ ಹೇಮಧೇನು ದಾನದ ವಿಧಿಯನ್ನು ಹೇಳುವೆನು.

೨–೩. ಇದಲ್ಲದೇ ಈ ಹೇಮಧೇನುವಿನ ದಾನವು ಸಕಲ ತೊಂದರೆಗಳನ್ನೂ ಮತ್ತು ನಿಖಿಲರೋಗಗಳನ್ನು ನಾಶಮಾಡತಕ್ಕದ್ದಾಗಿರುತ್ತದೆ. ಒಂದು ಸಾವಿರ ನಾಣ್ಯಗಳ ಪರಿಮಾಣವುಳ್ಳ ಸುವರ್ಣದಿಂದಲಾಗಲೀ ಅದರ ಅರ್ಧಭಾಗದಿಂದಲಾಗಲೀ, ಅಥವಾ ಅದರ ಅರ್ಧಭಾಗದಿಂದಲಾಗಲೀ, ನೂರು ಸುವರ್ಣ ನಾಣ್ಯಗಳಿಂದಲಾಗಲೀ, ಸರ್ವಲಕ್ಷಣಗಳಿಂದ ಕೂಡಿರುವ ಹಸುವನ್ನು ಮಾಡಿಸಬೇಕು.

ಗೋರೂಪಂ ಸುಖುರಂ ದಿವ್ಯಂ ಸರ್ವ ಲಕ್ಷಣ ಸಂಯುತಂ ।
ಖುರಾಗ್ರೇ ವಿನ್ಯಸೇ ದ್ವಜ್ರಂ ಶೃಂಗೇ ವೈ ಪದ್ಮರಾಗಕಂ ॥ ೪ ॥
ಭ್ರುವೋರ್ಮಧ್ಯೇ ನ್ಯಸೇದ್ದಿವ್ಯಂ ಮೌಕ್ತಿಕಂ ಮುನಿಸತ್ತಮಾಃ ।
ವೈಡೂರ್ಯೇಣ ಸ್ತನಾಃ ಕಾರ್ಯಾಃ ಲಾಂಗೂಲಂ ನೀಲತಃ ಶುಭಂ ॥ ೫ ॥
ದಂತಸ್ಥಾನೇ ಪ್ರಕರ್ತವ್ಯಃ ಪುಷ್ಯರಾಗಃ ಸು ಶೋಭನಃ ।
ಪಶುವತ್ಕಾರಯಿತ್ವಾ ತು ವತ್ಸಂ ಕುರ್ಯಾತ್ಸುಶೋಭನಂ ॥ ೬ ॥
ಸುವರ್ಣ ದಶ ನಿಷ್ಕೇಣ ಸರ್ವರತ್ನ ಸು ಶೋಭಿತಂ ।
ಪೂರ್ವೋಕ್ತ ವೇದಿಕಾಮಧ್ಯೇ ಮಂಡಲಂ ಪರಿಕಲ್ಪ್ಯ ತು ॥ ೭ ॥
ತನ್ಮಧ್ಯೇ ಸುರಭಿಂ ಸ್ಥಾಪ್ಯ ಸವತ್ಸಾಂ ಸರ್ವತತ್ತ್ವವಿತ್ ।
ಸವತ್ಸಾಂ ಸುರಭಿಂ ತತ್ರ ವಸ್ತ್ರಯುಗ್ಮೇನ ವೇಷ್ಟಯೇತ್ ॥ ೮ ॥

---

೪–೫. ಎಲೈ ಋಷಿಶ್ರೇಷ್ಠರೇ, ಗೋವಿನ ಗೊರಸನ್ನು ಸಕಲ ಲಕ್ಷಣಗಳಿಂದಲೂ ಕೂಡಿದುದನ್ನಾಗಿ ಮಾಡಿಸಬೇಕು. ಗೊರಸಿನ ಅಗ್ರಭಾಗವನ್ನು ವಜ್ರದಿಂದಲೂ, ಕೋಡನ್ನು ಪದ್ಮರಾಗ ಮಣಿಯಿಂದಲೂ, ಮಾಡಿಸಬೇಕು. ಹುಬ್ಬುಗಳ ನಡುವೆ ಮುತ್ತಿನಿಂದ ಅಲಂಕಾರಮಾಡಬೇಕು. ಸ್ತನಗಳನ್ನು ವೈಡೂರ್ಯದಿಂದಲೂ, ಬಾಲವನ್ನು ನೀಲಮಣಿಯಿಂದಲೂ ಮಾಡಿಸಬೇಕು.

೬. ಹಲ್ಲುಗಳನ್ನು ಪುಷ್ಯರಾಗಮಣಿಗಳಿಂದ ಮಾಡಿಸಬೇಕು. ಮತ್ತು ಇನ್ನಿತರ ಅವಯುವಗಳನ್ನೂ, ಗೋವಿನ ಅವಯುವಗಳಂತೆ ರಚಿಸಿ, ಲಕ್ಷಣಯುಕ್ತವಾದ ಮತ್ತು ಸುಂದರವಾದ ಕರುವನ್ನೂ ಸಹ ಮಾಡಿಸಬೇಕು.

೭–೮. ಕರುವನ್ನು ಹತ್ತು ಸುವರ್ಣ ನಾಣ್ಯಗಳಿಂದ ಮಾಡಿಸಿ, ಅದನ್ನು ರತ್ನಾದ್ಯಾಭರಣಗಳಿಂದ ಅಲಂಕರಿಸಿ. ವೇದಿಕೆಯನ್ನು ನಿರ್ಮಿಸಿ, ವೇದಿಕೆಯ ಮಧ್ಯಭಾಗದಲ್ಲಿ ಚತುರಸ್ರವಾದ ಮಂಡಲವನ್ನು ರಚಿಸಿ, ಆ ಮಂಡಲದ ಮಧ್ಯಭಾಗದಲ್ಲಿ ಕರುವಿನೊಂದಿಗೆ ಹಸುವನ್ನು ಸ್ಥಾಪಿಸಿ, ಎರಡು ವಸ್ತ್ರಗಳಿಂದ ವೇಷ್ಟನ (ಸುತ್ತುವುದು) ಮಾಡಬೇಕು.

ಸಂಪೂಜಯೇದ್ಗಾಂ ಗಾಯತ್ರ್ಯಾ ಸವತ್ಸಾಂ ಸುರಭಿಂ ಪುನಃ ।
ಅಥೈಕಾಗ್ನಿ ವಿಧಾನೇನ ಹೋಮಂ ಕುರ್ಯಾ ದ್ಯಥಾ ವಿಧಿ ॥ ೯ ॥
ಸಮಿಧಾಜ್ಯ ವಿಧಾನೇನ ಪೂರ್ವವ ಚ್ಛೇಷ ಮಾಚರೇತ್ ।
ಶಿವಪೂಜಾ ಪ್ರಕರ್ತವ್ಯಾ ಲಿಂಗಂ ಸ್ನಾಪ್ಯ ಘೃತಾದಿಭಿಃ ॥೧೦॥
ಗಾಮಾಲಭ್ಯ ಚ ಗಾಯತ್ರ್ಯಾ ಶಿವಾಯಾಽಽದಾಪಯೇ ಚ್ಛುಭಾಂ ।
ದಕ್ಷಿಣಾ ಚ ಪ್ರಕರ್ತವ್ಯಾ ತ್ರಿಂಶನ್ನಿಷ್ಕಾ ಮಹಾಮತೇ ॥೧೧॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ಹೇಮಧೇನು ದಾನವಿಧಿ ನಿರೂಪಣಂ ನಾಮ ಪಂಚತ್ರಿಂಶೋಽಧ್ಯಾಯಃ

---

೯. ಕರುವಿನೊಂದಿಗೆ ಇರುವ ಹಸುವನ್ನು ಗಾಯತ್ರೀಮಂತ್ರದಿಂದ ಪೂಜಿಸಿ ಏಕಾಗ್ನಿವಿಧಾನದಿಂದ (ಎಂದರೆ ಒಂದೇ ಅಗ್ನಿಯಲ್ಲಿ ಹೋಮಮಾಡುವ ಕ್ರಮದಿಂದ) ಹೋಮವನ್ನಾಚರಿಸಬೇಕು.

೧೦–೧೧. ಹೋಮವನ್ನು ಸಮಿತ್ತು ಮತ್ತು ಆಜ್ಯದ್ರವ್ಯಗಳಿಂದ ಮಾಡಿ, ಉಳಿದ ಉತ್ತರಾಂಗಗಳನ್ನೆಲ್ಲವನ್ನೂ ಹಿಂದೆ ಹೇಳಿದಂತೆ ನೆರವೇರಿಸಬೇಕು. ಹೋಮವನ್ನು ಮಾಡಿದ ಬಳಿಕ ಶಿವಪೂಜೆಯನ್ನು ಮಾಡಿ, ಶಿವಲಿಂಗವನ್ನು ಘೃತಾದಿ ಪಂಚಾಮೃತದಿಂದ ಅಭಿಷೇಕಮಾಡಿ, ಗಾಯತ್ರೀ ಮಂತ್ರವನ್ನು ಹೇಳಿ, ಗೋವನ್ನು ಶಿವನಿಗೋಸ್ಕರ ದಾನ ಮಾಡಬೇಕು. ಮತ್ತು ಮೂವತ್ತು ನಾಣ್ಯಗಳನ್ನು ದಕ್ಷಿಣಾರೂಪವಾಗಿ ದಾನಮಾಡಬೇಕು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದಲ್ಲಿ ಉತ್ತರಭಾಗದಲ್ಲಿ ಹೇಮಧೇನು ದಾನ ವಿಧಿನಿರೂಪಣವೆಂಬ ಮೂವತ್ತೈದನೆಯ ಅಧ್ಯಾಯವು ಮುಗಿದುದು.

ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
ಷಟ್‌ತ್ರಿಂಶತ್ತಮೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಲಕ್ಷ್ಮೀ ದಾನಂ ಪ್ರವಕ್ಷ್ಯಾಮಿ ಮಹದೈಶ್ವರ್ಯ ವರ್ಧನಂ ।
ಪೂರ್ವೋಕ್ತ ಮಂಡಪೇ ಕಾರ್ಯಂ ವೇದಿಕೋಪರಿ ಮಂಡಲೇ ॥ ೧ ॥

ಶ್ರೀದೇವೀ ಮತುಲಾಂ ಕೃತ್ವಾ ಹಿರಣ್ಯೇನ ಯಥಾವಿಧಿ ।
ಸಹಸ್ರೇಣ ತದರ್ಧೇನ ತದರ್ಧಾ ರ್ಧೇನ ವಾ ಪುನಃ ॥ ೨ ॥

ಅಷ್ಟೋತ್ತರ ಶತೇ ನಾಽಪಿ ಸರ್ವಲಕ್ಷಣ ಸಂಯುತಾಂ ।
ಮಂಡಲೇ ವಿನ್ಯಸೇಲ್ಲಕ್ಷ್ಮೀಂ ಸರ್ವಾಲಂಕಾರ ಸಂಯುತಾಂ ॥ ೩ ॥

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಮುವ್ವತ್ತಾರನೆಯ ಅಧ್ಯಾಯವು.

೧. ಸನತ್ಕುಮಾರನು ಹೇಳಿದನು:—ಎಲೈ ಋಷಿಗಳೇ, ಅತುಲವಾದ ಐಶ್ವರ್ಯವನ್ನು ಕೊಡುವ ಮತ್ತು ಐಶ್ವರ್ಯವನ್ನು ವೃದ್ಧಿಪಡಿಸುವ ಸುವರ್ಣ ಲಕ್ಷ್ಮೀದಾನದ ವಿಧಿಯನ್ನು ನಿಮಗೆ ಹೇಳುವೆನು. ಹಿಂದೆ ಹೇಳಿದಂತೆ ಮಂಟಪದಲ್ಲಿ ವೇದಿಕೆಯನ್ನು ನಿರ್ಮಿಸಿ, ಆ ವೇದಿಕೆಯಲ್ಲಿ ಮಂಡಲವನ್ನು ರಚಿಸಿ, ಅದರಲ್ಲಿ ಲಕ್ಷ್ಮಿಯನ್ನು ಸ್ಥಾಪಿಸಿ ದಾನ ಮಾಡಬೇಕು.

೨–೩. ಸಹಸ್ರ ಸುವರ್ಣನಾಣ್ಯ ಪರಿಮಿತವಾದ ಸುವರ್ಣದಿಂದಲಾಗಲೀ, ಅದರ ಅರ್ಧಾಂಶದಿಂದಲಾಗಲೀ, ಅಥವಾ ಅದರಲ್ಲಿಯೂ ಅರ್ಧಾಂಶದಿಂದಲಾಗಲೀ, ಅದನ್ನು ಅನುಸರಿಸಲು ಸಾಮರ್ಥ್ಯವಿಲ್ಲದವನು ನೂರೆಂಟು ಸುವರ್ಣನಾಣ್ಯದಿಂದಾಗಲೀ ಲಕ್ಷ್ಮಿಯ ಪ್ರತಿಮೆಯನ್ನು ಮಾಡಿಸಿ, ಅದನ್ನು ಒಡವೆಗಳಿಂದ ಅಲಂಕರಿಸಿ ಮಂಡಲದಲ್ಲಿ ಸ್ಥಾಪಿಸಿ ಪ್ರತಿಮೆಯ ಬಲಪಾರ್ಶ್ವದಲ್ಲಿ ವಿಷ್ಣುವನ್ನು ಸ್ಥಾಪನೆಮಾಡಿ, ಆ ವಿಷ್ಣುವಿನ ಮೂರ್ತಿಯನ್ನು ಪೂಜಿಸಬೇಕು.

ತಸ್ಯಾಸ್ತು ದಕ್ಷಿಣೇ ಭಾಗೇ ಸ್ಥಂಡಿಲೇ ವಿಷ್ಣುಮರ್ಚಯೇತ್ ।
ಅರ್ಚಯಿತ್ವಾ ವಿಧಾನೇನ ಶ್ರೀಸೂಕ್ತೇನ ಸುರೇಶ್ವರೀಂ ॥ ೪ ॥
ಅರ್ಚಯೇದ್ವಿಷ್ಣುಗಾಯತ್ರ್ಯಾ ವಿಷ್ಣುಂ ವಿಶ್ವಗುರುಂ ಹರಿಂ ।
ಆರಾಧ್ಯ ವಿಧಿನಾ ದೇವೀಂ ಪೂರ್ವವದ್ಧೋಮಮಾಚರೇತ್ ॥ ೫ ॥
ಸಮಿದ್ಧುತ್ವಾ ವಿಧಾನೇನ ಆಜ್ಯಾಹುತಿ ಮಥಾಚರೇತ್ ।
ಪೃಥಗಷ್ಟೋತ್ತರಶತಂ ಹೋಮಯೇ ದ್ಬ್ರಾಹ್ಮಣೋತ್ತಮೈಃ ॥
ಆಹೂಯ ಯಜಮಾನಂ ತು ತಸ್ಯಾಃ ಪೂರ್ವದಿಶಿ ಸ್ಥಲೇ ।
ತಸ್ಯೈತಾಂ ದರ್ಶಯೇದ್ದೇವೀಂ ದಂಡವತ್ಪ್ರಣಮೇ ತ್ಕ್ಷಿತೌ ॥ ೭ ॥
ಪ್ರಣಮ್ಯ ವಿಷ್ಣುಂ ತತ್ರಸ್ಥಂ ಶಿವಂ ಪೂರ್ವವದರ್ಚಯೇತ್ ।
ತಸ್ಯಾ ವಿಂಶತಿ ಭಾಗಂ ತು ದಕ್ಷಿಣಾ ಪರಿಕೀರ್ತಿತಾ ॥ ೮ ॥

---

೪–೫ ದೇವಾಧಿಪಳಾದ ಲಕ್ಷ್ಮಿಯನ್ನು ಶ್ರೀಸೂಕ್ತ ವಿಧಾನದಿಂದಲೂ,ಎಲ್ಲಕ್ಕೂ ಗುರುವಾದ ವಿಷ್ಣುವನ್ನು ವಿಷ್ಣುಗಾಯತ್ರಿಯ ವಿಧಾನದಿಂದಲೂ, ಪೂಜಿಸಿ ಹಿಂದೆ ಹೇಳಿದಂತೆ ಹೋಮವನ್ನಾಚರಿಸಬೇಕು.

೬. ಮೊದಲು ಸಮಿದ್ಧೋಮವನ್ನು ನೆರವೇರಿಸಿ ನೂರೆಂಟು ಬಾರಿ ಶ್ರೇಷ್ಠರಾದ ಬ್ರಾಹ್ಮಣರಿಂದ ಆಜ್ಯಾಹುತಿಯಿಂದ ಹೋಮವನ್ನು ಪ್ರತ್ಯೇಕವಾಗಿ ಮಾಡಿಸಬೇಕು.

೭. ಅನಂತರದಲ್ಲಿ ಯಜಮಾನನನ್ನು ಕರೆದು ಪೂರ್ವ ಪಾರ್ಶ್ವಸ್ಥಳಾದ ದೇವಿಯ ಪ್ರತಿಮೆಯನ್ನು ತೋರಿಸಿ ನಮಸ್ಕಾರವನ್ನು ಮಾಡಿಸಬೇಕು.

೮. ಬಳಿಕ ವಿಷ್ಣುವನ್ನು ನಮಸ್ಕರಿಸಿ ಶಿವನನ್ನು ಅರ್ಚಿಸಬೇಕು. ಆ ಪ್ರತಿಮೆಯ ಪರಿಮಾಣದ ಇಪ್ಪತ್ತನೆಯ ಒಂದು ಅಂಶವನ್ನು ದಕ್ಷಿಣಾ ರೂಪದಿಂದ ದಾನಮಾಡಬೇಕು.

**ತದರ್ಧಾಂಶಂ ತು ದಾತವ್ಯಂ ಇತರೇಷಾಂ ಯಥಾಽರ್ಹತಃ**
**ತತಸ್ತು ಹೋಮಯೇಚ್ಛಂಭುಂ ಭಕ್ತ್ಯೋ ಯೋಗೀ ವಿಶೇಷತಃ ॥**

**ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ಲಕ್ಷ್ಮೀದಾನ ವಿಧಿ ನಿರೂಪಣಂ ನಾಮ ಷಟ್ ತ್ರಿಂಶತ್ತಮೋಽಧ್ಯಾಯಃ**

---

೯. ಇತರ ಬ್ರಾಹ್ಮಣರಿಗೆ ಹಿಂದೆ ಹೇಳಿದ ದಕ್ಷಿಣೆಯ ಅರ್ಧ ಭಾಗವನ್ನು ದಾನಮಾಡಿ, ತರುವಾಯ ಯೋಗಿಯಾದ ಭಕ್ತನು ಶಿವನಿಗೋಸ್ಕರ ಹೋಮವನ್ನು ಮಾಡಬೇಕು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಲಕ್ಷ್ಮೀದಾನ ವಿಧಿ ನಿರೂಪಣವೆಂಬ ಮುವ್ವತ್ತಾರನೆಯ ಅಧ್ಯಾಯವು ಮುಗಿದುದು.



## ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
## ಸಪ್ತ ತ್ರಿಂಶೋಽಧ್ಯಾಯಃ

**॥ ಸನತ್ಕುಮಾರ ಉವಾಚ ॥**

**ಅಥಾತಃ ಸಂಪ್ರವಕ್ಷ್ಯಾಮಿ ತಿಲಧೇನು ವಿಧಿಕ್ರಮಂ ।**
**ಪೂರ್ವೋಕ್ತ ಮಂಡಪೇ ಕುರ್ಯಾಚ್ಛಿವ ಪೂಜಾಂತು ಪಶ್ಚಿಮೇ ॥ ೧ ॥**
**ತಸ್ಯಾಗ್ರೇ ಮಧ್ಯತೋ ಭೂಮೌ ಪದ್ಮಮಾಲಿಖ್ಯ ಶೋಭನಂ ।**
**ವಸ್ತ್ರೈರಾಚ್ಛಾದಿತಂ ಪದ್ಮಂ ತನ್ಮಧ್ಯೇ ವಿನ್ಯಸೇಚ್ಛಿವಂ ॥ ೨ ॥**
**ತಿಲಪುಷ್ಪಂ ತು ಕೃತ್ವಾಽಥ ಹೇಮಪದ್ಮಂ ವಿನಿಕ್ಷಿಪೇತ್ ।**
**ತ್ರಿಂಶನ್ನಿಷ್ಕೇಣ ಕರ್ತವ್ಯಂ ತದರ್ಧಾರ್ಧೇನ ವಾ ಪುನಃ ॥ ೩ ॥**

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಮುವ್ವತ್ತೇಳನೆಯ ಅಧ್ಯಾಯವು.

೧. ಸನತ್ಕುಮಾರನು ಹೇಳಿದನು :—ಹಿಂದೆ ಹೇಳಿದ ಕ್ರಮದಲ್ಲಿಯೇ ಮಂಟಪದಲ್ಲಿ ವೇದಿಕೆಯಮೇಲೆ ಮಂಡಲವನ್ನು ರಚಿಸಿ, ಆ ಮಂಡಲದಲ್ಲಿ ಪೂಜಾದಿಕಾರ್ಯಗಳನ್ನು ನೆರವೇರಿಸಬೇಕು. ಶಿವ ಪೂಜೆಯನ್ನು ಮಾತ್ರ ಪಶ್ಚಿಮದಿಕ್ಕಿನಲ್ಲಿ ಆಚರಿಸಬೇಕು.

೨. ಮಂಡಲದ ಮಧ್ಯಪ್ರದೇಶದಲ್ಲಿ ಒಂದು ಸುಂದರವಾದ ಪದ್ಮವನ್ನು ಬರೆದು (ಲೇಖಿಸಿ) ಅದನ್ನು ವಸ್ತ್ರಗಳಿಂದ ಮುಚ್ಚಿ ಅದರ ಮಧ್ಯದಲ್ಲಿ ಒಂದು ತಿಲಪುಷ್ಪ (ಎಳ್ಳಿನ ಹೂ) ವನ್ನು ಸ್ಥಾಪಿಸಿ ಬಳಿಕ ಸುವರ್ಣ ಪದ್ಮವನ್ನು ಸ್ಥಾಪಿಸಬೇಕು.

೩. ಪದ್ಮವನ್ನು ಮುವ್ವತ್ತು ಸುವರ್ಣ ನಾಣ್ಯಗಳಿಂದಲಾಗಲೀ, ಅದರ ಅರ್ಧಾಂಶದಿಂದಲಾಗಲೀ ಅಥವಾ ಅದರ ಅರ್ಧಾಂಶದಿಂದಲಾಗಲೀ ಅದರಲ್ಲಿಯೂ ಅಸಮರ್ಥನಾದವನು ಐದೇ ನಾಣ್ಯಗಳಿಂದಲಾಗಲೀ, ಇನ್ನೂ ಅಸಮರ್ಥನಾದವನು ಅದರ ಅರ್ಧ, ಅಥವಾ, ಅದರ ಅರ್ಧಾರ್ಧ ಅಂಶದಿಂದಲಾದರೂ ಮಾಡಿಸಬೇಕು.

ಪಂಚ ನಿಷ್ಕೇಣ ಕರ್ತವ್ಯಂ ತದರ್ಧಾರ್ಧೇನ ವಾ ಪುನಃ ।
ತಮಾರಾಧ್ಯ ವಿಧಾನೇನ ಗಂಧ ಪುಷ್ಪಾದಿಭಿಃ ಕ್ರಮಾತ್ ॥ ೪ ॥
ಪದ್ಮಸ್ಯೋತ್ತರ ದಿ ಗ್ಭಾಗೇ ವಿಪ್ರಾನೇಕಾ ದಶ ನ್ಯಸೇತ್ ।
ತಾನಭ್ಯರ್ಚ್ಯ ವಿಧಾನೇನ ಗಂಧಪುಷ್ಪಾದಿಭಿಃ ಕ್ರಮಾತ್ ॥ ೫ ॥
ಆ ಚ್ಛಾದ ನೋತ್ತರಾಸಂಗಂ ವಿಪ್ರೇಭ್ಯೋ ದಾಪಯೇತ್ಕ್ರಮಾತ್ ।
ಉಷ್ಣೀಷಂ ಚ ಪ್ರದಾತವ್ಯಂ ಕುಂಡಲೇ ಚ ವಿಭೂಷಿತೇ ॥ ೬ ॥
ಹೇಮಾಂಗುಲೀಯಕಂ ದತ್ವಾಬ್ರಾಹ್ಮಣೇ ಭ್ಯೋ ವಿಧಾನತಃ ।
ಏಕಂ ದಶ ಚ ವಸ್ತ್ರಾಣಿ ತೇಷಾ ಮಗ್ರೇ ಪ್ರಕೀರ್ಯ ಚ ॥ ೭ ॥
ತೇಷು ವಸ್ತ್ರೇಷು ನಿ(ಃ)ಕ್ಷಿಪ್ಯ ತಿಲಾದ್ಯಾನಿ ಪೃಥಕ್ ಪೃಥಕ್ ।
ಕಾಂಸ್ಯಪಾತ್ರಂ ಶತಪಲಂ ವಿಭಿದ್ಯೈಕಾ ದಶಾಂಶಕಂ ॥ ೮ ॥

---

೪–೬. ಆ ಸುವರ್ಣಪದ್ಮವನ್ನು ವಿಧಿವತ್ತಾಗಿ ಗಂಧ ಪುಷ್ಪಾದಿಗಳಿಂದ ಪೂಜಿಸಿ, ಪದ್ಮದ ಉತ್ತರದಿಕ್ಕಿನಲ್ಲಿ ಹನ್ನೊಂದು ಜನ ಬ್ರಾಹ್ಮಣರನ್ನು ಕುಳ್ಳಿರಿಸಿ, ಅವರನ್ನು ಗಂಧಪುಷ್ಪಾದಿಗಳಿಂದ ಅರ್ಚಿಸಿ, ತಿಲಪುಷ್ಪದ ಮೇಲೆ ಆಚ್ಛಾದಿಸಿದ ವಸ್ತ್ರವನ್ನೂ, ಉತ್ತರೀಯವನ್ನೂ, (ಹೊದೆಯುವ ವಸ್ತ್ರ) ಉಷ್ಣೀಷವನ್ನೂ, ( ತಲೆಗೆ ಸುತ್ತುವ ವಸ್ತ್ರ, ಪೇಟ) ರತ್ನಗಳಿಂದ ಅಲಂಕರಿಸಲ್ಪಟ್ಟ ಕುಂಡಲಗಳನ್ನೂ, (ಕರ್ಣಾಭರಣ) ದಾನಮಾಡಬೇಕು.

೭–೮. ಇದಲ್ಲದೇ ಪ್ರತಿಯೊಬ್ಬ ಬ್ರಾಹ್ಮಣನಿಗೂ ಒಂದೊಂದು ಸುವರ್ಣದ ಉಂಗುರವನ್ನು ದಾನಮಾಡಿ, ಅವರ ಮುಂಭಾಗದಲ್ಲಿ ಹನ್ನೊಂದು ವಸ್ತ್ರಗಳನ್ನು ಹಾಸಿ, ಆ ವಸ್ತ್ರಗಳಮೇಲೆ ಬೇರೆಬೇರೆಯಾಗಿ ಎಳ್ಳು ಮುಂತಾದುವುಗಳನ್ನು ಇಟ್ಟು, ಆ ಎಳ್ಳುಗಳಮೇಲೆ ನೂರುಪಲಗಳಷ್ಟು ಭಾರವಾಗಿರುವ ಕಂಚಿನಪಾತ್ರೆಯನ್ನೂ ಮತ್ತು ಪ್ರಧಾನವಾಗಿ ಪ್ರತಿಯೊಬ್ಬನಿಗೂ ಕಬ್ಬಿನ ಕೋಲನ್ನು ಹನ್ನೊಂದು ಭಾಗಮಾಡಿ ದಾನಮಾಡಬೇಕು.

ಇಕ್ಷುದಂಡಂ ಚ ದಾತವ್ಯಂ ಬ್ರಾಹ್ಮಣೇಭ್ಯೋ ವಿಶೇಷತಃ ।
ಗೋಶೃಂಗೇ ತು ಹಿರಣ್ಯೇನ ದ್ವಿನಿಷ್ಕೇಣ ತು ಕಾರಯೇತ್ ॥ ೯ ॥
ರಜತೇನ ತು ಕರ್ತವ್ಯಾಃ ಖುರಾಃ ನಿಷ್ಕ ದ್ವಯೇನ ತು ।
ಏವಂ ಪೃಥಕ್ ಪೃಥಕ್ ದತ್ವಾ ತತ್ತಿಲೇಷು ವಿನಿಕ್ಷಿಪೇತ್ ॥೧೦॥
ರುದ್ರೈಕಾದಶ ಮಂತ್ರೈಸ್ತು ರುದ್ರೇಭ್ಯೋ ದಾಪಯೇತ್ತದಾ ।
ಪದ್ಮಸ್ಯ ಪೂರ್ವದಿಗ್ಭಾಗೇ ವಿಪ್ರಾನ್ ದ್ವಾದಶ ಪೂಜಿತಾನ್ ॥೧೧॥
ಏತೇನೈವ ತು ಮಾರ್ಗೇಣ ತೇಷು ಶ್ರದ್ಧಾ ಸಮನ್ವಿತಃ ।
ದ್ವಾದಶಾದಿತ್ಯ ಮಂತ್ರೈಶ್ಚ ದಾಪಯೇ ದೇವಮೇವಚ ॥೧೨॥
ಪೂರ್ವ ವದ್ದಕ್ಷಿಣೇ ಭಾಗೇ ವಿಪ್ರಾನ್ ಷೋಡಶ ಸಂಸ್ಥಿತಾನ್ ।
ಮೂರ್ತಿಂ ವಿಘ್ನೇಶ ಮಂತ್ರೈಶ್ಚ ದಾಪಯೇತ್ ಪೂರ್ವವತ್ಪುನಃ ॥
ಯಜಮಾನೇನ ಕರ್ತವ್ಯಂ ಸರ್ವಮೇತದ್ಯಥಾ ಕ್ರಮಂ ।
ಕೇವಲಂ ರುದ್ರದಾನಂ ವಾ ಆದಿತ್ಯೇಭ್ಯೋಽಥ ವಾ ಪುನಃ ॥೧೪॥

---

೯–೧೧. ಗೋಶೃಂಗಗಳನ್ನು ಎರಡು ಸುವರ್ಣನಾಣ್ಯಗಳಿಂದಲೂ, ಗೋವಿನ ಗೊರಸುಗಳನ್ನು ಎರಡು ಬೆಳ್ಳಿಯ ನಾಣ್ಯಗಳಿಂದಲೂ, ಮಾಡಿಸಿ ಅದನ್ನು ಪ್ರತ್ಯೇಕ ಪ್ರತ್ಯೇಕವಾಗಿ ತಿಲಪಾತ್ರೆಗಳಲ್ಲಿರಿಸಿ, ಏಕಾದಶ ರುದ್ರರ ಮಂತ್ರಗಳಿಂದ ಏಕಾದಶ ರುದ್ರರಸ್ಥಾನದಲ್ಲಿ ಆವಾಹನೆಮಾಡಲ್ಪಟ್ಟ ಬ್ರಾಹ್ಮಣರಿಗೆ ದಾನಮಾಡಬೇಕು.

೧೨–೧೩. ಇದೇರೀತಿಯಲ್ಲಿ ಸುವರ್ಣ ಪದ್ಮದ ಪೂರ್ವದಿಕ್ಕಿನಲ್ಲಿ ಹನ್ನೆರಡು ಜನ ಬ್ರಾಹ್ಮಣರನ್ನು ಕುಳ್ಳಿರಿಸಿ ಅವರನ್ನು ವಿಧಿವತ್ತಾಗಿ ಪೂಜಿಸಿ, ದ್ವಾದಶಾದಿತ್ಯರ ಮಂತ್ರಗಳಿಂದ ಬ್ರಾಹ್ಮಣರಿಗೆ ದಾನವನ್ನು ಮಾಡಿಸಬೇಕು. ಹಿಂದಿನಂತೆಯೇ ಪದ್ಮದ ದಕ್ಷಿಣಭಾಗದಲ್ಲಿ ಹದಿನಾರು ಜನ ಬ್ರಾಹ್ಮಣರನ್ನು ಕೂರಿಸಿ, ಭಕ್ತಿಯಿಂದ ಪೂಜಿಸಿ, ವಿಘ್ನೇಶ್ವರನ ಮಂತ್ರಗಳಿಂದ ದಾನವನ್ನು ಮಾಡಿಸಬೇಕು. ಇವೆಲ್ಲ ಕಾರ್ಯಗಳನ್ನೂ ಯಜಮಾನನೇ ಮಾಡಬೇಕು.

೧೪. ಅಥವಾ ಬ್ರಾಹ್ಮಣರನ್ನು ದ್ವಾದಶಾದಿತ್ಯರಸ್ಥಾನದಲ್ಲಿ ಪೂಜಿಸಿ, ಅವರಿಗೆ ಕೇವಲ ರುದ್ರದಾನವನ್ನಾಗಲೀ, ಪ್ರತಿಮೆಗಳದಾನವನ್ನಾಗಲೀ, ತನ್ನ ಶಕ್ತಿಗೆ ಅನುಸಾರವಾಗಿ ಮಾಡಬೇಕು.

ಮೂರ್ತ್ಯಾದೀನಾಂ ಚ ವಾ ದೇಯಂ ಯಥಾ ವಿಭವವಿಸ್ತರಂ ।
ಪದ್ಮಂ ವಿನ್ಯಸ್ಯ ರಾಜಾಽಸೌ ಶೇಷಂ ವಾ ಕಾರಯ(ಯೇ)ನ್ನೃಪಃ ॥
ದಕ್ಷಿಣಾ ಚ ಪ್ರದಾತವ್ಯಾ ಪಂಚ ನಿಷ್ಕೇಣ ಭೂಷಣಂ ॥೧೬॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ತಿಲಧೇನು ದಾನ ವಿಧಿ
ನಿರೂಪಣಂ ನಾಮ ಸಪ್ತ ತ್ರಿಂಶೋಽಧ್ಯಾಯಃ

---

೧೫–೧೬. ಈ ದಾನವಿಧಿಯಲ್ಲಿ ರಾಜನು ಪದ್ಮವನ್ನು ಮಾತ್ರ ವಿನ್ಯಾಸಮಾಡಿ, ಉಳಿದ ಕಾರ್ಯಗಳನ್ನು ಪುರೋಹಿತನ ಮೂಲಕ ಮಾಡಿಸಬೇಕು. ಐದು ನಾಣ್ಯಗಳನ್ನು ದಕ್ಷಿಣಾರೂಪದಿಂದ ದಾನಮಾಡಬೇಕು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ತಿಲಧೇನು ದಾನವಿಧಿ
ನಿರೂಪಣ ವೆಂಬ ಮುವ್ವತ್ತೇಳನೆಯ ಅಧ್ಯಾಯವು ಸಮಾಪ್ತವಾಯಿತು.

अथ श्री लिंगमहापुराणे उत्तरभागे
अष्टत्रिंशोऽध्यायः

ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
ಅಷ್ಟ ತ್ರಿಂಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಗೋಸಹಸ್ರ ಪ್ರದಾನಂ ಚ ವದಾಮಿ ಶೃಣು ಸುವ್ರತ
ಗವಾಂ ಸಹಸ್ರ ಮಾದಾಯ ಸವತ್ಸಂ ಸಗುಣಂ ಶುಭಂ ॥ ೧ ॥

ತಾಸ್ತ್ವಭ್ಯರ್ಚ್ಯ ಯಥಾಶಾಸ್ತ್ರ ಮಷ್ಟೌ ಸಮ್ಯಕ್ಪ್ರಯತ್ನತಃ ।
ತಾಸಾಂ ಶೃಂಗಾಣಿ ಹೇಮ್ನಾಽಥ ಪ್ರತಿನಿಷ್ಕೇಣ ಬಂಧಯೇತ್ ॥ ೨ ॥

ಖುರಾಂಶ್ಚ ರಜತೇನೈವ ಬಂಧಯೇತ್ಕಂಠದೇಶತಃ ।
ಪ್ರತಿ ನಿಷ್ಕೇಣ ಕರ್ತವ್ಯಂ ಕರ್ಣೇ ವಜ್ರಂ ಚ ಶೋಭನಂ ॥ ೩ ॥

ಶಿವಾಯ ದದ್ಯಾ ದ್ವಿಪ್ರೇಭ್ಯೋ ದಕ್ಷಿಣಾಂ ಚ ಪೃಥಕ್ ಪೃಥಕ್ ।
ದಶನಿಷ್ಕಂ ತದರ್ಧಂ ವಾ ತಸ್ಯಾರ್ಧಾರ್ಧಮಥಾಪಿ ವಾ । ॥ ೪ ॥

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಮೂವತ್ತೆಂಟನೆಯ ಅಧ್ಯಾಯವು.

೧-೩. ಸನತ್ಕುಮಾರನು ಹೇಳಿದನು:—ಎಲೈ ಸದಾಚಾರಿಯೇ, ಸಹಸ್ರ ಗೋದಾನವನ್ನು ಮಾಡುವ ಕ್ರಮವನ್ನು ಹೇಳುತ್ತೇನೆ ಕೇಳುವವನಾಗು. ಚೆನ್ನಾಗಿರುವ ಮತ್ತು ಕರುಗಳಿಂದ ಕೂಡಿರುವ ಸಹಸ್ರಗೋವುಗಳನ್ನು ತಂದು ಆ ಗೋವುಗಳಲ್ಲಿ ಎಂಟು ಗೋವುಗಳನ್ನು ಯಥಾ ಶಾಸ್ತ್ರವಾಗಿಪೂಜೆಮಾಡಿ, ತರುವಾಯ ಆ ಸಹಸ್ರ ಗೋವುಗಳ ಪ್ರತಿಯೊಂದು ಕೊಂಬನ್ನೂ ಸುವರ್ಣನಾಣ್ಯಗಳಿಂದ ಬಂಧಿಸಿ, ಕಂಠದೇಶದಲ್ಲಿಯೂ, ಮತ್ತು ಗೊರಸುಗಳಲ್ಲಿಯೂ, ರಜತನಾಣ್ಯಗಳನ್ನು ಕಟ್ಟಿ ಕಿವಿಯಲ್ಲಿ ಒಳ್ಳೆಯ ವಜ್ರಾಭರಣವನ್ನು ಕಟ್ಟಬೇಕು.

೪-೫. ಹೀಗೆ ಪೂಜೆಮಾಡಿದ ಗೋವುಗಳನ್ನು ಶಿವನಿಗೆ ಸಮರ್ಪಣೆ ಮಾಡಿ, ಬ್ರಾಹ್ಮಣರಿಗೆ ಬೇರೆಬೇರೆಯಾಗಿ ದಕ್ಷಿಣೆಯನ್ನು ಕೊಡಬೇಕು. ಹತ್ತು ನಾಣ್ಯಗಳನ್ನಾಗಲೀ, ಐದು ನಾಣ್ಯಗಳನ್ನಾಗಲೀ, ಎರಡೂವರೆ

ಯಥಾ ವಿಭವ ವಿಸ್ತಾರಂ ನಿಷ್ಕಮಾತ್ರ ಮಥಾಪಿ ವಾ ।
ವಸ್ತ್ರಯುಗ್ಮಂ ಚ ದಾತವ್ಯಂ ಪೃಥ ಗ್ವಿಪ್ರೇಷು ಶೋಭನಂ ॥ ೫ ॥
ಗಾವಶ್ಚಾರಾಧ್ಯ ಯತ್ನೇನ ದಾತವ್ಯಾಃ ಸುಮನೋರಮಾಃ ।
ಏವಂ ದತ್ವಾ ವಿಧಾನೇನ ಶಿವಮಭ್ಯರ್ಚ್ಯ ಶಂಕರಂ ॥ ೬ ॥
ಜಪೇದಗ್ರೇ ಯಥಾನ್ಯಾಯಂ ಗವಾಂ ಸ್ತವಮನುತ್ತಮಂ ।
ಗಾವೋ ಮಮಾಗ್ರತೋ ನಿತ್ಯಂ ಗಾವೋ ನಃ ಪೃಷ್ಠತಸ್ತಥಾ ॥ ೭ ॥
ಹೃದಯೇ ಮೇ ಸದಾ ಗಾವೋ ಗವಾಂ ಮಧ್ಯೇ ವಸಾಮ್ಯಹಂ ।
ಇತಿ ಕೃತ್ವಾ ದ್ವಿಜಾಗ್ರೇಭ್ಯೋ ದತ್ವಾ ಗತ್ವಾ ಪ್ರದಕ್ಷಿಣಂ ॥ ೮ ॥

---

ನಾಣ್ಯಗಳನ್ನಾಗಲೀ, ಅಥವಾ ಯಥಾಶಕ್ತಿಯಿಂದ ಒಂದೇ ನಾಣ್ಯವನ್ನಾದರೂ ಬ್ರಾಹ್ಮಣರಿಗೆ ದಾನಮಾಡಬೇಕು. ಇದಲ್ಲದೇ ಪ್ರತ್ಯೇಕವಾಗಿ ಪ್ರತಿಬ್ರಾಹ್ಮಣರಿಗೂ, ಸಮೀಚೀನವಾದ ವಸ್ತ್ರಯುಗ್ಮವನ್ನು ದಾನ ಮಾಡಬೇಕು.

೬. ಪೂರ್ವೋಕ್ತ ವಿಧಾನದಿಂದ ದಕ್ಷಿಣೆಯನ್ನು ದಾನಮಾಡಿ, ಶಿವನ ಪೂಜೆಯನ್ನು ಮಾಡಿ, ಶ್ರೇಷ್ಠವಾದ ಗೋಸ್ತೋತ್ರವನ್ನು ಜಪಮಾಡಬೇಕು.

೭–೯. ತನ್ನ ಮುಂಭಾಗದಲ್ಲಿಯೂ, ಪೃಷ್ಠಭಾಗದಲ್ಲಿಯೂ, ಹೃದಯದಲ್ಲಿಯೂ, ಸರ್ವದಾ ಗೋವುಗಳು ನೆಲಸಿರುತ್ತವೆ. ಮತ್ತು ನಾನು ಗೋವುಗಳ ನಡುವೆಯೇ ವಾಸಮಾಡುತ್ತೇನೆ. ಹೀಗೆಂದು ಭಾವಿಸಿ ಸ್ತೋತ್ರಮಾಡಿ ಗೋವುಗಳನ್ನು ಬ್ರಾಹ್ಮಣ ಶ್ರೇಷ್ಠರಿಗೆ ದಾನಮಾಡಿ, ಪ್ರದಕ್ಷಿಣೆಯನ್ನು ಮಾಡಿದರೆ ಆ ಗೋವುಗಳಿಗೆ ಎಷ್ಟು ರೋಮ

ತದ್ರೋಮ ವರ್ಷ ಸಂಖ್ಯಾನಿ ಸ್ವರ್ಗ ಲೋಕೇ ಮಹೀಯತೇ ॥ ೯ ॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ಗೋಸಹಸ್ರದಾನಂ
ನಾಮ ಅಷ್ಟ ತ್ರಿಂಶೋಽಧ್ಯಾಯಃ

---

ಗಳಿವೆಯೋ ಅಷ್ಟು ರೋಮಗಳ ಸಂಖ್ಯೆಯ ವರ್ಷಗಳ ಪರ್ಯಂತ ಸ್ವರ್ಗ ಲೋಕದಲ್ಲಿ ಸುಖವನ್ನನುಭವಿಸುತ್ತಾನೆ.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಗೋಸಹಸ್ರದಾನ ವಿಧಿಯೆಂಬ
ಮುವ್ವತ್ತೆಂಟನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
## ನವತ್ರಿಂಶತಿ ತಮೋಽಧ್ಯಾಯಃ

**॥ ಸನತ್ಕುಮಾರ ಉವಾಚ ॥**

**ಹಿರಣ್ಯಾಶ್ವ ಪ್ರದಾನಂ ಚ ವದಾಮಿ ವಿಜಯಾ ವಹಂ ।**
**ಅಶ್ವಮೇಧಾ ತ್ಪುನಃ ಶ್ರೇಷ್ಠಂ ವದಾಮಿ ಶೃಣು ಸುವ್ರತ ॥ ೧ ॥**
**ಅಷ್ಟೋತ್ತರ ಸಹಸ್ರೇಣ ಅಷ್ಟೋತ್ತರ ಶತೇನ ವಾ ।**
**ಕೃತ್ವಾಽಶ್ವಂ ಲಕ್ಷಣೈರ್ಯುಕ್ತಂ ಸರ್ವಾಲಂಕಾರ ಸಂಯುತಂ ॥ ೨ ॥**
**ಪಂಚ ಕಲ್ಯಾಣ ಸಂಪನ್ನಂ ದಿವ್ಯಾಕಾರಂ ತು ಕಾರಯೇತ್ ।**
**ಸರ್ವಲಕ್ಷಣ ಸಂಯುಕ್ತಂ ಸರ್ವಾಂಗೈಶ್ಚ ಸಮನ್ವಿತಂ ॥ ೩ ॥**

---

### ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಮುಷ್ಪತ್ತೊಂಬತ್ತನೆಯ ಅಧ್ಯಾಯವು.

೧. ಸನತ್ಕುಮಾರನು ಹೇಳಿದನು:—ಎಲೈ ತಪಸ್ವಿಯೇ, ಅಶ್ವಮೇಧ ಯಾಗಿಕ್ಕಿಂತಲೂ ಶ್ರೇಷ್ಠವಾದ ಮತ್ತು ವಿಜಯವನ್ನು ಸಂಪಾದಿಸಿ ಕೊಡುವ ಸುವರ್ಣಮಯವಾದ ಅಶ್ವಗಳ ದಾನಕ್ರಮವನ್ನು ಹೇಳುತ್ತೇನೆ ಕೇಳುವವನಾಗು.

೨–೪. ಒಂದು ಸಾವಿರ ಎಂಟು ತೊಲ ಪರಿಮಿತವಾದ ಅಥವಾ ನೂರೆಂಟು ತೊಲಗಳಿಂದ ಪರಿಮಿತವಾದ ಸುವರ್ಣದಿಂದ ಸಕಲ ಲಕ್ಷಣಗಳಿಂದಲೂ ಕೂಡಿರುವ ಸರ್ವಾಂಗಗಳಲ್ಲಿಯೂ ಅಲಂಕೃತವಾದ ಮತ್ತು ಕಾಲುಗಳ ಆದಿಭಾಗಗಳಲ್ಲಿ ಶ್ವೇತವರ್ಣವುಳ್ಳ ಅಶ್ವವನ್ನು ಮಾಡಿಸಿ, ಚಕ್ರಾದಿ ಅವಯವಗಳಿಂದಲೂ, ಸಕಲ ಲಕ್ಷಣಗಳಿಂದಲೂ, ಸಕಲ ಆಯುಧಗಳಿಂದಲೂ, ಕೂಡಿರುವ ರಥವನ್ನು ಮಾಡಿಸಿ, ಆ ರಥದ ಮಧ್ಯದಲ್ಲಿ ಸುವರ್ಣಾಶ್ವವನ್ನು ಕೂಡಿಸಿ, ಸ್ಥಾಪಿಸಿ, ಆ ಕುದುರೆಯನ್ನು,

ಸರ್ವಾಯುಧ ಸಮೋಪೇತ ಮಿಂದ್ರವಾಹನ ಮುತ್ತಮಂ ।
ತನ್ಮಧ್ಯದೇಶೇ ಸಂಸ್ಥಾಪ್ಯ ತುರಂಗಂ ಸ್ವಗುಣಾನ್ವಿತಂ ॥ ೪ ॥

ಉಚ್ಚೈಃಶ್ರವಸಕಂ ದತ್ವಾ ಭಕ್ತ್ಯಾ ಚೈವ ಸಮರ್ಚಯೇತ್ ।
ತಸ್ಯ ಪೂರ್ವದಿಶಾ ಭಾಗೇ ಬ್ರಾಹ್ಮಣಂ ವೇದಪಾರಗಂ ॥ ೫ ॥

ಸುರೇಂದ್ರ ಬುದ್ಧ್ಯಾ ಸಂಪೂಜ್ಯ ಪಂಚನಿಷ್ಕಂ ಪ್ರದಾಪಯೇತ್ ।
ಸ ಚಾಶ್ವಃ ಶಿವಭಕ್ತಾಯ ದಾತವ್ಯೋ ವಿಧಿನೈವ ತು ॥ ೬ ॥

ಸುವರ್ಣಾಶ್ವಂ ಪ್ರದತ್ವಾತು ಆಚಾರ್ಯಮಪಿ ಪೂಜಯೇತ್ ।
ಯಥಾವಿಭವ ವಿಸ್ತಾರಂ ಪಂಚನಿಷ್ಕಮಥಾಪಿ ವಾ ॥ ೭ ॥

ದೀನಾಂಧ ಕೃಪಣಾ ನಾಥ ಬಾಲವೃದ್ಧ ಕೃಶಾತುರಾನ್ ।
ತೋಷಯೇದನ್ನದಾನೇನ ಬ್ರಾಹ್ಮಣಾಂಶ್ಚ ವಿಶೇಷತಃ ॥ ೮ ॥

---

ಇಂದ್ರನ ಕುದುರೆಯಾದ ಉಚ್ಚೈಃಶ್ರವಸ್ಸೆಂಬ ಭಾವನೆಯಿಂದ ಪೂಜಿಸಬೇಕು.

೫–೬. ಅನಂತರ ಆ ಕುದುರೆಯ ಪೂರ್ವ ದಿಗ್ಭಾಗದಲ್ಲಿ ವೇದಾಧ್ಯಯನ ಸಂಪನ್ನನಾದ ಬ್ರಾಹ್ಮಣನನ್ನು ಇಂದ್ರನ ಭಾವನೆಯಿಂದ ಪೂಜೆಮಾಡಿ, ಐದು ನಾಣ್ಯಗಳನ್ನು ದಕ್ಷಿಣೆಯರೂಪದಿಂದ ದಾನಮಾಡಬೇಕು. ಆ ಅಶ್ವವನ್ನು ವಿಧಿವತ್ತಾಗಿ ಶಿವಭಕ್ತನಿಗೇ ದಾನವನ್ನು ಮಾಡಬೇಕು.

೭–೮. ಸುವರ್ಣಾಶ್ವವನ್ನು ದಾನಮಾಡಿ, ಆಚಾರ್ಯನನ್ನು ಪೂಜೆ ಮಾಡಬೇಕು. ಪೂಜಿಸಿ, ಯಥಾ ಶಕ್ತಿಯಿಂದ ಐದು ನಾಣ್ಯಗಳನ್ನಾದರೂ ದಾನಮಾಡಬೇಕು. ತರುವಾಯ ಬಡವರನ್ನೂ, ಕುರುಡರನ್ನೂ, ಅನಾಥರನ್ನೂ, ಬಾಲಕರನ್ನೂ, ವೃದ್ಧರನ್ನೂ, ಆಹಾರವಿಲ್ಲದೇ ಕೃಶರಾದವರನ್ನೂ, ರೋಗಿಗಳನ್ನೂ, ಮುಖ್ಯವಾಗಿ ಬ್ರಾಹ್ಮಣರನ್ನೂ ಅನ್ನದಾನದಿಂದ ಸಂತೋಷಗೊಳಿಸಬೇಕು.

**ಏತದ್ಯಃ ಕುರುತೇ ಭಕ್ತ್ಯಾ ದಾನಮಶ್ವಸ್ಯ ಮಾನವಃ ।**
**ಐಂದ್ರಾನ್ ಭೋಗಾಂಶ್ಚಿರಂ ಭುಕ್ತ್ವಾ ರುಚಿರೈಶ್ವರ್ಯವಾನ್ಭವೇತ್ ॥**

**ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ಹಿರಣ್ಯಾಶ್ವ ಪ್ರದಾನಂ ನಾಮ ನವತ್ರಿಂಶತಿತಮೋಽಧ್ಯಾಯಃ**

---

೯. ಈ ಪೂರ್ವೋಕ್ತವಾದ ವಿಧಿಯಿಂದ ಹಿರಣ್ಯಾಶ್ವಪ್ರದಾನವನ್ನು ಯಾವನು ಮಾಡುವನೋ ಅವನು ಅನೇಕಕಾಲ ಇಂದ್ರಭೋಗಗಳನ್ನು ಅನುಭವಿಸಿ ಅತಿಧನಿಕನಾಗಿರುವನು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಹಿರಣ್ಯಾಶ್ವಪ್ರದಾನ ಕಥನವೆಂಬ ಮುವ್ವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
## ಚತ್ವಾರಿಂಶೋಽಧ್ಯಾಯಃ

**॥ ಸನತ್ಕುಮಾರ ಉವಾಚ ॥**

**ಕನ್ಯಾದಾನಂ ಪ್ರವಕ್ಷ್ಯಾಮಿ ಸರ್ವದಾನೋತ್ತಮೋತ್ತಮಂ ।**
**ಕನ್ಯಾಂ ಲಕ್ಷಣ ಸಂಪನ್ನಾಂ ಸರ್ವದೋಷವಿವರ್ಜಿತಾಂ ॥ ೧ ॥**

**ಮಾತಾ ಪಿತ್ರೋಸ್ತು ಸಂವಾದಂ ಕೃತ್ವಾ ದತ್ವಾ ಧನಂ ಮಹತ್ ।**
**ಆತ್ಮೀಕೃತ್ಯಾಥ ಸಂಸ್ನಾಪ್ಯ ವಸ್ತ್ರಂ ದತ್ವಾ ಶುಭಂ ನವಂ ॥ ೨ ॥**

**ಭೂಷಣೈ ರ್ಭೂಷಯಿತ್ವಾಽಥ ಗಂಧಮಾಲ್ಯೈ ರಥಾ ರ್ಚಯೇತ್ ।**
**ನಿಮಿತ್ತಾನಿ ಸಮೀಕ್ಷ್ಯಾಥ ಗೋತ್ರ ನಕ್ಷತ್ರಕಾದಿಕಾನ್ ॥ ೩ ॥**

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ನಲವತ್ತನೆಯ ಅಧ್ಯಾಯವು.

೧–೨. ಸನತ್ಕುಮಾರನು ಹೇಳಿದನು :—ಇನ್ನು ಮುಂದೆ ಸಕಲ ದಾನಗಳಲ್ಲಿಯೂ ಉತ್ತಮವಾದ ಕನ್ಯಾದಾನದ ವಿಧಿಯನ್ನು ಹೇಳುವೆನು ಕೇಳುವವನಾಗು. ಅಂಗವೈಕಲ್ಯ ಮೊದಲಾದ ದೋಷಗಳಿಂದ ಹೀನಳಾದ, ಸಮೀಚೀನವಾದ ಲಕ್ಷಣಗಳಿಂದ ಕೂಡಿರುವ, ಕನ್ಯೆಯನ್ನು ಅವಳ ಮಾತಾಪಿತೃಗಳಿಗೆ ಹೇರಳವಾದ ಧನವನ್ನು ಕೊಟ್ಟು ಅವರ ಸಮ್ಮತಿಯ ಮೇರೆಗೆ ಕನ್ಯೆಯನ್ನು ತೆಗೆದುಕೊಂಡು ಅವಳಿಗೆ ಸ್ನಾನ ಮಾಡಿಸಿ, ಹೊಸವಸ್ತ್ರವನ್ನು ಉಡಲು ಕೊಟ್ಟು, ಒಡವೆಗಳಿಂದ ಅಲಂಕರಿಸಿ, ಬಳಿಕ ಗಂಧಮಾಲ್ಯಾದಿ ಪೂಜಾದ್ರವ್ಯಗಳಿಂದ ಪೂಜಿಸಬೇಕು.

೩–೪. ತರುವಾಯ ಶುಭಶಕುನಗಳನ್ನೂ, ಕುಲಗೋತ್ರ ನಕ್ಷತ್ರಾದಿಗಳನ್ನೂ, ಚೆನ್ನಾಗಿ ಪರಿಶೀಲಿಸಿ, ವಧೂವರರ ಮನಸ್ಸನ್ನೂ ತಿಳಿದುಕೊಂಡು, ಅವರಿಬ್ಬರನ್ನೂ ಪೂಜಿಸಬೇಕು. ಕನ್ಯೆಯನ್ನು ಗುರುಮುಖಾಧೀನವಾಗಿ ವೇದಾಧ್ಯಯನವನ್ನು ಮಾಡಿದವನೂ, ಶ್ರೋತ್ರಿ

ಉಭಯೋಶ್ಚಿತ್ತಮಾಲೋಕ್ಯ ಉಭೌ ಸಂಪೂಜ್ಯ ಯತ್ನತಃ
ದಾತವ್ಯಾ ಶ್ರೋತ್ರಿಯಾಯೈವ ಬ್ರಾಹ್ಮಣಾಯ ತಪಸ್ವಿನೇ ॥ ೪ ॥
ಸಾಕ್ಷಾದಧೀತ ವೇದಾಯ ವಿಧಿನಾ ಬ್ರಹ್ಮಚಾರಿಣೇ ।
ದಾಸದಾಸೀಧನಾಢ್ಯಂ ಚ ಭೂಷಣಾನಿ ವಿಶೇಷತಃ ॥ ೫ ॥
ಕ್ಷೇತ್ರಾಣಿ ಚ ಧನಂ ಧಾನ್ಯಂ ವಾಸಾಂಸಿ ಚ ಪ್ರದಾಪಯೇತ್ ।
ಯಾವಂತಿ ದೇಹೇ ರೋಮಾಣಿ ಕನ್ಯಾಯಾಃ ಸಂತತೌ ಪುನಃ ॥ ೬ ॥
ತಾವದ್ವರ್ಷ ಸಹಸ್ರಾಣಿ ರುದ್ರಲೋಕೇ ಮಹೀಯತೇ ॥ ೭ ॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ಕನ್ಯಾದಾನ ವಿಧಿ ನಿರೂಪಣಂ ನಾಮ ಚತ್ವಾರಿಂಶೋಽಧ್ಯಾಯಃ

---

ಯನೂ, ತಪೋನಿಷ್ಠನೂ, ಬ್ರಹ್ಮಚಾರಿಯೂ, ಆದ ಬ್ರಾಹ್ಮಣನಿಗೇ ದಾನಮಾಡಬೇಕು.

೫. ಕನ್ಯಾದಾನವನ್ನು ಮಾಡುವಾಗ ದಾಸ ದಾಸಿಯರನ್ನೂ, ಒಡವೆಗಳನ್ನೂ, ಧನವನ್ನೂ ಕ್ಷೇತ್ರಗಳನ್ನೂ, ವಸ್ತ್ರಗಳನ್ನೂ ದಾನ ಮಾಡಬೇಕು.

೬–೭. ಈ ರೀತಿಯಲ್ಲಿ ಕನ್ಯಾದಾನವನ್ನು ಮಾಡಿದವನು ಕನ್ಯೆಯಲ್ಲಿ ಉಂಟಾಗುವ ಮಕ್ಕಳ ದೇಹದಲ್ಲಿ ಎಷ್ಟು ರೋಮಗಳಿವೆಯೋ ಅಷ್ಟು ಸಾವಿರ ಸಂಖ್ಯಾಪರಿಮಿತವಾದ ವರ್ಷಗಳ ಪರ್ಯಂತ ರುದ್ರಲೋಕದಲ್ಲಿ ಸುಖವನ್ನನುಭವಿಸುತ್ತಾನೆ.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಕನ್ಯಾದಾನ ವಿಧಿನಿರೂಪಣವೆಂಬ ನಲವತ್ತನೆಯ ಅಧ್ಯಾಯವು ಮುಗಿದುದು.



ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
ಏಕ ಚತ್ವಾರಿಂ ಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಹಿರಣ್ಯ ವೃಷದಾನಂ ಚ ಕಥಯಾಮಿ ಸಮಾಸತಃ ।
ವೃಷರೂಪಂ ಹಿರಣ್ಯೇನ ಸಹಸ್ರೇಣಾಥ ಕಾರಯೇತ್ ॥ ೧ ॥
ತದರ್ಧಾರ್ಧೇನ ವಾ ಧೀಮಾನ್ ತದರ್ಧಾರ್ಧೇನ ವಾ ಪುನಃ ।
ಅಷ್ಟೋತ್ತರ ಶತೇನಾಪಿ ವೃಷಭಂ ಧರ್ಮ ರೂಪಿಣಂ ॥ ೨ ॥
ಲಲಾಟೇ ಕಾರಯೇ ತ್ಪುಂಡ್ರ ಮರ್ಧಚಂದ್ರ ಕಲಾಕೃತಿಂ ।
ಸ್ಫಟಿಕೇನ ತು ಕರ್ತವ್ಯಂ ಖುರಂ ತು ರಜತೇನ ವೈ ॥ ೩ ॥

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ನಲವತ್ತೊಂದನೆಯ ಅಧ್ಯಾಯವು

೧-೨. ಸನತ್ಕುಮಾರನು ಹೇಳಿದನು :—ಇನ್ನು ಮುಂದೆ ಹಿರಣ್ಯ ವೃಷಭದಾನದ ವಿಧಿಯನ್ನು ಸಂಕ್ಷೇಪವಾಗಿ ಹೇಳುವೆನು, ಕೇಳುವವನಾಗು. ವೃಷಭವನ್ನು ಸಹಸ್ರ ತೊಲ ಪರಿಮಿತವಾದ ಸುವರ್ಣದಿಂದಲಾಗಲೀ, ಅದರ ಅರ್ಧಾಂಶದಿಂದಲಾಗಲೀ, ಶಕ್ತ್ಯಾನುಸಾರವಾಗಿ ಉತ್ತರೋತ್ತರ ಅರ್ಧಾಂಶಭಾಗಕಡಿಮೆಯ ಪರಿಮಾಣದಿಂದಲಾಗಲೀ,ಮಾಡಿಸಿ ಅಥವಾ ನೂರೆಂಟು ತೊಲ ಪರಿಮಾಣದಿಂದಲಾಗಲೀ ಮಾಡಿಸಬೇಕು.

೩-೪. ವೃಷಭದ ಹಣೆಯಲ್ಲಿ ಅರ್ಧಚಂದ್ರ ಕಲೆಯ ಆಕಾರದಂತಿರುವ ಪುಂಡ್ರವನ್ನು ಸ್ಫಟಿಕದಿಂದ ಮಾಡಿಸಬೇಕು. ಗೊರಸನ್ನು ಬೆಳ್ಳಿಯಿಂದ ಮಾಡಿಸಬೇಕು. ಇದೇ ರೀತಿಯಲ್ಲಿ ಕುತ್ತಿಗೆಯನ್ನು ಪದ್ಮರಾಗದಿಂದಲೂ, ಭುಜದಗಿಣಿಯನ್ನು ಗೋಮೇದಿಕದಿಂದಲೂ, ಮಾಡಿಸಬೇಕು. ಇದಲ್ಲದೇ ವೃಷಭದಕೊರಳಿನಲ್ಲಿ ಹಾಕುವ ಘಂಟೆಗಳ ಮಾಲಿಕೆಯನ್ನು ರತ್ನಖಚಿತವಾದುದನ್ನಾಗಿ ಮಾಡಿಸಬೇಕು. ಮತ್ತು ಚಿಕ್ಕ

ಗ್ರೀವಾಂ ತು ಪದ್ಮರಾಗೇಣ ಕಕುದ್ಗೋಮೇದಿ ಕೇನ ಚ ।
ಗ್ರೀವಾಯಾಂ ಘಾಂಟವಲಯಂ ರತ್ನಚಿತ್ರಂ ತು ಕಾರಯೇತ್ ॥

ವೃಷಾಂಕಂ ಕಾರಯೇತ್ತತ್ರ ಕಿಂಕಿಣೀ ವಲಯಾವೃತಂ ।
ಪೂರ್ವೋಕ್ತ ದೇಶಕಾಲೇ ತು ವೇದಿಕೋಪರಿ ಮಂಡಲೇ ॥ ೫ ॥

ವೃಷೇಂದ್ರಂ ಸ್ಥಾಪಯೇತ್ತತ್ರ ಪಶ್ಚಿಮಾಮುಖಮಗ್ರತಃ ।
ಈಶ್ವರಂ ಪೂಜಯೇದ್ಭಕ್ತ್ಯಾ ವೃಷಾರೂಢಂ ವೃಷಧ್ವಜಂ ॥ ೬ ॥

ವೃಷೇಂದ್ರಂ ಪೂಜ್ಯ ಗಾಯತ್ರ್ಯಾ ನಮಸ್ಕೃತ್ಯ ಸಮಾಹಿತಃ ।
ತೀಕ್ಷ್ಣ ಶೃಂಗಾಯ ವಿದ್ಮಹೇ ಧರ್ಮಪಾದಾಯ ಧೀಮಹಿ ।
ತನ್ನೋ ವೃಷಃ ಪ್ರಚೋದಯಾತ್ ॥ ೭ ॥

ಮಂತ್ರೇಣಾನೇನ ಸಂಪೂಜ್ಯ ವೃಷಂ ಧರ್ಮವಿವೃದ್ಧಯೇ ।
ಹೋಮಯೇಚ್ಚ ಘೃತಾನ್ನಾದ್ಯೈ ರ್ಯಥಾವಿಭವ ವಿಸ್ತರಂ ॥ ೮ ॥

---

ಘಂಟೆಗಳಿಂದ ಅಲಂಕೃತನಾದ ಶಿವನನ್ನು (ಶಿವನ ವಿಗ್ರಹವನ್ನು) ಆ ಘಂಟೆಯಲ್ಲಿ ರಚಿಸಬೇಕು.

೫. ಹಿಂದೆ ಹೇಳಿದಂತೆ ವೇದಿಕೆಯ ಮೇಲುಭಾಗದಲ್ಲಿ ವೃಷಭವನ್ನು ಪಶ್ಚಿಮಾಭಿ ಮುಖವಾಗಿ ಸ್ಥಾಪಿಸಬೇಕು.

೬. ತರುವಾಯ ವೃಷಭಾರೂಢನಾದ ಈಶ್ವರನನ್ನು ಭಕ್ತಿಪುರಸ್ಸರವಾಗಿ ಗಾಯತ್ರೀಮಂತ್ರದಿಂದ ಪೂಜೆಮಾಡಬೇಕು.

೭–೮. ಶಿವನ ಪೂಜೆಯಾದ ಬಳಿಕ ವೃಷಭವನ್ನು ಗಾಯತ್ರೀ ಮಂತ್ರದಿಂದ ಪೂಜಿಸಿ, ನಮಸ್ಕರಿಸಿ, ಚಿತ್ತಸಮಾಧಾನವುಳ್ಳವನಾಗಿ, "ತೀಕ್ಷ್ಣಶೃಂಗಾಯ ಧೀಮಹೇ" ಎಂಬುದಾಗಿ ಹೇಳಿರುವ ಮಂತ್ರದಿಂದ ಪುನಃ ಪುಣ್ಯವೃದ್ಧಿಗೋಸ್ಕರ ಪೂಜಿಸಿ, ಯಥಾ ಶಕ್ತಿಯಾಗಿ ಘೃತ ಅನ್ನ, ಮುಂತಾದುವುಗಳಿಂದ ವೃಷಭವನ್ನು ತೃಪ್ತಿಪಡಿಸಬೇಕು.

ವೃಷಭಃ ಪೂಜ್ಯ ದಾತವ್ಯೋ ಬ್ರಾಹ್ಮಣೇಭ್ಯಃ ಶಿವಾಯ ವಾ ।
ದಕ್ಷಿಣಾ ಚೈವ ದಾತವ್ಯಾ ಯಥಾ ವಿತ್ತಾನು ಸಾರತಃ ॥ ೯ ॥
ಏತದ್ಯಃ ಕುರುತೇ ಭಕ್ತ್ಯಾ ವೃಷದಾನ ಮನುತ್ತಮಂ ।
ಶಿವಸ್ಯಾನು ಚರೋ ಭೂತ್ವಾ ತೇ ನೈವ ಸಹ ಮೋದತೇ ॥೧೦॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ಸುವರ್ಣ ವೃಷದಾನ ವಿಧಾನಂ ನಾಮ ಏಕಚತ್ವಾರಿಂಶೋಽಧ್ಯಾಯಃ

---

೯–೧೦. ವೃಷಭವನ್ನು ಪೂಜಿಸಿ, ಶಿವನಿಗಾಗಲೀ, ಬ್ರಾಹ್ಮಣರಿಗಾಗಲೀ ದಾನಮಾಡಬೇಕು. ಮತ್ತು ಶಕ್ತಿಗನುಗುಣವಾಗಿ ದಕ್ಷಿಣೆಯನ್ನೂ ದಾನಮಾಡಬೇಕು. ಈ ಶ್ರೇಷ್ಠವಾದ ವೃಷದಾನವನ್ನು ಭಕ್ತಿಪುರಸ್ಸರವಾಗಿ ಯಾವನು ಮಾಡುವನೋ ಅವನು ಶಿವಸೇವಕನಾಗಿ ಅವನೊಂದಿಗೆ ಅಮಿತವಾದ ಸುಖವನ್ನು ಅನುಭವಿಸುತ್ತಾನೆ.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರ ಭಾಗದಲ್ಲಿ ಸುವರ್ಣ ವೃಷದಾನ ವಿಧಿಯೆಂಬ ನಲವತ್ತೊಂದನೆಯ ಅಧ್ಯಾಯವು ಮುಗಿದುದು.

अथ श्री लिंगमहापुराणे उत्तरभागे
द्विचत्वारिंशोऽध्यायः

॥ सनत्कुमार उवाच ॥

**ಗಜದಾನಂ ಪ್ರವಕ್ಷ್ಯಾಮಿ ಯಥಾ ವದನು ಪೂರ್ವತಃ ।**
**ದ್ವಿಜಾಯ ವಾ ಶಿವಾಯಾಥ ದಾತವ್ಯಃ ಪೂಜ್ಯ ಪೂರ್ವವತ್॥ ೧ ॥**
**ಗಜಂ ಸುಲಕ್ಷಣೋಪೇತಂ ಹೈಮಂ ವಾ ರಾಜತಂ ತು ವಾ ।**
**ಸಹಸ್ರ ನಿಷ್ಕಮಾತ್ರೇಣ ತದರ್ಧೇನಾಪಿ ಕಾರಯೇತ್ ॥ ೨ ॥**
**ತ ದರ್ಧಾರ್ಧೇನ ವಾ ಕುರ್ಯಾ ತ್ಸರ್ವ ಲಕ್ಷಣ ಭೂಷಿತಂ ।**
**ಪೂರ್ವೋಕ್ತಂ ದೇಶಕಾಲೇ ಚ ದೇವಾಯ ವಿನಿವೇದಯೇತ್ ॥ ೩ ॥**

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ನಲವತ್ತೆರಡನೆಯ ಅಧ್ಯಾಯವು.

೧. ಸನತ್ಕುಮಾರನು ಹೇಳಿದನು:— ಇನ್ನುಮುಂದೆ ಗಜದಾನದ ವಿಧಿಯನ್ನು ಹೇಳುವೆನು ಕೇಳು. ಎಲೈ ಪೂಜ್ಯನೇ, ಹಿಂದೆ ಹೇಳಿದಂತೆ ಗಜವನ್ನು ಶಿವನಿಗಾಗಲೀ, ಬ್ರಾಹ್ಮಣನಿಗಾಗಲೀ ದಾನಮಾಡಬೇಕು.

೨. ಒಂದು ಸಹಸ್ರನಾಣ್ಯಪರಿಮಿತವಾದ ಬೆಳ್ಳಿಯಿಂದಲಾಗಲೀ ಸುವರ್ಣದಿಂದಲಾಗಲೀ ಸಮೀಚೀನವಾದ ಲಕ್ಷಣಗಳಿಂದ ಕೂಡಿರುವ ಗಜವನ್ನು ಮಾಡಿಸಬೇಕು. ಇಲ್ಲದಿದ್ದರೆ ಶಕ್ತಿಗನುಗುಣವಾಗಿ ಸಹಸ್ರ ನಾಣ್ಯಗಳ ಅರ್ಧಾಂಶದಿಂದಲಾಗಲೀ, ಅದರ ಅರ್ಧಾಂಶದಿಂದಲಾಗಲೀ, ಅದಕ್ಕೂ ಶಕ್ತಿಯಿಲ್ಲದಿದ್ದರೆ ಅದರ ಅರ್ಧಭಾಗದಿಂದಲಾಗಲೀ, ಗಜವನ್ನು ಮಾಡಿಸಬೇಕು.

೩–೪. ಈ ಹಿಂದೆ ಹೇಳಿರುವ ದೇಶ ಮತ್ತು ಕಾಲಗಳಲ್ಲಿಯಾಗಲೀ ಅಥವಾ ಅಷ್ಟಮಿಯಲ್ಲಾಗಲೀ, ಆ ಗಜವನ್ನು ಶಿವನಿಗೋಸ್ಕರ ಸಮರ್ಪಿಸಬೇಕು. ಅಥವಾ ಪೂರ್ವೋಕ್ತ ರೀತಿಯಂತೆ ಮೊದಲು ಶಿವಪೂಜೆ

ಅಷ್ಟಮ್ಯಾಂ ವಾ ಪ್ರದಾತವ್ಯಂ ಶಿವಾಯ ಪರಮೇಷ್ಠಿನೇ ।
ಬ್ರಾಹ್ಮಣಾಯ ದರಿದ್ರಾಯ ಶ್ರೋತ್ರಿಯಾಯಾಹಿತಾಗ್ನಯೇ ॥ ೪ ॥
ಶಿವಮುದ್ದಿಶ್ಯ ದಾತವ್ಯಂ ಶಿವಂ ಸಂಪೂಜ್ಯ ಪೂರ್ವವತ್ ।
ಏತದ್ಯಃ ಕುರುತೇ ದಾನಂ ಶಿವಭಕ್ತ್ಯಾ ಸಮಾಹಿತಃ ।
ಸ್ಥಿತ್ವಾ ಸ್ವರ್ಗೇ ಚಿರಂ ಕಾಲಂ ರಾಜಾ ಗಜಪತಿ ರ್ಭವೇತ್ ॥ ೫ ॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ಗಜದಾನ ವಿಧಿನಿರೂಪಣಂ
ನಾಮ ದ್ವಿಚತ್ವಾರಿಂಶೋऽಧ್ಯಾಯಃ

---

ಯನ್ನು ಮಾಡಿ, ವೇದಾಧ್ಯಯನ ಸಂಪನ್ನನೂ, ಅನುಷ್ಠಾನ ಶೀಲನೂ ಆದ ದರಿದ್ರ ಬ್ರಾಹ್ಮಣನಲ್ಲಿ ಶಿವನ ಭಾವನೆಯನ್ನಿಟ್ಟು ಅವನಿಗೆ ಸುವರ್ಣಮಯವಾದ, ಅಥವಾ ರಜತಮಯವಾದ ಈ ಗಜವನ್ನು ದಾನಮಾಡಬೇಕು.

೫. ಪೂರ್ವೋಕ್ತವಾದ ಗಜದಾನವನ್ನು ಯಾವನು ಶಿವಭಕ್ತಿಯುಳ್ಳವನಾಗಿ ಮಾಡುತ್ತಾನೋ ಅವನು ಸ್ವರ್ಗದಲ್ಲಿ ಅನೇಕ ಕಾಲ ವಾಸವಾಗಿದ್ದು ಸಾರ್ವಭೌಮನಾಗುವನು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರ ಭಾಗದಲ್ಲಿ ಗಜದಾನ ನಿರೂಪಣೆ
ಯೆಂಬ ನಲವತ್ತೆರಡನೆಯ ಅಧ್ಯಾಯವು ಮುಗಿದುದು.

ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
ತ್ರಿಚತ್ವಾರಿಂಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಲೋಕಪಾಲಾಷ್ಟಕಂ ದಿವ್ಯಂ ಸಾಕ್ಷಾತ್ಸರವು ದುರ್ಲಭಂ ।
ಸರ್ವ ಸಂಪತ್ಕರಂ ಗುಹ್ಯಂ ಪರಚಕ್ರ ವಿನಾಶನಂ ॥ ೧ ॥
ಸ್ವದೇಶರಕ್ಷಣಂ ದಿವ್ಯಂ ಗಜವಾಜಿ ವಿವರ್ಧನಂ ।
ಪುತ್ರ ವೃದ್ಧಿಕರಂ ಪುಣ್ಯಂ ಗೋಬ್ರಾಹ್ಮಣ ಹಿತಾವಹಂ ॥ ೨ ॥
ಪೂರ್ವೋಕ್ತ ದೇಶಕಾಲೇ ತು ವೇದಿಕೋಪರಿ ಮಂಡಲೇ ।
ಮಧ್ಯೇ ಶಿವಂ ಸಮಭ್ಯರ್ಚ್ಯ ಯಥಾನ್ಯಾಯಂ ಯಥಾಕ್ರಮಂ ॥ ೩ ॥
ದಿಗ್ವಿದಿಕ್ಷು ಪ್ರಕರ್ತವ್ಯಂ ಸ್ಥಂಡಿಲಂ ವಾಲುಕಾಮಯಂ ।
ಅಷ್ಟೌ ವಿಪ್ರಾನ್ ಸಮಭ್ಯರ್ಚ್ಯ ವೇದವೇದಾಂಗಪಾರಗಾನ್ ॥ ೪ ॥
ಜಿತೇಂದ್ರಿಯಾನ್ ಕುಲೋದ್ಭೂತಾನ್ ಸರ್ವಲಕ್ಷಣಸಂಯುತಾನ್।
ಶಿವಾಭಿಮುಖಮಾಸೀನಾ ನಾಹತೇಷ್ವಂಬರೇಷು ಚ ॥ ೫ ॥

---

ಶ್ರೀ ಲಿಂಗಮಹಾಪುರಾಣದ ಉತ್ತರ ಭಾಗದಲ್ಲಿ ನಲವತ್ತುಮೂರನೆಯ
ಅಧ್ಯಾಯವು.

೧–೨. ಸನತ್ಕುಮಾರನು ಹೇಳಿದನು:—ಅತ್ಯಂತ ದುರ್ಲಭವೂ, ಮತ್ತು ದಿವ್ಯವೂ ಆದ ಇಂದ್ರಾದಿ ಲೋಕಪಾಲಕರದಾನವು ಸಕಲ ಸಂಪತ್ತುಗಳನ್ನುಂಟುಮಾಡುವುದೂ, ಗೋಪ್ಯವಾದುದೂ, ಶತ್ರುರಾಜ್ಯವನ್ನು ನಾಶಗೊಳಿಸುವುದೂ, ಸ್ವದೇಶವನ್ನು ರಕ್ಷಿಸುವ ಸಾಮರ್ಥ್ಯವುಳ್ಳದ್ದೂ, ಗಜಸಂಪತ್ತನ್ನೂ, ಅಶ್ವಸಂಪತ್ತನ್ನೂ ಅಭಿವೃದ್ಧಿಗೊಳಿಸುವುದೂ, ಗೋ ಬ್ರಾಹ್ಮಣರಿಗೆ ಹಿತವನ್ನುಂಟುಮಾಡುವುದೂ, ಆಗಿರುತ್ತದೆ.

೩–೬. ಹಿಂದೆ ಹೇಳಿದ ದೇಶಗಳಲ್ಲಿ ವೇದಿಕೆಯ ಮೇಲೆ ಮಂಡಲವನ್ನು ಮಾಡಿ, ಆ ಮಂಟಪದ ಮಧ್ಯಭಾಗದಲ್ಲಿ ವಿಧಿ ಪೂರ್ವಕವಾಗಿ ಶಿವನನ್ನು ಸ್ಥಾಪಿಸಿ, ಬಳಿಕ ಪೂಜಿಸಿ, ಪೂರ್ವಾದಿ ನಾಲ್ಕು ದಿಕ್ಕುಗಳಲ್ಲೂ,

ವಸ್ತ್ರೈ ರಾಭರಣೈ ರ್ದಿವ್ಯೈ ರ್ಲೋಕಪಾಲಕ ಮಂತ್ರಕೈಃ ।
ಗಂಧ ಪುಷ್ಪೈಃ ಸುಧೂಪೈಶ್ಚ ಬ್ರಾಹ್ಮಣಾನರ್ಚಯೇತ್ಕ್ರಮಾತ್ ॥
ಪೂರ್ವತೋ ಹೋಮಯೇ ದಗ್ನೌ ಲೋಕಪಾಲಕ ಮಂತ್ರಕೈಃ ।
ಸಮಿದ್ಘೃತಾಭ್ಯಾಂ ಹೋತವ್ಯ ಮಗ್ನಿಕಾರ್ಯಂ ಕ್ರಮೇಣ ವಾ ॥ ೭ ॥
ಏವಂ ಹುತ್ವಾ ವಿಧಾನೇನ ಆಚಾರ್ಯಃ ಶಿವವತ್ಸಲಃ ।
ಯಜಮಾನಂ ಸಮಾಹೂಯ ಸರ್ವಾಭರಣ ಭೂಷಿತಾನ್ ॥ ೮ ॥
ತೇನ ತಾನ್ ಪೂಜಯಿತ್ವಾಽಥ ದ್ವಿಜೇಭ್ಯೋ ದಾಪಯೇದ್ಧನಂ ।
ಪೃಥಕ್ ಪೃಥಕ್ ತನ್ಮಂತ್ರೈಶ್ಚ ದಶನಿಷ್ಕಂ ಚ ಭೂಷಣಂ ॥ ೯ ॥

---

ಆಗ್ನೇಯಾದಿ ನಾಲ್ಕು ಅವಾಂತರ ದಿಕ್ಕುಗಳಲ್ಲೂ, ಮರಳಿನ ಸ್ಥಂಡಿಲವನ್ನು ಮಾಡಿ, ವೇದವೇದಾಂಗಳನ್ನು ಅಧ್ಯಯನ ಮಾಡಿದವರೂ, ಜೀತೇಂದ್ರಿಯರೂ, ಸತ್ಕುಲ ಪ್ರಸೂತರೂ, ಸಕಲ ಲಕ್ಷಣಯುಕ್ತರೂ, ಆದ ಎಂಟು ಜನ ಬ್ರಾಹ್ಮಣರನ್ನು ಸ್ಥಂಡಿಲದಲ್ಲಿ ಸ್ಥಾಪಿಸಿರುವ ಶಿವನಿಗೆ ಅಭಿಮುಖವಾಗಿ ನೂತನ ವಸ್ತ್ರಾಸನದಲ್ಲಿ ಕುಳ್ಳಿರಿಸಿ, ಲೋಕಪಾಲಕ ದೇವತಾಕವಾದ ಮಂತ್ರಗಳಿಂದಲೂ, ವಸ್ತ್ರಾಭರಣಗಳಿಂದಲೂ, ಗಂಧ ಪುಷ್ಪಗಳಿಂದಲೂ, ಧೂಪದೀಪಾದಿಗಳಿಂದಲೂ, ಆ ಬ್ರಾಹ್ಮಣರನ್ನು ಕ್ರಮವಾಗಿ ಪೂಜಿಸಬೇಕು.

೭. ಅನಂತರದಲ್ಲಿ ಅಗ್ನಿಗೆ ಪೂರ್ವಾಭಿಮುಖವಾಗಿ ನಿಂತುಕೊಂಡು, ಸಮಿತ್ತು ಮತ್ತು ಆಜ್ಯಗಳಿಂದ ಹೋಮ ಮಾಡಿ, ಅಗ್ನಿಕಾರ್ಯವನ್ನು ನೆರವೇರಿಸಬೇಕು.

೮–೯. ಪೂರ್ವೋಕ್ತ ವಿಧಾನದಿಂದ ಹೋಮಮಾಡಿದ ಬಳಿಕ ಶಿವಭಕ್ತನಾದ ಪುರೋಹಿತನು ಯಜಮಾನನನ್ನು ಕರೆದು ಅವನ ಮೂಲಕ ಆ ಎಂಟು ಜನ ಬ್ರಾಹ್ಮಣರನ್ನು ಪೂಜೆಮಾಡಿಸಿ, ಧನವನ್ನು ದಕ್ಷಿಣೆಯ ರೂಪದಿಂದ ದಾನಮಾಡಿಸಬೇಕು. ಬ್ರಾಹ್ಮಣರಿಗೆ ಅಲಂಕಾರಾರ್ಥವಾಗಿ ಪ್ರತ್ಯೇಕ ಪ್ರತ್ಯೇಕವಾಗಿ ಅಷ್ಟದಿಕ್ಪಾಲಕರ ಮಂತ್ರದಿಂದ ಹತ್ತು ಸುವರ್ಣನಾಣ್ಯಗಳಿಂದ ಸುವರ್ಣಾಸನವನ್ನು ಕಲ್ಪಿಸಿಕೊಡಬೇಕು.

ದಶನಿಷ್ಕೇಣ ಕರ್ತವ್ಯ ಮಾಸನಂ ಕೇವಲಂ ಪೃಥಕ್ ।
ಸ್ನಪನಂ ತತ್ರ ಕರ್ತವ್ಯಂ ಶಿವಸ್ಯ ವಿಧಿಪೂರ್ವಕಂ ॥೧೦॥
ದಕ್ಷಿಣಾ ಚ ಪ್ರದಾತವ್ಯಾ ಯಥಾ ವಿಭವ ವಿಸ್ತರಂ ।
ಏವಂ ಯಃ ಕುರುತೇ ದಾನಂ ಲೋಕೇಶಾನಾಂ ತು ಭಕ್ತಿತಃ ॥೧೧॥
ಲೋಕೇಶಾನಾಂ ಚಿರಂ ಸ್ಥಿತ್ವಾ ಸಾರ್ವಭೌಮೋ ಭವೇದ್ಬುಧಃ ॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
ತ್ರಿಚತ್ವಾರಿಂಶೋಽಧ್ಯಾಯಃ

---

೧೦. ಬ್ರಾಹ್ಮಣ ಪೂಜೆಯ ವೇಳೆಯಲ್ಲಿ ಶಿವನ ಪೂಜೆಯನ್ನೂ ವಿಧಿವತ್ತಾಗಿ ನೆರವೇರಿಸಿ, ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಡಬೇಕು.

೧೧–೧೨. ಈ ರೀತಿಯಲ್ಲಿ ಭಕ್ತಿಪುರಸ್ಸರವಾಗಿ ಯಾವನು ಲೋಕಪಾಲಾಷ್ಟಕ ದಾನವನ್ನು ಸರಿಯಾಗಿ ಮಾಡುತ್ತಾನೋ ಅವನು ಅಷ್ಟದಿಕ್ಪಾಲಕರ ಸ್ಥಾನಗಳಲ್ಲಿ ಅನೇಕ ಕಾಲವಿದ್ದು ಸಾರ್ವ ಭೌಮ ಪದವಿಯನ್ನು ಅನುಭವಿಸುತ್ತಾನೆ.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರ ಭಾಗದಲ್ಲಿ ನಲವತ್ತು ಮೂರನೆಯ
ಅಧ್ಯಾಯವು ಮುಗಿದುದು.

ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
ಚತುಶ್ಚತ್ವಾರಿಂಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಅಥಾನ್ಯತ್ಸಂ ಪ್ರವಕ್ಷ್ಯಾಮಿ ಸರ್ವ ದಾನೋತ್ತಮೋತ್ತಮಂ ।
ಪೂರ್ವೋಕ್ತಂ ದೇಶಕಾಲೇ ಚ ಮಂಟಪೇ ಚ ವಿಧಾನತಃ ॥ ೧ ॥

ಪ್ರಣಯಾ ತ್ಕುಂಡಮಧ್ಯೇ ಚ ಸ್ಥಂಡಿಲೇ ಶಿವಸನ್ನಿಧೌ ।
ಪೂರ್ವಂ ವಿಷ್ಣುಂ ಸಮಾಸಾದ್ಯ ಪದ್ಮಯೋನಿ ಮತಃ ಪರಂ ॥ ೨ ॥

ಮಂತ್ರಾಭ್ಯಾಂ ವಿಧಿನೋಕ್ತಾಭ್ಯಾಂ ಪ್ರಣವಾದಿ ಸಮಂತ್ರಕಂ ।
ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ ।
ತನ್ನೋ ವಿಷ್ಣುಃ ಪ್ರಚೋದಯಾತ್ ॥ ೩ ॥

ಬ್ರಹ್ಮ ಬ್ರಾಹ್ಮಣ ವೃದ್ಧಾಯ ಬ್ರಹ್ಮಣೇ ವಿಶ್ವವೇದಸೇ ।
ಶಿವಾಯ ಹರಯೇ ಸ್ವಾಹಾ ಸ್ವಧಾ ವೌಷಟ್ ವಷಟ್ ತಥಾ ॥ ೪ ॥

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ನಲವತ್ತುನಾಲ್ಕನೆಯ ಅಧ್ಯಾಯವು.

೧-೨. ಸನತ್ಕುಮಾರನು ಹೇಳಿದನು:—ಇನ್ನು ಮುಂದೆ ಸರ್ವದಾನಗಳಲ್ಲಿಯೂ ಉತ್ತಮವಾದ ತ್ರಿಮೂರ್ತಿದಾನವನ್ನು ವಿಶದವಾಗಿ ಹೇಳುವೆನು ಕೇಳುವವನಾಗು. ಹಿಂದೆ ಹೇಳಿದ ದೇಶಕಾಲಗಳಲ್ಲಿ ಮಂಟಪವನ್ನು ನಿರ್ಮಿಸಿ, ಅದರಲ್ಲಿ ಕುಂಡವನ್ನು ಮಾಡಿಸಿ, ಆ ಕುಂಡದಲ್ಲಿ ಸ್ಥಂಡಿಲ ಮಧ್ಯದಲ್ಲಿ ಶಿವನನ್ನು ಸ್ಥಾಪಿಸಿ, ಶಿವನ ಪಾರ್ಶ್ವದಲ್ಲಿ ಮೊದಲು ವಿಷ್ಣುವನ್ನೂ, ಅನಂತರದಲ್ಲಿ ಬ್ರಹ್ಮನನ್ನೂ ಸ್ಥಾಪಿಸಿ, ಮುಂದೆ ಹೇಳುವ ಮಂತ್ರಗಳಿಂದ ಓಂಕಾರ ಪುರಸ್ಸರವಾಗಿ ತ್ರಿಮೂರ್ತಿಗಳನ್ನು ಪೂಜಿಸಬೇಕು.

೩-೪. ಬ್ರಹ್ಮಾ ಮತ್ತು ವಿಷ್ಣು, ಇವರ ಪೂಜೆಯನ್ನು ಈ ಮುಂದಿನ ಮಂತ್ರಗಳಿಂದ ಮಾಡಬೇಕು.

ಪೂಜಯಿತ್ವಾ ವಿಧಾನೇನ ಪಶ್ಚಾದ್ಧೋಮಂ ಸಮಾಚರೇತ್ ।
ಸರ್ವದ್ರವ್ಯಂ ಹಿ ಹೋತವ್ಯಂ ದ್ವಾಭ್ಯಾಂ ಕುಂಡವಿಧಾನತಃ ॥ ೫ ॥
ಋತ್ವಿಜೌ ದ್ವೌ ಪ್ರಕರ್ತವ್ಯೌ ಗುರುಣಾ ವೇದಪಾರಗೌ ।
ತಾನುದ್ದಿಶ್ಯ ಯಥಾ ನ್ಯಾಯಂ ವಿಪ್ರೇಭ್ಯೋದಾಪಯೇದ್ಧನಂ ॥ ೬ ॥
ಶತಮಷ್ಟೋತ್ತರಂ ತೇಭ್ಯಃ ಪೃಥಕ್ಪೃಥಗನುತ್ತಮಂ ।
ವಸ್ತ್ರಾಭರಣ ಸಂಯುಕ್ತಂ ಸರ್ವಾಲಂಕಾರ ಸಂಯುತಂ ॥ ೭ ॥
ಗುರುರೇಕೋ ಹಿ ವೈ ಶ್ರೀಮಾನ್ ಬ್ರಹ್ಮಾವಿಷ್ಣುರ್ಮಹೇಶ್ವರಃ ।
ತೇಷಾಂ ಪೃಥಕ್ ಪೃಥಗ್ದೇಯಂ ಭೋಜಯೇದ್ಬ್ರಾಹ್ಮಣಾನಪಿ ॥

---

೫. ಮೇಲೆ ಹೇಳಿದ ಮಂತ್ರಗಳಿಂದ ಪೂಜೆಮಾಡಿ, ತರುವಾಯ ಹೋಮವನ್ನು ಮಾಡಬೇಕು. ಸಕಲ ಹೋಮ ದ್ರವ್ಯಗಳನ್ನೂ ಪ್ರತ್ಯೇಕ ಪ್ರತ್ಯೇಕವಾಗಿ ಬ್ರಹ್ಮ, ವಿಷ್ಣು ಇವರಿಗೋಸ್ಕರ ಆಯಾ ಕುಂಡಗಳಲ್ಲಿ ಹೋಮಮಾಡಬೇಕು.

೬. ಪುರೋಹಿತನೊಂದಿಗೆ ಇಬ್ಬರು ಋತ್ವಿಜರನ್ನು ಆವಾಹಿಸಬೇಕು. ಬಳಿಕ ಬ್ರಹ್ಮ, ವಿಷ್ಣು, ಮಹೇಶ್ವರ ಈ ಮೂವರನ್ನುದ್ದೇಶಿಸಿ, ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಡಿಸಬೇಕು.

೭. ಬ್ರಾಹ್ಮಣರಿಗೆ ಪ್ರತ್ಯೇಕವಾಗಿ ವಸ್ತ್ರಾಭರಣಗಳೊಡನೆಯೂ, ಮತ್ತು ಅಲಂಕಾರಗಳೊಡನೆಯೂ, ನೂರೆಂಟು ನಾಣ್ಯ ಪರಿಮಿತವಾದ ಧನವನ್ನು ದಾನಮಾಡಬೇಕು..

೮–೯. ಒಬ್ಬನೇ ಒಬ್ಬ ಆಚಾರ್ಯನು ತ್ರಿಮೂರ್ತಿಸ್ವರೂಪನಾಗಿರುವವನು, ಎಂದು ಭಾವಿಸಿ, ಬೇರೆಬೇರೆಯಾಗಿ ತ್ರಿಮೂರ್ತಿಗಳನ್ನು ದಾನಮಾಡಬೇಕು. ಮತ್ತು ಬ್ರಾಹ್ಮಣರನ್ನೂ, ಬಡಬಗ್ಗರನ್ನೂ ಭೋಜನದಿಂದ ತೃಪ್ತಿಪಡಿಸಬೇಕು. ಹಿಂದೆ ಹೇಳಿದಂತೆ ಬ್ರಾಹ್ಮಣ

**ಶಿವಾರ್ಚನಾ ಚ ಕರ್ತವ್ಯಾ ಸ್ನಪನಾದಿ ಯಥಾಕ್ರಮಂ ॥ ೯ ॥**

**ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ತ್ರಿಮೂರ್ತಿ ಧಾನ ವಿಧಿ ನಿರೂಪಣಂ ನಾಮ ಚತುಶ್ಚತ್ವಾರಿಂಶೋಽಧ್ಯಾಯಃ**

---

ಪೂಜೆಯ ವೇಳೆಯಲ್ಲಿ ಶಿವಾರ್ಚನೆಯನ್ನೂ ವಿಧಿವತ್ತಾಗಿ ನೆರವೇರಿಸಬೇಕು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ತ್ರಿಮೂರ್ತಿ ದಾನ ವಿಧಿ ನಿರೂಪಣ ವೆಂಬ ನಲವತ್ತುನಾಲ್ಕನೆಯ ಅಧ್ಯಾಯವು ಮುಗಿದುದು.



## ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
## ಪಂಚ ಚತ್ವಾರಿಂಶತ್ತಮೋಽಧ್ಯಾಯಃ

**॥ ಋಷಯ ಊಚುಃ ॥**

**ಏವಂ ಷೋಡಶದಾನಾನಿ ಕಥಿತಾನಿ ಶುಭಾನಿ ಚ ।**
**ಜೀವಚ್ಛ್ರಾದ್ಧ ಕ್ರಮೋಽಸ್ಮಾಕಂ ವಕ್ತುಮರ್ಹಸಿ ಸಾಂಪ್ರತಂ ॥ ೧ ॥**

**॥ ಸೂತ ಉವಾಚ ॥**

**ಜೀವಚ್ಛ್ರಾದ್ಧ ವಿಧಿಂ ವಕ್ಷ್ಯೇ ಸಮಾಸಾತ್ಸರ್ವಸಂಮತಂ ।**
**ಮನವೇ ದೇವದೇವೇನ ಕಥಿತಂ ಬ್ರಹ್ಮಣಾ ಪುರಾ ॥ ೨ ॥**

**ವಸಿಷ್ಠಾಯ ಚ ಶಿಷ್ಯಾಯ ಭೃಗವೇ ಭಾರ್ಗವಾಯ ಚ ।**
**ಶೃಣ್ವಂತು ಸರ್ವ ಭಾವೇನ ಸರ್ವಸಿದ್ಧಿ ಕರಂ ಪರಂ ॥ ೩ ॥**

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ನಲವತ್ತೈದನೆಯ ಅಧ್ಯಾಯವು.

೧. ಋಷಿಗಳು ಹೇಳಿದರು:—ಎಲೈ ಸೂತನೇ, ಈ ರೀತಿಯಲ್ಲಿ ಷೋಡಶದಾನಗಳ ವಿಧಿಯನ್ನು ಹೇಳಿ ಮುಗಿಸಿರುವೆ. ಇನ್ನು ಮುಂದೆ ನೀನು ನಮಗೆ ಜೀವಚ್ಛ್ರಾದ್ಧಕ್ರಮವನ್ನು ತಿಳಿಸುವವನಾಗು.

೨-೩. ಸೂತನು ಹೇಳಿದನು:—ಎಲೈ ಬ್ರಾಹ್ಮಣರೇ, ಸಕಲ ಜನಗಳಿಗೂ ಅಭಿಪ್ರೇತವಾದ ಈ ಜೀವಚ್ಛ್ರಾದ್ಧದ ವಿಧಿಯನ್ನು ನಾನು ನಿಮಗೆ ಸಂಕ್ಷೇಪದಿಂದ ಹೇಳುವೆನು. ಹಿಂದೆ ಒಂದಾನೊಂದು ಕಾಲದಲ್ಲಿ ಈ ಜೀವಚ್ಛ್ರಾದ್ಧದ ವಿಧಿಯನ್ನು ಬ್ರಹ್ಮನು ಮನುವಿಗೂ ಮತ್ತು ತನ್ನ ಶಿಷ್ಯರಾದ ವಸಿಷ್ಠ, ಭೃಗು, ಭಾರ್ಗವ, ಇವರುಗಳಿಗೂ ಹೇಳಿರುತ್ತಾನೆ. ಸಕಲ ಸಿದ್ಧಿಗಳನ್ನೂ ಉಂಟುಮಾಡುವ ಮತ್ತು ಶ್ರೇಷ್ಠವಾದ ಈ ವಿಧಿಯನ್ನು ಸಾವಧಾನರಾಗಿ ಕೇಳಿರಿ.

ಶ್ರಾದ್ಧಮಾರ್ಗ ಕ್ರಮಂ ಸಾಕ್ಷಾತ್ ಶ್ರಾದ್ಧಾರ್ಹಾಣಾಮಪಿ
ಕ್ರಮಂ ।
ವಿಶೇಷಮಪಿ ವಕ್ಷ್ಯಾಮಿ ಜೀವಚ್ಛ್ರಾದ್ಧಸ್ಯ ಸುವ್ರತಾಃ ॥ ೪ ॥
ಪರ್ವತೇ ವಾ ನದೀತೀರೇ ವನೇ ವಾಽಽಯತನೇಽಪಿ ವಾ ।
ಜೀವ ಚ್ಛ್ರಾದ್ಧಂ ಪ್ರಕರ್ತವ್ಯಂ ಮೃತಿಕಾಲೇ ಪ್ರಯತ್ನತಃ ॥ ೫ ॥
ಜೀವ ಚ್ಛ್ರಾದ್ಧೇ ಕೃತೇ ಜೀವೋ ಜೀವನ್ನೇವ ವಿಮುಚ್ಯತೇ ।
ಕರ್ಮಕುರ್ವನ್ನ ಕುರ್ವನ್ವಾ ಜ್ಞಾನೀ ವಾಽ ಜ್ಞಾನವಾನಪಿ ॥ ೬ ॥
ಶ್ರೋತ್ರಿಯೋಽಶ್ರೋತ್ರಿಯೋ ವಾಽ ಪಿ ಬ್ರಾಹ್ಮಣಃ ಕ್ಷತ್ರಿಯೋಽಪಿ
ವಾ ।
ವೈಶ್ಯೋ ವಾ ನಾತ್ರ ಸಂದೇಹೋ ಯೋಗಮಾರ್ಗ ಗತೋ ಯಥಾ ॥

---

೪. ಎಲೈ ಸದಾಚಾರವುಳ್ಳ ಬ್ರಾಹ್ಮಣರೇ, ಜೀವಚ್ಛ್ರಾದ್ಧವನ್ನು ಆಚರಿಸುವ ಕ್ರಮವನ್ನೂ ಅದನ್ನು ಆಚರಿಸುವುದಕ್ಕೆ ಅರ್ಹರನ್ನೂ ಮತ್ತು ಇತರ ವಿಶೇಷ ವಿಷಯಗಳನ್ನೂ ಹೇಳುವೆನು, ಕೇಳಿರಿ.

೫. ಪರ್ವತದಲ್ಲಾಗಲೀ, ನದೀತೀರದಲ್ಲಾಗಲೀ, ವನದಲ್ಲಾಗಲೀ, ಗೃಹದಲ್ಲಾಗಲೀ, ಈ ಜೀವಚ್ಛ್ರಾದ್ಧವನ್ನು ಆಚರಿಸಬೇಕು. ಇದನ್ನು ಮರಣೋನ್ಮುಖನಾದವನು ಆ ಸಮಯದಲ್ಲಿ ಆಚರಿಸಬೇಕು.

೬. ಜೀವಚ್ಛ್ರಾದ್ಧವನ್ನು ಆಚರಿಸಿದ ಮಾನವನು ಜೀವಂತನಾಗಿರುವಾಗಲೇ ಮುಕ್ತನಾಗುವನು.

೭. ನಿತ್ಯ ನೈಮಿತ್ತಿಕ ಕರ್ಮಗಳನ್ನೂ ಅನುಷ್ಠಾನಮಾಡುವವನೇ ಆಗಲೀ, ಕರ್ಮಾನುಷ್ಠಾನಮಾಡದವನೇ ಆಗಲೀ, ಜ್ಞಾನಿಯಾಗಲೀ, ಅಜ್ಞಾನಿಯಾಗಲೀ, ವೇದಾಧ್ಯಯನ ಸಂಪನ್ನನಾಗಲೀ, ವೇದಾಧ್ಯಯನವನ್ನು ಮಾಡದಿರುವವನಾಗಲೀ, ಬ್ರಾಹ್ಮಣನಾಗಲೀ, ಕ್ಷತ್ರಿಯನಾಗಲೀ, ವೈಶ್ಯನಾಗಲೀ, ಯೋಗಿಯಾಗಿ ಇರುವವರು ಸರ್ವರೂ ಜೀವಚ್ಛ್ರಾದ್ಧವನ್ನು ಆಚರಿಸಲು ಅಧಿಕಾರಿಗಳಾಗಿರುತ್ತಾರೆ.

ಪರೀಕ್ಷ್ಯ ಭೂಮಿಂ ವಿಧಿವದ್ಗಂಧವರ್ಣ ರಸಾದಿಭಿಃ ।
ಶಲ್ಯ ಮುದ್ಧೃತ್ಯ ಯತ್ನೇನ ಸ್ಥಂಡಿಲಂ ಸೈಕತಂ ಭುವಿ ॥ ೮ ॥
ಮಧ್ಯತೋ ಹಸ್ತ ಮಾತ್ರೇಣ ಕುಂಡಂ ಚೈವಾಯತಂ ಶುಭಂ ।
ಸ್ಥಂಡಿಲಂ ವಾ ಪ್ರಕರ್ತವ್ಯಂ ಇಷುಮಾತ್ರಂ ಪುನಃ ಪುನಃ ॥ ೯ ॥
ಉಪಲಿಪ್ಯ ವಿಧಾನೇನ ಚಾಲಿ ಪ್ಯಾಗ್ನಿಂ ವಿಧಾಯ ಚ ।
ಅನ್ವಾಧಾಯ ಯಥಾಶಾಸ್ತ್ರಂ ಪರಿಗೃಹ್ಯ ಚ ಸರ್ವತಃ ॥೧೦॥
ಪರಿಸ್ತೀರ್ಯ ಸ್ವಶಾಖೋಕ್ತಂ ಪಾರಂ ಪರ್ಯ ಕ್ರಮಾಗತಂ ।
ಸಮಾಪ್ಯಾಗ್ನಿ ಮುಖಂ ಸರ್ವಂ ಮಂತ್ರೈರೇತೈ ರ್ಯಥಾಕ್ರಮಂ ॥೧೧॥
ಸಂಪೂಜ್ಯ ಸ್ಥಂಡಿಲೇ ವಹ್ನೌ ಹೋಮಯೇತ್ಸಮಿಧಾದಿಭಿಃ ।
ಆದೌ ಕೃತ್ವಾ ಸಮಿದ್ಧೋಮಂ ಚರುಣಾ ಚ ಪೃಥಕ್ಪೃಥಕ್ ॥೧೨॥

---

೮–೧೧. ಗಂಧ, ವರ್ಣ, ರಸ, ಮುಂತಾದುವುಗಳಿಂದ ಭೂಮಿಯನ್ನು ಪರೀಕ್ಷಿಸಿ, (ಎಂದರೆ ಸುರಭಿ, ಗಂಧ, ಕೃಷ್ಣವರ್ಣ, ಮಧುರರಸ, ಇವುಗಳಿಂದ ಕೂಡಿರುವ ಭೂಮಿಯು ಶ್ರೇಷ್ಠವಾದುದೆಂದು ಹೇಳಲ್ಪಟ್ಟಿದೆ) ಕಸ, ಕಡ್ಡಿ, ಮುಂತಾದುವುಗಳಿದ್ದರೆ ಅವನ್ನು ತೆಗೆದುಹಾಕಿ, ಮಧ್ಯಭಾಗದಲ್ಲಿ, ಹಸ್ತಪ್ರಮಾಣವುಳ್ಳ ವಿಸ್ತಾರವಾದ ಕುಂಡವನ್ನಾಗಲೀ, ಬಾಣಪ್ರಮಾಣದ ಸ್ಥಂಡಿಲವನ್ನಾಗಲೀ, ನಿರ್ಮಿಸಿ, ವಿಧಿವತ್ತಾಗಿ ಗೋಮಯಾದಿಗಳಿಂದಲೂ ಅದನ್ನು ಪರೀಕ್ಷಿಸಿ, ಪರಿಷ್ಕರಿಸಿ, ಕುಂಡದಲ್ಲಿ ಅಗ್ನಿಯನ್ನು ಪ್ರತಿಷ್ಠಾಪನೆಮಾಡಿ, ಅನ್ವಾಧಾನಮಾಡಿ, ಮೂರು ಸಮಿತ್ತುಗಳನ್ನು ತೆಗೆದುಕೊಂಡು ಯಾವದೇವತೆಗಳಿಗೋಸ್ಕರ ಹೋಮ ಮಾಡುತ್ತೇವೋ ಆ ದೇವತೆಗಳನ್ನು ಆಹ್ವಾನಮಾಡಿ, ಅಗ್ನಿಮುಖವನ್ನು ಮಾಡಿ, ಅಗ್ನಿಯನ್ನು ಪೂಜಿಸಿ, ಮುಂದೆ ಹೇಳುವ ಮಂತ್ರಗಳಿಂದ ಸಮಿದ್ಧೋಮವನ್ನೂ ಮಾಡಬೇಕು.

೧೨–೧೩. ಮೊದಲು ಸಮಿದ್ಧೋಮವನ್ನು ಮಾಡಿದ ಬಳಿಕ ಪ್ರತ್ಯೇಕವಾಗಿ ಆಯಾದೇವತೆಗಳನ್ನುದ್ದೇಶಿಸಿ ಚರುವಿನಿಂದ ಹೋಮವನ್ನು ಮಾಡಿ, ಬೇರೆಬೇರೇ ಪಾತ್ರೆಯಲ್ಲಿ ಸಂಸ್ಕೃತವಾದ ಘೃತವನ್ನು ಹೋಮ

ಘೃತೇನ ಚ ಪೃಥಕ್ಪಾತ್ರೇ ಶೋಧಿತೇನ ಪೃಥಕ್ಪೃಥಕ್ ।
ಜುಹುಯಾ ದಾತ್ಮನೋದ್ಧೃತ್ಯ ತತ್ತ್ವಭೂತಾನಿ ಸರ್ವತಃ ॥೧೨॥

ಓಂ ಭೂಃ ಬ್ರಹ್ಮಣೇ ನಮಃ ॥೧೪॥ ಓಂ ಭೂಃ ಬ್ರಹ್ಮಣೇ ಸ್ವಾಹಾ ॥೧೫॥ ಓಂ ಭುವಃ ವಿಷ್ಣವೇ ನಮಃ ॥೧೬॥ ಓಂ ಭುವಃ ವಿಷ್ಣವೇ ಸ್ವಾಹಾ ॥೧೭॥ ಓಂ ಸ್ವಃ ರುದ್ರಾಯ ನಮಃ ॥೧೮॥ ಓಂ ಸ್ವಃ ರುದ್ರಾಯ ಸ್ವಾಹಾ ॥೧೯॥ ಓಂ ಮಹಃ ಈಶ್ವರಾಯ ನಮಃ ॥೨೦॥ ಓಂ ಮಹಃ ಈಶ್ವರಾಯ ಸ್ವಾಹಾ ॥೨೧॥ ಜನಃ ಪ್ರಕೃತಯೇ ನಮಃ ॥೨೨॥ ಓಂ ಜನಃ ಪ್ರಕೃತ್ಯೈಸ್ವಾಹಾ ॥೨೩॥ ಓಂ ತಪಃ ಮುದ್ಗಲಾಯ ನಮಃ ॥೨೪॥ ಓಂ ತಪಃ ಮುದ್ಗಲಾಯ ಸ್ವಾಹಾ ॥೨೫॥ ಓಂ ಋತಂ ಪುರುಷಾಯ ನಮಃ ॥೨೬॥ ಓಂ ಋತಂ ಪುರುಷಾಯ ಸ್ವಾಹಾ ॥೨೭॥ ಓಂ ಸತ್ಯಂ ಶಿವಾಯ ನಮಃ ॥೨೮॥ ಓಂ ಸತ್ಯಂ ಶಿವಾಯ ಸ್ವಾಹಾ॥೨೯॥ ಓಂ ಶರ್ವ ಧರಾಂ ಮೇ ಗೋಪಾಯ । ಘ್ರಾಣೇ ಗಂಧಂ ಶರ್ವಾಯ ದೇವಾಯ ಭೂರ್ನಮಃ ॥೩೦॥ ಓಂ ಶರ್ವಂ ಧರಾ ಮೇ ಗೋಪಾಯ । ಘ್ರಾಣೇ ಗಂಧಂ ಶರ್ವಾಯ ದೇವಾಯ ಭೂಃ ಸ್ವಾಹಾ ॥೩೧॥ ಓಂ ಶರ್ವ ಧರಾಂಮೇ ಗೋಪಾಯ ಘ್ರಾಣೇ ಗಂಧಂ ಶರ್ವಸ್ಯ ದೇವಸ್ಯ ಪತ್ನ್ಯೈ ಭೂರ್ನಮಃ ॥೩೨॥ ಓಂ ಶರ್ವ ಧರಾಂಮೇ ಗೋಪಾಯ ಘ್ರಾಣೇ ಗಂಧಂ ಶರ್ವಪತ್ನ್ಯೈ ಭೂಃ ಸ್ವಾಹಾ ॥೩೩॥ ಓಂ ಭವ ಜಲಂ ಮೇ ಗೋಪಾಯ ಜಿಹ್ವಾಯಾಂ ರಸಂ ಭವಾಯ ದೇವಾಯ ಭುವೋ ನಮಃ ॥೩೪॥ ಓಂ ಭವ ಜಲಂಮೇ ಗೋಪಾಯ ಜಿಹ್ವಾಯಾಂ ರಸಂ ಭವಾಯ ದೇವಾಯ ಭುವಃ ಸ್ವಾಹಾ ॥೩೫॥ ಓಂ ಭವ ಜಲಂಮೇ ಗೋಪಾಯ ಜಿಹ್ವಾಯಾಂ ರಸಂ ಭವಸ್ಯ ದೇವಸ್ಯ ಪತ್ನ್ಯೈ

---

ಮಾಡಬೇಕು. ಹೋಮಕಾಲದಲ್ಲಿ ಸರ್ವಥಾ ಪೃಥಿವ್ಯಾದಿ ಪಂಚ ತತ್ತ್ವಗಳನ್ನೂ ಮನಸ್ಸಿನಿಂದ ಸ್ಮರಿಸುತ್ತಾ ಹೋಮಮಾಡಬೇಕು.

೧೪–೬೪. ಎಲೈ ಸದಾಚಾರಿಗಳೇ, ಮೊದಲು ಬ್ರಹ್ಮನನ್ನುದ್ದೇಶಿಸಿ ಪೂಜೆಯನ್ನು ಮಾಡಿ, ತರುವಾಯ ಈ ಮುಂದಿನ ಮಂತ್ರಗಳಲ್ಲಿ ಹೇಳಿ

ಭುವೋ ನಮಃ ॥೩೬॥ ಓಂ ಭವ ಜಲಂ ಮೇ ಗೋಪಾಯ ಜಿಹ್ವಾಯಾಂ ರಸಂ ಭವಸ್ಯ ಪತ್ನ್ಯೈ ಭುವಃ ಸ್ವಾಹಾ ॥೩೭॥ ರುದ್ರಾಗ್ನಿಂ ಮೇ ಗೋಪಾಯ ನೇತ್ರೇ ರೂಪಂ ರುದ್ರಾಯ ದೇವಾಯ ಸ್ವರೋಂ ನಮಃ ॥೩೮॥ ರುದ್ರಾಗ್ನಿಂಮೇ ಗೋಪಾಯ ನೇತ್ರೇ ರೂಪಂ ರುದ್ರಾಯ ದೇವಾಯ ಸ್ವಃ ಸ್ವಾಹಾ ॥೩೯॥ ರುದ್ರಾಗ್ನಿಂಮೇ ಗೋಪಾಯ ನೇತ್ರೇ ರೂಪಂ ರುದ್ರಸ್ಯ ಪತ್ನ್ಯೈ ಸ್ವರೋಂ ನಮಃ ॥೪೦॥ ರುದ್ರಾಗ್ನಿಂಮೇ ಗೋಪಾಯ ನೇತ್ರೇ ರೂಪಂ ರುದ್ರಸ್ಯ ದೇವಸ್ಯ ಪತ್ನ್ಯೈ ಸ್ವಃ ಸ್ವಾಹಾ ॥೪೧॥ ಉಗ್ರ ವಾಯುಂ ಮೇ ಗೋಪಾಯ ತ್ವಚಿ ಸ್ಪರ್ಶ ಮುಗ್ರಾಯ ದೇವಾಯ ಮಹಃ ನಮಃ ॥೪೨॥ ಉಗ್ರ ವಾಯುಂ ಮೇ ಗೋಪಾಯ ತ್ವಚಿ ಸ್ಪರ್ಶ ಮುಗ್ರಾಯ ದೇವಾಯ ಮಹಃ ಸ್ವಾಹಾ ॥೪೩॥ ಉಗ್ರ ವಾಯುಂ ಮೇ ಗೋಪಾಯ ತ್ವಚಿ ಸ್ಪರ್ಶ ಮುಗ್ರಸ್ಯ ದೇವಸ್ಯ ಪತ್ನ್ಯೈ ಮಹರೋಂ ನಮಃ ॥೪೪॥ ಉಗ್ರ ವಾಯುಂ ಮೇ ಗೊಪಾಯ ತ್ವಚಿ ಸ್ಪರ್ಶ ಮುಗ್ರಸ್ಯ ದೇವಸ್ಯ ಪತ್ನ್ಯೈ ಮಹಃ ಸ್ವಾಹಾ ॥೪೫॥ ಭೀಮ ಸುಷಿರಂ ಮೇ ಗೋಪಾಯ ಶ್ರೋತ್ರೇ ಶಬ್ದಂ ಭೀಮಾಯ ದೇವಾಯ ಜನೋ ನಮಃ ॥೪೬॥ ಭೀಮ ಸುಷಿರಂ ಮೇ ಗೋಪಾಯ ಶ್ರೋತ್ರೇ ಶಬ್ದಂ ಭೀಮಾಯ ದೇವಾಯ ಜನಃ ಸ್ವಾಹಾ ॥೪೭॥ ಭೀಮ ಸುಷಿರಂ ಮೇಗೋಪಾಯ ಶ್ರೋತ್ರೇ ಶಬ್ದಂ ಭೀಮಸ್ಯ ಪತ್ನ್ಯೈ ಜನೋ ನಮಃ ॥೪೮॥ ಭೀಮ ಸುಷಿರಂ ಮೇ ಗೋಪಾಯ ಶ್ರೋತ್ರೇ ಶಬ್ದಂ ಭೀಮಾಸ್ಯ ದೇವಾಸ್ಯ ಪತ್ನ್ಯೈ ಜನಃ ಸ್ವಾಹಾ ॥೪೯॥ ಈಶ ರಜೋ ಮೇ ಗೋಪಾಯ ದ್ರವ್ಯೇ ತೃಷ್ಣಾ ಮೀಶಾಯ ದೇವಾಯ ತಪೋ ನಮಃ ॥೫೦॥ ಈಶ ರಜೋ ಮೇ ಗೋಪಾಯ ದ್ರವ್ಯೇ ತೃಷ್ಣಾ ಮೀಶಾಯ ದೇವಾಯ ತಪಃ ಸ್ವಾಹಾ ॥೫೧॥ (ಈಶ) ರಜೋ ಮೇ ಗೋಪಾಯ ದ್ರವ್ಯೇ ತೃಷ್ಣಾ ಮೀಶಸ್ಯ ಪತ್ನ್ಯೈ ತಪೋ ನಮಃ ॥೫೨॥ ಈಶ ರಜೋ ಮೇ ಗೋಪಾಯ ದ್ರವ್ಯೇ ತೃಷ್ಣಾ

---

ರುವ ಇಪ್ಪತ್ತೈದು ದೇವತೆಗಳನ್ನು ಪೂಜೆಮಾಡಿ, ಅನಂತರದಲ್ಲಿ ಮೋಕ್ಷ ಸಂಪಾದನೆಗೋಸ್ಕರ ಶಿವನನ್ನುದ್ದೇಶಿಸಿ ಹೋಮವನ್ನು ಮಾಡಬೇಕು. ಸೃಷ್ಟಿ, ಸ್ಥಿತಿ, ಲಯಗಳಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರನ್ನು ತಿಳಿಯ

ಮೀಶಸ್ಯ ಪತ್ನ್ಯೈ ತಪಃ ಸ್ವಾಹಾ ॥೫೩॥ ಮಹಾದೇವ ಸತ್ಯಂ ಮೇ ಗೋಪಾಯ ಶ್ರದ್ಧಾಂ ಧರ್ಮೇ ಮಹಾದೇವಾಯ ಋತಂ ನಮಃ ॥೫೪॥ ಮಹಾದೇವ ಸತ್ಯಂ ಮೇ ಗೋಪಾಯ ಶ್ರದ್ಧಾಂ ಧರ್ಮೇ ಮಹಾದೇವಾಯ ಋತಂ ಸ್ವಾಹಾ ॥೫೫॥ ಮಹಾದೇವ ಸತ್ಯಂ ಮೇ ಗೋಪಾಯ ಶ್ರದ್ಧಾಂ ಧರ್ಮೇ ಮಹಾದೇವಸ್ಯ ಪತ್ನ್ಯೈ ಋತಂ ನಮಃ ॥೫೬॥ ಮಹಾದೇವಾಯ ಸತ್ಯಂ ಮೇ ಗೋಪಾಯ ಶ್ರದ್ಧಾಂ ಧರ್ಮೇ ಮಹಾದೇವಸ್ಯ ಪತ್ನ್ಯೈ ಋತಂ ಸ್ವಾಹಾ ॥೫೭॥ ಪಶುಪತೇ ಪಾಶಂ ಮೇ ಗೋಪಾಯ ಭೋಕ್ತೃತ್ವ ಭೋಗ್ಯಂ ಪಶುಪತಯೇ ದೇವಾಯ ಸತ್ಯಂ ನಮಃ ॥೫೮॥ ಪಶುಪತೇ ಪಾಶಂ ಮೇ ಗೋಪಾಯ ಭೋಕ್ತೃತ್ವ ಭೋಗ್ಯಂ ಪಶುಪತಯೇ ದೇವಸ್ಯ ಸತ್ಯಂ ಸ್ವಾಹಾ ॥೫೯॥ ಓಂ ಪಶುಪತೇ ಪಾಶಂ ಮೇ ಗೋಪಾಯ ಭೋಕ್ತೃತ್ವ ಭೋಗ್ಯಂ ಪಶುಪತೇಃ ದೇವಸ್ಯ ಪತ್ನ್ಯೈ ಸತ್ಯಂ ನಮಃ ॥೬೦॥ ಓಂ ಪಶುಪತೇ ಪಾಶಂ ಮೇ ಗೋಪಾಯ ಭೋಕ್ತೃತ್ವ ಭೋಗ್ಯಂ ಪಶುಪತೇರ್ದೇವಸ್ಯ ಪತ್ನ್ಯೈ ಸತ್ಯಂ ಸ್ವಾಹಾ ॥೬೧॥

ಓಂ ಶಿವಾಯ ನಮಃ ಓಂ ॥೬೨॥ ಶಿವಾಯ ಸತ್ಯಂ ಸ್ವಾಹಾ ॥೬೩॥

ಏವಂ ಶಿವಾಯ ಹೋತವ್ಯಂ ವಿರಿಂಚಾದ್ಯಂ ಚ ಪೂರ್ವವತ್ ।
ವಿರಿಂಚಾದ್ಯಂ ಚ ಪೂರ್ವೋಕ್ತಂ ಸೃಷ್ಟಿಮಾರ್ಗೇಷು ಸುವ್ರತಾಃ॥೬೪॥

ಪುನಃ ಪಶುಪತೇಃ ಪತ್ನೀಂ ತಥಾ ಪಶುಪತಿಂ ಕ್ರಮಾತ್ ।
ಸಂಪೂಜ್ಯ ಪೂರ್ವವನ್ಮಂತ್ರೈ ಹೋತವ್ಯಂ ಚ ಕ್ರಮೇಣ ವೈ ॥೬೫॥

---

ಬೇಕು. (ಎಂದರೆ ಸೃಷ್ಟಿಯನ್ನು ಮಾಡುವವನು ಬ್ರಹ್ಮನೆಂದೂ, ವಿಷ್ಣುವು ಸ್ಥಿತಿಕಾರಣನೂ, ರುದ್ರನು ಲಯಕಾರಣನೂ, ಎಂದೂ ಭಾವನೆಯನ್ನು ಮಾಡಬೇಕೆಂದರ್ಥವು).

೬೫–೬೬. ಪುನಃ ರುದ್ರನ ಪತ್ನಿಯನ್ನೂ, ಮತ್ತು ರುದ್ರನನ್ನೂ ಕ್ರಮವಾಗಿ ಪೂಜಿಸಿ ಹಿಂದೆ ಹೇಳಿದ ರೀತಿಯಿಂದ ಪೂರ್ವೋಕ್ತ ಮಂತ್ರ

ಚರ್ವಂತ ಮಾಜ್ಯ ಪೂರ್ವಂ ಚ ಸಮಿದಂತಂ ಸಮಾಹಿತಃ ॥೬೬॥
ಓಂ ಶರ್ವ ಧರಾಂ ಮೇ ಛಿಂಧಿ ಘ್ರಾಣೇ ಗಂಧಂ
ಛಿಂಧಿ ಮೇಘಂ ಜಹಿ ಭೂಃ ಸ್ವಾಹಾ ॥೬೭॥
ಭುವಃ ಸ್ವಾಹಾ ॥೬೮॥ ಸ್ವಃ ಸ್ವಾಹಾ ॥೬೯॥ ಭೂರ್ಭುವಃ ಸ್ವಃ
ಸ್ವಾಹಾ ॥೭೦॥
ಏವಂ ಪೃಥಕ್ಪೃಥಕ್ ಹುತ್ವಾ ಕೇವಲೇನ ಘೃತೇನ ವಾ ।
ಸಹಸ್ರಂ ವಾ ತದರ್ಧಂ ವಾ ಶತಮಷ್ಟೋತ್ತರಂ ತು ವಾ ॥೭೧॥
ವಿರಜಾ ಚ ಘೃತೇನೈವ ಶತಮಷ್ಟೋತ್ತರಂ ಪೃಥಕ್ ।
ಪ್ರಾಣಾದಿಭಿಶ್ಚ ಜುಹುಯಾ ದ್ಘೃತೇನೈವ ತು ಕೇವಲಂ ॥೭೨॥
ಓಂ ಪ್ರಾಣೇ ನಿವಿಷ್ಟೋಽಮೃತಂ ಜುಹೋಮಿ ।
ಶಿವೋ ಮಾ ವಿಶ ಪ್ರದಾಹಾಯ ಪ್ರಾಣಾಯ ಸ್ವಾಹಾ ॥೭೩॥

---

ಗಳನ್ನು ಹೇಳಿ ಮೊದಲು ಘೃತದಿಂದಲೂ, ಮಧ್ಯದಲ್ಲಿ ಸಮಿತ್ತು ಗಳಿಂದಲೂ, ಅಂತ್ಯದಲ್ಲಿ ಚರುವಿನಿಂದಲೂ, ಹೋಮಮಾಡಬೇಕು.

೬೭–೭೧. ಹಿಂದೆ ಹೇಳಿರುವ "ಶರ್ವಧರಾಂಮೇ ಛಿಂಧಿ" ಎಂಬ ಮಂತ್ರದಿಂದ ವ್ಯಾಹೃತಿ ಪೂರ್ವಕವಾಗಿ ಕೇವಲ ಘೃತದಿಂದ ಪ್ರತ್ಯೇಕ ವಾಗಿ ಸಹಸ್ರಾವೃತ್ತಿಯಾಗಲೀ, ಐನೂರಾವೃತ್ತಿಯಾಗಲೀ, ಅಷ್ಟೋತ್ತರ ಶತಾಽವೃತ್ತಿಯಾಗಲೀ, ಹೋಮಮಾಡಬೇಕು. ಹೀಗೆ ಹೋಮ ಮಾಡಿದ ಬಳಿಕ "ವಿರಜಾ" ಎಂಬ ಸಂಜ್ಞೆಯುಳ್ಳ ದಿಕ್ಷಾಮಂತ್ರ ಗಳಿಂದ ನೂರೆಂಟಾವೃತ್ತಿ ಘೃತಹೋಮವನ್ನು ಮಾಡಬೇಕು.

೭೨. ವಿರಜಾ ಹೋಮವನ್ನು ಮುಂದೆ ಹೇಳುವ "ಪ್ರಾಣೇ ನಿವಿಷ್ಟೋಽಮೃತಂ ಜುಹೋಮಿ" ಎಂಬ ಮಂತ್ರವೇ ಮೊದಲಾದ ಐದು ಮಂತ್ರಗಳಿಂದ ಘೃತದ್ರವ್ಯಗಳಿಂದಲೇ ನೆರವೇರಿಸಬೇಕು.

೭೩–೭೯. ಈ ಹಿಂದೆ ಹೇಳಿರುವ ಕ್ರಮದಿಂದಲೂ, ಸಾಮಾನ್ಯ ಶ್ರಾದ್ಧೋಕ್ತ ಕ್ರಮದಿಂದಲೂ, ಹೋಮ ಮಾಡಬೇಕು. ಹೋಮ

ಪ್ರಾಣಾಧಿಪತಯೇ ರುದ್ರಾಯ ವೃಷಾಂತಕಾಯ ಸ್ವಾಹಾ ॥೭೪॥
ಓಂ ಭೂಃ ಸ್ವಾಹಾ ॥೭೫॥ ಓಂ ಭುವಃಸ್ವಾಹಾ ॥೭೬॥
ಓಂ ಸ್ವಃ ಸ್ವಾಹಾ ॥೭೭॥ ಓಂ ಭೂರ್ಭುವಃ ಸ್ವಃ ಸ್ವಾಹಾ ॥೭೮॥
ಏವಂ ಮಂತ್ರೇಣ ಜುಹುಯಾ ಚ್ಛ್ರಾದ್ಧೋಕ್ತೇನ ಯಥಾಕ್ರಮಂ ।
ಸಪ್ತಮೇಽಹನಿಯೋಗೀಂದ್ರಾನ್ ಶ್ರಾದ್ಧಾರ್ಹಾನಪಿ ಭೋಜಯೇತ್॥
ಶರ್ವಾದೀನಾಂ ಚ ವಿಪ್ರಾಣಾಂ ವಸ್ತ್ರಾಭರಣ ಕಂಬಲಾನ್ ।
ವಾಹನಂ ಶಯನಂ ಯಾನಂ ಕಾಂಸ್ಯ ತಾಮ್ರಾದಿ ಭಾಜನಂ ॥೮೦॥
ಹೈಮಂ ಚ ರಾಜತಂ ಧೇನುಂ ತಿಲಾನ್ ಕ್ಷೇತ್ರಂ ಚ ವೈಭವಂ ।
ದಾಸೀ ದಾಸಗಣಶ್ಚೈವ ದಾತವ್ಯೋ ದಕ್ಷಿಣಾಮಪಿ ॥೮೧॥
ಪಿಂಡಂ ಚ ಪೂರ್ವವದ್ದದ್ಯಾ ತ್ಪೃಥಗಷ್ಟ ಪ್ರಕಾರತಃ ।
ಬ್ರಾಹ್ಮಣಾನಾಂ ಸಹಸ್ರಂ ಚ ಭೋಜಯೇಚ್ಚ ಸದಕ್ಷಿಣಂ ॥೮೨॥
ಏಕಂ ವಾ ಯೋಗನಿರತಂ ಭಸ್ಮನಿಷ್ಠಂ ಜಿತೇಂದ್ರಿಯಂ ।
ತ್ರ್ಯಹಂ ಚೈವ ತು ರುದ್ರಸ್ಯ ಮಹಾಚರು ನಿವೇದನಂ ॥೮೩॥

---

ವನ್ನು ಮಾಡಿದ ತರುವಾಯ ಏಳನೆಯ ದಿವಸದಲ್ಲಿ ಶ್ರಾದ್ಧ ಭೋಜನಕ್ಕೆ ಯೋಗ್ಯರಾದ ಬ್ರಾಹ್ಮಣರನ್ನೂ ಮತ್ತು ಸನ್ಯಾಸಿಗಳನ್ನೂ ಭೋಜನ ಮಾಡಿಸಬೇಕು.

೮೦–೮೧. ಶರ್ವಾದಿ ಅಷ್ಟದೇವತೆಗಳೆಂದು ಆವಾಹನೆ ಮಾಡಿರುವ ಬ್ರಾಹ್ಮಣರಿಗೆ ವಸ್ತ್ರಗಳನ್ನೂ, ಆಭರಣಗಳನ್ನೂ, ಕಂಬಳಗಳನ್ನೂ, ವಾಹನಗಳನ್ನೂ, ಶಯನವನ್ನೂ, ರಥಾದಿಯಾನಗಳನ್ನೂ, ಕಂಚಿನ, ತಾಮ್ರದ, ಪಾತ್ರೆಗಳನ್ನೂ, ಸುವರ್ಣಧೇನುವನ್ನೂ, ರಜತಧೇನುವನ್ನೂ ಎಳ್ಳನ್ನೂ, ಭೂಮಿಯನ್ನೂ, ದಾಸ ದಾಸಿಯರನ್ನೂ, ದಕ್ಷಿಣೆಯನ್ನೂ ಕೊಡಬೇಕು.

೮೩. ಅಥವಾ ಯೋಗನಿರತನೂ, ಜಿತೇಂದ್ರಿಯನೂ, ಭಸ್ಮಧಾರಣೆ ಮಾಡಿರುವವನೂ ಆದ ಒಬ್ಬ ಬ್ರಾಹ್ಮಣನನ್ನಾದರೂ ಭೋಜನ ಮಾಡಿಸಬೇಕು. ಮೂರುದಿನಗಳ ಪರ್ಯಂತ ರುದ್ರನಿಗೆ ಚರುವನ್ನು ನೈವೇದ್ಯ ಮಾಡಬೇಕು. ಈ ವಿಧಿಯನ್ನು ಸಕಲ ಶ್ರಾದ್ಧಕ್ರಮಗಳಲ್ಲಿಯೂ, ವಿಶೇಷವಾಗಿ ಹೇಳಿರುತ್ತಾರೆ.

ವಿಶೇಷ ಏವ ಕಥಿತಃ ಅಶೇಷ ಶ್ರಾದ್ಧ ಚೋದಿತಃ ।
ಮೃತೇ ಕುರ್ಯಾನ್ನ ಕುರ್ಯಾದ್ವಾ ಜೀವನ್ಮುಕ್ತೋ ಯತಃ ಸ್ವಯಂ ॥
ನಿತ್ಯ ನೈಮಿತ್ತಿಕಾದೀನಿ ಕುರ್ಯಾದ್ವಾ ಸಂತ್ಯಜೇತ್ತು ವಾ ।
ಬಾಂಧವೇಽಪಿ ಮೃತೇ ತಸ್ಯ ಶೌಚಾ ಶೌಚಂ ನ ವಿದ್ಯತೇ ॥೮೫॥
ಸೂತಕಂ ಚ ನ ಸಂದೇಹಃ ಸ್ನಾನಮಾತ್ರೇಣ ಶುದ್ಧ್ಯತಿ ।
ಪಶ್ಚಾಜ್ಜಾತೇ ಕುಮಾರೇ ಚ ಸ್ವೇಕ್ಷೇತ್ರೇ ಚಾತ್ಮನೋ ಯದಿ॥೮೬॥
ತಸ್ಯ ಸರ್ವಂ ಪ್ರಕರ್ತವ್ಯಂ ಪುತ್ರೋಽಪಿ ಬ್ರಹ್ಮವಿದ್ಭವೇತ್ ।
ಕನ್ಯಕಾ ಯದಿ ಸಂಜಾತಾ ಪಶ್ಚಾತ್ತಸ್ಯ ಮಹಾತ್ಮನಃ ॥೮೭॥

---

೮೪–೮೫. ಮೇಲೆ ಹೇಳಿದ ಕ್ರಮವನ್ನು ಅನುಸರಿಸಿ ಯಾವನು ಜೀವಚ್ಛ್ರಾದ್ಧವನ್ನು ನೆರವೇರಿಸುವನೋ ಅವನು ತೀರಿದ ತರುವಾಯ ಅವನ ಔರ್ಧ್ವದೇಹಿಕ ಕರ್ಮಗಳನ್ನು ಮಾಡಿದರೂ ಮಾಡಬಹುದು. ಬಿಟ್ಟರೂ ಬಿಡಬಹುದು. ನಿತ್ಯನೈಮಿತ್ತಿಕ ಕರ್ಮಗಳನ್ನು ಮಾಡಲೀ, ಅಥವಾ ಅನುಷ್ಠಾನಮಾಡದೇ ಇರಲೀ, ಇದರಿಂದ ಅವನಿಗೆ ಯಾವ ರೀತಿಯ ಫಲವೇ ಆಗಲೀ, ಅಥವಾ ಪ್ರತ್ಯವಾಯವೇ (ಪಾಪ) ಆಗಲೀ, ಇರುವುದಿಲ್ಲ. ಇವನ ಬಾಂಧವರು ಮೃತರಾದರೆ ಇವನಿಗೆ ಶೌಚಾಶೌಚ ವಿಧಿಯು ಇರುವುದಿಲ್ಲ. ಸೂತಕವು ಇದ್ದರೂ ಸ್ನಾನಮಾತ್ರದಿಂದ ಶುದ್ಧನಾಗುವನು. ಏಕೆಂದರೆ ಇವನು ಜೀವಚ್ಛ್ರಾದ್ಧವನ್ನುಮಾಡಿ ಈ ದೇಹವಿರುವಾಗಲೇ ಋಣ ವಿಮುಕ್ತನಾಗಿರುವುದರಿಂದ ಮೇಲೆ ಹೇಳಿದ ಯಾವ ಆಚರಣೆಗಳಲ್ಲಿಯೂ, ಯಾವ ಆಚಾರವೂ ಇವನಿಗಿರುವುದಿಲ್ಲ.

೮೬. ಜೀವಚ್ಛ್ರಾದ್ಧವನ್ನುಮಾಡಿ, ಕೆಲವು ಕಾಲ ಕಳೆದಮೇಲೆ ತನ್ನ ಧರ್ಮಪತ್ನಿಯಲ್ಲಿ ಮಗನು ಹುಟ್ಟಿದರೆ ಆ ಪುತ್ರನಿಗೆ ಜಾತಕನಾಮಕರಣಗಳನ್ನು ಮಾಡಬೇಕು. ಅವನ ಪುತ್ರನೂ ಬ್ರಹ್ಮೀಭೂತನಾಗುತ್ತಾನೆ.

೮೭–೮೯. ಮಗಳು ಜನ್ಮವನ್ನು ತಾಳಿದರೆ ಅವಳನ್ನು ಸಾಕ್ಷಾತ್ ಪಾರ್ವತಿಯನ್ನಾಗಿ ತಿಳಿಯಬೇಕು. ಈ ಕನ್ನಿಕೆಯ ವಂಶದಲ್ಲಿ ಹುಟ್ಟಿದ

ಏಕಪರ್ಣಾ ಇವಾಜ್ಞೇಯಾ ಅಪರ್ಣಾ ಇವ ಸುವ್ರತಾಃ ।
ಭವತ್ಯೇವ ನ ಸಂದೇಹ ಸ್ತಸ್ಯಾಶ್ಚಾನ್ವಯ ಜಾ ಅಪಿ ॥೮೮॥
ಮುಚ್ಯಂತೇ ನಾತ್ರ ಸಂದೇಹಃ ಪಿತರೋ ನರಕಾದಪಿ ।
ಮುಚ್ಯಂತೇ ಕರ್ಮಣಾನೇನ ಮಾತೃತಃ ಪಿತೃತಸ್ತಥಾ ॥೮೯॥
ಕಾಲಂ ಗತೇ ದ್ವಿಜೇ ಭೂಮೌ ಖನೇಚ್ಚಾಪಿ ದಹೇತ್ತು ವಾ ।
ಪುತ್ರಕೃತ್ಯ ಮಶೇಷಂ ಚ ಕೃತ್ವಾ ದೋಷೋ ನ ವಿದ್ಯತೇ ॥೯೦॥
ಕರ್ಮಣಾ ಚೋತ್ತರೇಣೈವ ಗತಿರಸ್ಯ ನ ವಿದ್ಯತೇ ।
ಬ್ರಹ್ಮಣಾ ಕಥಿತಂ ಸರ್ವಂ ಮುನೀನಾಂ ಭಾವಿತಾತ್ಮನಾಂ ॥೯೧॥
ಪುನಃ ಸನತ್ಕುಮಾರಾಯ ಕಥಿತಂ ತೇನ ಧೀಮತಾ ।
ಕೃಷ್ಣದ್ವೈಪಾಯನಾಯೈವ ಕಥಿತಂ ಬ್ರಹ್ಮಸೂನುನಾ ॥೯೨॥

---

ವರೆಲ್ಲರೂ ಮುಕ್ತರಾಗುತ್ತಾರೆ. ಮತ್ತು ಪಿತೃಗಳು ನರಕದಿಂದ ವಿಮುಕ್ತರಾಗುತ್ತಾರೆ. ಇದಲ್ಲದೇ ತಮ್ಮತಮ್ಮ ಮಾತಾಪಿತೃಗಳ ಋಣದಿಂದ ವಿಮುಕ್ತರಾಗುತ್ತಾರೆ. ಇದರಲ್ಲಿ ಯಾವ ಸಂದೇಹವೂ ಇರುವುದಿಲ್ಲ.

೯೦. ಜೀವಚ್ಛ್ರಾದ್ಧವನ್ನು ಮಾಡಿದವನು ಮೃತನಾಗಲು ಅವನನ್ನು ಭೂಮಿಯಲ್ಲಿ ಹೂಳಬಹುದು. ಅಥವಾ ಸುಡಬಹುದು. ಯಾವ ರೀತಿಯಲ್ಲಿ ಮಾಡಿದರೂ ದೋಷವಿರುವುದಿಲ್ಲ.

೯೧. ಮೃತನಾದ ತರುವಾಯ ಅವನ ಔರ್ಧ್ವದೈಹಿಕ ಕರ್ಮಗಳನ್ನು ಮಾಡುತ್ತಿರಲು ಅವನಿಗೆ ಪುನಃ ಸಂಸಾರಗತಿಯು ಇರುವುದಿಲ್ಲ. ಜೀವಚ್ಛ್ರಾದ್ಧದ ಕ್ರಮವನ್ನೂ ಮತ್ತು ಅದರಫಲವನ್ನೂ ಬ್ರಹ್ಮನು ಈ ಹಿಂದೆ ಕೃತಾತ್ಮರಾದ ಋಷಿಗಳಿಗೆ ಹೇಳಿರುವನು.

೯೨. ಬ್ರಹ್ಮನ ಮಾನಸ ಪುತ್ರನಾದ ಸನತ್ಕುಮಾರನಿಂದ ಕ್ರಮವಾಗಿ ಈ ವಿಧಿಯು ವ್ಯಾಸನಿಗೆ ಹೇಳಲ್ಪಟ್ಟಿತು.

**ಪ್ರಸಾದಾತ್ತಸ್ಯ ದೇವಸ್ಯ ವೇದವ್ಯಾಸಸ್ಯ ಧೀಮತಃ ।**
**ಜ್ಞಾತಂ ಮಾಯಾ ಕೃತಂ ಚೈವ ನಿಯೋಗಾದೇವ ತಸ್ಯ ತು ॥೯೩॥**
**ಏತದ್ವಃ ಕಥಿತಂ ಸರ್ವಂ ರಹಸ್ಯಂ ಬ್ರಹ್ಮಸಿದ್ಧಿದಂ ।**
**ಮುನಿಪುತ್ರಾಯ ದಾತವ್ಯಂ ನ ಚಾ ಭಕ್ತಾಯ ಸುವ್ರತಾಃ ॥೯೪॥**

**ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ಜೀವಚ್ಛ್ರಾದ್ಧ ವಿಧಿ ರ್ನಾಮ ಪಂಚ ಚತ್ವಾರಿಂಶತ್ತ ಮೋಽಧ್ಯಾಯಃ**

---

೯೩. ಆ ಜ್ಞಾನಿಯಾದ ವೇದವ್ಯಾಸನ ಅನುಗ್ರಹದಿಂದ ನಾನು ಈ ವಿಧಿಯನ್ನು ತಿಳಿದು ಕೊಂಡೆನು. ಮತ್ತು ಅನುಷ್ಠಾನ ಮಾಡಿದೆನು.

೯೪. ಮೋಕ್ಷಪ್ರದವಾದ ಮತ್ತು ರಹಸ್ಯವಾದ ಈ ಜೀವಚ್ಛ್ರಾದ್ಧ ವಿಧಿಯು ನಿನಗೋಸ್ಕರ ಹೇಳಲ್ಪಟ್ಟಿತು. ಇದನ್ನು ಜಿತೇಂದ್ರಿಯನಾದವನಿಗೂ ಮತ್ತು ಶ್ರದ್ಧಾಳುವಾದವನಿಗೂ, ಹೇಳಬೇಕು. ಅಶ್ರದ್ಧೆಯುಳ್ಳವನಿಗೆ ಹೇಳಬಾರದು.

**ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರ ಭಾಗದಲ್ಲಿ ಜೀವಚ್ಛ್ರಾದ್ಧ ವಿಧಿಯೆಂಬ ನಲವತ್ತೈದನೆಯ ಅಧ್ಯಾಯವು ಮುಗಿದುದು.**

## ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
## ಷಟ್ಚತ್ವಾರಿಂಶೋಽಧ್ಯಾಯಃ

॥ ಋಷಯ ಊಚುಃ ॥

ಜೀವಚ್ಛ್ರಾದ್ಧ ವಿಧಿಃ ಪ್ರೋಕ್ತ ಸ್ತ್ವಯಾ ಸೂತ ಮಹಾಮತೇ ।
ಮುಮುಕ್ಷೂಣಾಮಪಿ ಮೋಕ್ಷಾರ್ಥಮಸ್ಮಾಕಂ ರೋಮಹರ್ಷಣ ॥

ರುದ್ರಾದಿತ್ಯ ವಸೂನಾಂ ಚ ಶಕ್ರಾದೀನಾಂ ಚ ಸುವ್ರತ ।
ಪ್ರತಿಷ್ಠಾ ಕೀದೃಶೀ ಶಂಭೋಃ ಲಿಂಗ ಮೂರ್ತೇಶ್ಚ ಶೋಭನಾ ॥ ೨ ॥

ವಿಷ್ಣೋಃ ಶಕ್ರಸ್ಯ ದೇವಸ್ಯ ಬ್ರಹ್ಮಣಶ್ಚ ಮಹಾತ್ಮನಃ ।
ಅಗ್ನೇರ್ಯಮಸ್ಯ ನಿ ಋಋತೇ ರ್ವರುಣಸ್ಯ ಮಹಾದ್ಯುತೇಃ ॥ ೩ ॥

ವಾಯೋಃ ಸೋಮಸ್ಯ ಯಕ್ಷಸ್ಯ ಕುಬೇರಸ್ಯಾಮಿತಾತ್ಮನಃ ।
ಈಶಾನಸ್ಯ ಧರಾಯಾಶ್ಚ ಶ್ರೀಪ್ರತಿಷ್ಠಾಽಥವಾ ಕಥಂ ॥ ೪ ॥

ದುರ್ಗಾ ಶಿವಾ ಪ್ರತಿಷ್ಠಾ ಚ ಹೈಮವತ್ಯಾಶ್ಚ ಶೋಭನಾ ।
ಸ್ಕಂದಸ್ಯ ಗಣರಾಜಸ್ಯ ನಂದಿನಶ್ಚ ವಿಶೇಷತಃ ॥ ೫ ॥

---

### ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ನಲವತ್ತಾರನೆಯ ಅಧ್ಯಾಯವು

೧. ಋಷಿಗಳು ಹೇಳಿದರು :—ಎಲೈ ಮಹಾಜ್ಞಾನಿಯಾದ ಸೂತ ಮಹರ್ಷಿಯೇ, ಅಜ್ಞರಾದ ನಮ್ಮಗಳಿಗೂ ಸಹ ಮೋಕ್ಷಪ್ರಾಪ್ತಿಗೋಸ್ಕರ ಜೀವಚ್ಛ್ರಾದ್ಧ ವಿಧಿಯನ್ನು ನೀನು ಹೇಳಿರುವವನಾಗಿರುತ್ತೀಯೆ.

೨-೬. ಇನ್ನುಮುಂದೆ ರುದ್ರ, ಆದಿತ್ಯ, ವಸುಗಳು, ಮತ್ತು ಇಂದ್ರಾದಿ ದೇವತೆಗಳನ್ನು ಪ್ರತಿಷ್ಠಾಪನೆ ಮಾಡುವ ವಿಧಿಯನ್ನು ನಮಗೆ ಹೇಳುವವನಾಗು. ಇದಲ್ಲದೇ ವಿಷ್ಣು, ಇಂದ್ರ, ಬ್ರಹ್ಮ, ಅಗ್ನಿ, ಯಮ, ನಿರ್‌ಋತಿ, ವರುಣ, ವಾಯು, ಚಂದ್ರ, ಯಕ್ಷರಾಜನಾದ

ತಥಾಽನ್ಯೇಷಾಂ ಚ ದೇವಾನಾಂ ಗಣಾನಾಮಪಿ ವಾ ಪುನಃ ।
ಪ್ರತಿಷ್ಠಾ ಲಕ್ಷಣಂ ಸರ್ವಂ ವಿಸ್ತರಾದ್ವಕ್ತು ಮರ್ಹಸಿ ॥ ೬ ॥

ಭವಾನ್ ಸರ್ವಾರ್ಥ ತತ್ವಜ್ಞೋ ರುದ್ರಭಕ್ತಶ್ಚ ಸುವ್ರತ ।
ಕೃಷ್ಣದ್ವೈಪಾಯನಸ್ಯಾಸಿ ಸಾಕ್ಷಾತ್ತ್ವಮಪರಾ ತನುಃ ॥ ೭ ॥

ಸುಮಂತುಃ ಜೈಮಿನಿಶ್ಚೈವ ಪೈಲಶ್ಚ ಪರಮರ್ಷಯಃ ।
ಗುರುಭಕ್ತಿಂ ತಥಾ ಕರ್ತುಂ ಸಮರ್ಥೋ ರೋಮಹರ್ಷಣಃ ॥ ೮ ॥

ಇತಿ ವ್ಯಾಸಸ್ಯ ವಿಪುಲಾ ಗಾಥಾ ಭಾಗೀರಥೀತಟೇ ।
ಏಕಃ ಸಮೋ ವಾ ಭಿನ್ನೋ ವಾ ಶಿಷ್ಯಸ್ತಸ್ಯ ಮಹಾದ್ಯುತೇಃ ॥ ೯ ॥

ವೈಶಂಪಾಯನ ತುಲ್ಯೋಽಸಿ ವ್ಯಾಸಶಿಷ್ಯೇಷು ಭೂತಲೇ ।
ತಸ್ಮಾದಸ್ಮಾಕ ಮಖಿಲಂ ವಕ್ತುಮರ್ಹಸಿ ಸಾಂಪ್ರತಂ ॥೧೦॥

---

ಕುಬೇರ, ಈಶಾನ, ಧರಾ, ಲಕ್ಷ್ಮೀ, ದುರ್ಗಾ, ಪಾರ್ವತೀ, ಷಣ್ಮುಖ, ಗಣೇಶ, ನಂದಿ, ಮತ್ತು ಇನ್ನಿತರ ಸರ್ವ ದೇವತೆಗಳನ್ನೂ ಪ್ರತಿಷ್ಠಾಪನೆ ಮಾಡುವ ವಿಧಾನವನ್ನು ವಿಸ್ತಾರವಾಗಿ ಹೇಳುವವನಾಗು.

೭. ಎಲೈ ತಪೋ ನಿಷ್ಠನಾದ ಸೂತ ಮಹರ್ಷಿಯೇ, ನೀನು ಸಕಲ ವಸ್ತುಗಳ ಯಾಥಾರ್ಥ್ಯವನ್ನು ತಿಳಿದು ಕೊಂಡಿರುವವನೂ, ಈಶ್ವರನ ಭಕ್ತನೂ, ಮತ್ತು ಸಾಕ್ಷಾತ್ ವೇದವ್ಯಾಸನ ಅಪರಾವತಾರಿಯೂ, ಆಗಿ ರುತ್ತೀಯೆ.

೮-೧೦. ಎಲೈ ಸೂತನೇ, ಸುಮಂತು, ಜೈಮಿನಿ, ಪೈಲ, ಎಂಬ ಹೆಸರುಳ್ಳಪರಮಋಷಿಗಳೂ, ಕೂಡ ನಿನ್ನಲ್ಲಿ ಗುರುಭಕ್ತಿಯನ್ನಿಟ್ಟಿರುವವ ರಾಗಿರುತ್ತಾರೆ. ನೀನು ಅಷ್ಟು ಸಮರ್ಥನಾಗಿರುವೆ. ಈ ಹಿಂದೆ ಒಂದಾ ನೊಂದು ಕಾಲದಲ್ಲಿ ಗಂಗಾನದಿಯ ತೀರದಲ್ಲಿ ವ್ಯಾಸನ ಒಬ್ಬನೇ ಒಬ್ಬ ಶಿಷ್ಯನು ಅವನ ಸಮಾನನಾಗುತ್ತಾನೆ. ಅಥವಾ ಭಿನ್ನನಾಗುತ್ತಾನೆ. ಎಂಬ ಗಾದೆಯು ಪ್ರಚಲಿತವಾಗಿತ್ತು. ನೀನು ಈ ಭೂಲೋಕದಲ್ಲಿ ವೈಶಂಪಾಯನ ಮಹರ್ಷಿಗೆ ಸದೃಶನಾದವನಾಗಿರುತ್ತೀಯೆ. ಆದುದ ರಿಂದ ನಾವು ನಿನ್ನನ್ನು ಪ್ರಶ್ನಿಸಿದ ಸಕಲ ವಿಷಯಗಳಿಗೂ ಉತ್ತರವನ್ನು ಹೇಳಲು ಸಮರ್ಥನಾಗಿರುತ್ತೀಯೆ.

ಏವಮುಕ್ತ್ವಾ ಸ್ಥಿತೇಷ್ವೇವ ತೇಷು ಸರ್ವೇಷು ತತ್ರ ಚ ।
ಬಭೂವ ವಿಸ್ಮಯೋಽತೀವ ಮುನೀನಾಂ ತಸ್ಯ ಚಾಗ್ರತಃ ॥೧೧॥
ಅಥಾಂತರಿಕ್ಷೇ ವಿಪುಲಾ ಸಾಕ್ಷಾದ್ದೇವೀ ಸರಸ್ವತೀ ।
ಅಲಂ ಮುನೀನಾಂ ಪ್ರಶ್ನೋಽಯ ಮಿತಿ ವಾಚಾ ಬಭೂವ ಹ ॥೧೨॥
ಸರ್ವಂ ಲಿಂಗಮಯಂ ಲೋಕಂ ಸರ್ವಂ ಲಿಂಗೇ ಪ್ರತಿಷ್ಠಿತಂ ।
ತಸ್ಮಾತ್ಸರ್ವಂ ಪರಿತ್ಯಜ್ಯ ಸ್ಥಾಪಯೇತ್ಪೂಜಯೇಚ್ಚತತ್ ॥೧೩॥
ಲಿಂಗ ಸ್ಥಾಪನ ಸನ್ಮಾರ್ಗ ನಿಹಿತ ಸ್ವಾಯತಾಸಿನಾ ।
ಆಶು ಬ್ರಹ್ಮಾಂಡ ಮುದ್ಭಿದ್ಯ ನಿರ್ಗಚ್ಛೇದವಿ ಶಂಕಯಾ ॥೧೪॥

---

೧೧. ಸಮಸ್ತಋಷಿಗಳೂ ಹೀಗೆಂದುಹೇಳಿ ಅಲ್ಲಿಯೇ ಇರುತ್ತಿರಲು ಸೂತಮಹರ್ಷಿಯ ಮುಂಭಾಗದಲ್ಲಿ ಒಂದು ಅತ್ಯಾಶ್ಚರ್ಯಕರವಾದ ವಿಷಯವು ವುಂಟಾಯಿತು.

೧೨. ಆ ಆಶ್ಚರ್ಯವನ್ನು ವಿವರಿಸುತ್ತಾರೆ. ತರುವಾಯ ಅಂತರಿಕ್ಷದಲ್ಲಿ ಸಾಕ್ಷಾತ್ ಸರಸ್ವತೀ ದೇವಿಯು ಸನ್ನಿಹಿತಳಾಗಿ ಮುನಿಗಳ ಪ್ರಶ್ನೆಗಳು ಅರ್ಥ ಪೂರ್ಣವಾಗಿರುತ್ತವೆ. ಎಂಬದಾಗಿ ಹೇಳಿದಳು. ಮತ್ತು

೧೩. ಸರಸ್ವತಿಯು ಹೀಗೆಂದು ಹೇಳಿದಳು—ಎಲೈ ಋಷಿಗಳೇ, ಸಕಲ ಲೋಕವೂ ಲಿಂಗರೂಪವಾದದ್ದೇ ಆಗಿರುತ್ತದೆ. ಆದುದರಿಂದ ಸಕಲವೂ ಲಿಂಗದಲ್ಲಿ ಪ್ರತಿಷ್ಠಿತವಾಗಿರುತ್ತದೆ. ಆ ಕಾರಣವದೆಸೆಯಿಂದ ಇತರ ಸರ್ವ ಧರ್ಮವನ್ನೂ ಪರಿತ್ಯಜಿಸಿ ಲಿಂಗವನ್ನೂ ಸ್ಥಾಪಿಸಿ ಪೂಜೆಮಾಡಬೇಕು. (ಎಂದರೆ ಇತರ ದೇವತೆಗಳ ಪ್ರತಿಷ್ಠಾಕ್ರಮವನ್ನೂ ತಿಳಿಯುವ ಅವಶ್ಯಕತೆ ಇರುವುದಿಲ್ಲ. ಏಕೆಂದರೆ ಸಕಲವೂ ಲಿಂಗದಲ್ಲಿಯೇ ಪ್ರತಿಷ್ಠಿತವಾಗಿರುವುದರಿಂದ ಲಿಂಗಪೂಜೆಯನ್ನು ಮಾಡಿದರೆ ಇನ್ನಿತರ ಪೂಜೆ ಪ್ರತಿಷ್ಠೆಗಳು ಅದರಲ್ಲಿಯೇ ಅಡಗಿಹೋಗುವುವೆಂದರ್ಥವು.)

೧೪. ಲಿಂಗಸ್ಥಾಪನೆಯೆಂಬ ಸನ್ಮಾರ್ಗದಲ್ಲಿ ಯಾವನು ತನ್ನ ಖಡ್ಗವನ್ನು ಇಡುತ್ತಾನೆಯೋ ಎಂದರೆ ಯಾವನು ಲಿಂಗಸ್ಥಾಪನಾರೂಪವಾದ ಕಾರ್ಯವನ್ನು ನೆರವೇರಿಸುವನೋ, ಅವನು ಶೀಘ್ರವಾಗಿ ಬ್ರಹ್ಮಾಂಡವನ್ನೇ ಉದ್ಭೇದಿಸಿ ಮುಕ್ತನಾಗುತ್ತಾನೆ. ಇದರಲ್ಲಿ ಸಂಶಯ ವಿರುವುದಿಲ್ಲ.

ಉಪೇಂದ್ರಾಂ ಭೋಜ ಗರ್ಭೇಂದ್ರ ಯಮಾಂಬು ಧನದೇಶ್ವರಾಃ ।
ತಥಾಽನ್ಯೇ ಚ ಶಿವಂ ಸ್ಥಾಪ್ಯ ಲಿಂಗ ಮೂರ್ತಿಂ ಮಹೇಶ್ವರಂ ॥೧೫॥

ಸ್ವೇಷು ಸ್ವೇಷು ಚ ಪಕ್ಷೇಷು ಪ್ರಧಾನಾಸ್ತೇ ಯಥಾ ದ್ವಿಜಾಃ ।
ಬ್ರಹ್ಮಾ ಹರಶ್ಚ ಭಗವಾನ್ ವಿಷ್ಣು ರ್ದೇವೀ ರಮಾ ಧರಾ ॥೧೬॥

ಲಕ್ಷ್ಮೀರ್ಧೃತಿಃ ಸ್ಮೃತಿಃ ಪ್ರಜ್ಞಾ ಧರಾ ದುರ್ಗಾ ಶಚೀ ತಥಾ ।
ರುದ್ರಾಶ್ಚ ವಸವಃ ಸ್ಕಂದೋ ವಿಶಾಖಃ ಶಾಖ ಏವಚ ॥೧೭॥

ನೈಗಮೇಶಶ್ಚ ಭಗವಾನ್ ಲೋಕಪಾಲಾಃ ಗ್ರಹಾಸ್ತಥಾ ।
ಸರ್ವೇ ನಂದಿ ಪುರೋಗಾಶ್ಚ ಗಣಾಃ ಗಣಪತಿಃ ಪ್ರಭುಃ ॥೧೮॥

ಪಿತರೋ ಮುನಯಃ ಸರ್ವೇ ಕುಬೇರಾದ್ಯಾಶ್ಚ ಸುಪ್ರಭಾಃ ।
ಆದಿತ್ಯಾ ವಸವಃ ಸಾಂಖ್ಯಾ ಅಶ್ವಿನೌ ಚ ಭಿಷಗ್ವರೌ ॥೧೯॥

ವಿಶ್ವೇದೇವಾಶ್ಚ ಸಾಧ್ಯಾಶ್ಚ ಪಶವಃ ಪಕ್ಷಿಣೋ ಮೃಗಾಃ ।
ಬ್ರಹ್ಮಾದಿ ಸ್ಥಾವರಾಂತಂ ಚ ಸರ್ವಂ ಲಿಂಗೇ ಪ್ರತಿಷ್ಠಿತಂ ॥೨೦॥

---

೧೫. ಎಲೈ ಋಷಿಗಳೇ, ಈ ಹಿಂದೆ ವಿಷ್ಣು, ಬ್ರಹ್ಮ, ಇಂದ್ರ, ಯಮ, ವರುಣ, ಕುಬೇರ, ಮುಂತಾದ ದೇವತೆಗಳೂ, ಮತ್ತು ಇನ್ನಿತರರೂ ಲಿಂಗಾಕಾರನಾದ ಮಹೇಶ್ವರನನ್ನು ಪ್ರತಿಷ್ಠಾಪನೆಮಾಡಿ ಪೂಜಿಸಿದ್ದರಿಂದ ತಮ್ಮತಮ್ಮ ಅಸಾಧಾರಣ ಕಾರ್ಯದಲ್ಲಿ ಪ್ರಧಾನ ಭೂತರಾದರು. ಅವರಿಗೆ ಆಯಾ ಪದವಿಯೂ, ಮತ್ತು ತಮ್ಮ ಹೆಸರಿಗನುಗುಣವಾದ ಅಸಾಧಾರಣವಾದ ಅಧಿಕಾರಿಗಳ ಚಿಹ್ನೆಯೂ ಪೂರ್ವಭಾಗದ ಐವತ್ತೊಂಟನೆಯ ಅಧ್ಯಾಯದಲ್ಲಿ ಹೇಳಿರುವಂತೆ ಪ್ರಾಪ್ತವಾಯಿತು.

೧೬–೨೦. ಬ್ರಹ್ಮವಿಷ್ಣುಮಹೇಶ್ವರರೂ, ಲಕ್ಷ್ಮಿಯೂ, ಭೂದೇವಿಯೂ, ಧೃತಿಯೂ, ಸ್ಮೃತಿಯೂ, ಪ್ರಜ್ಞಾ, ಧರಾ, ದುರ್ಗೀ, ಶಚೀ, ಏಕಾದಶರುದ್ರರೂ, ವಸುಗಳೂ, ಷಣ್ಮುಖನೂ, ವಿಶಾಖನೂ, ಶಾಖನೂ, ವೇದಮೂರ್ತಿಯೂ, ಅಷ್ಟದಿಕ್ಪಾಲಕರೂ, ನವಗ್ರಹಗಳೂ, ನಂದಿಯೇ ಮುಂದಾಳಾಗಿ ವುಳ್ಳ ಗಣಗಳೂ, ಗಣೇಶನೂ, ಪಿತೃಗಳೂ, ಸಕಲ ಋಷಿಗಳೂ, ಕುಬೇರಾದಿ ಯಕ್ಷರೂ, ದ್ವಾದಶಾದಿತ್ಯರೂ, ಸಾಂಖ್ಯರೂ, ಅಶ್ವಿನೀದೇವತೆಗಳೂ, ವಿಶ್ವೇದೇವತೆಗಳೂ, ಸಾಧ್ಯರೂ, ಪಶುಪಕ್ಷಿಗಳೂ, ಬ್ರಹ್ಮಾದಿ ಸ್ಥಾವರಾಂತವಾದ ಸಕಲ ಪದಾರ್ಥಗಳೂ, ಲಿಂಗದಲ್ಲಿ ಪ್ರತಿಷ್ಠಿತವಾಗಿರುವುವು. ಅಷ್ಟಮೂರ್ತಿಯಾದ ಶಿವನ ವಿರಾಟ್ ರೂಪವು ಇದು.

ತಸ್ಮಾತ್ಸರ್ವಂ ಪರಿತ್ಯಜ್ಯ ಸ್ಥಾಪಯೇಲ್ಲಿಂಗಮವ್ಯಯಂ ।
ಯತ್ನೇನ ಸ್ಥಾಪಿತಂ ಸರ್ವಂ ಪೂಜಿತಂ ಪೂಜಯೇದ್ಯದಿ ॥೨೧॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
ಷಟ್ಚತ್ವಾರಿಂಶೋಽಧ್ಯಾಯಃ

---

೨೧. ಆ ಕಾರಣದ ದೆಸೆಯಿಂದ ಲಿಂಗವನ್ನು ಸ್ಥಾಪಿಸಿ ಪೂಜೆಮಾಡಿದರೆ ಪೂಜ್ಯವಾದ ಸಕಲವನ್ನೂ ಪೂಜಿಸಿದಂತೆಯೇ ಆಗುತ್ತದೆ. ಆದುದರಿಂದ ಶಾಶ್ವತವಾದ ಲಿಂಗವನ್ನು ಪೂಜೆಮಾಡಬೇಕು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ನಲವತ್ತಾರನೆಯ
ಅಧ್ಯಾಯವು ಮುಗಿದುದು.

ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
ಸಪ್ತ ಚತ್ವಾರಿಂಶೋಽಧ್ಯಾಯಃ

**॥ ಸೂತ ಉವಾಚ ॥**

**ಇತಿ ನಿಶಮ್ಯ ಕೃತಾಂಜಲಯ ಸ್ತದಾ ।**
**ದಿವಿ ಮಹಾ ಮುನಯಃ ಕೃತ ನಿಶ್ಚಯಾಃ ॥**
**ಶಿವತರಂ ಶಿವಮೀಶ್ವರ ಮವ್ಯಯಂ ।**
**ಮನಸಿ ಲಿಂಗಮಯಂ ಪ್ರಣಿಪತ್ಯ ತೇ ॥ ೧ ॥**

**ಸಕಲ ದೇವ ಪತಿ ರ್ಭಗವಾ ನಜೋ ।**
**ಹರಿರಶೇಷ ಪತಿರ್ಗುರುಣಾ ಸ್ವಯಂ ॥**
**ಮುನಿವರಾಶ್ಚ ಗಣಾಶ್ಚ ಸುರಾ ಸುರಾಃ ।**
**ನರವರಾಃ ಶಿವಲಿಂಗ ಮಯಾಃ ಪುನಃ ॥ ೨ ॥**

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ನಲವತ್ತೇಳನೆಯ ಅಧ್ಯಾಯವು.

೧-೨. ಸೂತನು ಹೇಳಿದನು.: ಈರೀತಿಯಲ್ಲಿ ಪಾರ್ವತಿಯು ಲಿಂಗಮಾಹಾತ್ಮ್ಯೆಯನ್ನು ಹೇಳಲು ಋಷಿಗಳೆಲ್ಲರೂ ಅದನ್ನು ಕೇಳಿ ಅಂಜಲಿ ಬದ್ಧರಾಗಿ ಕಲ್ಯಾಣಸ್ವರೂಪನೂ, ಲಿಂಗಾಕಾರನೂ, ನಾಶರಹಿತನೂ, ಆದ ಶಿವನನ್ನು ಮನಸ್ಸಿನಲ್ಲಿಯೇ ನಮಸ್ಕರಿಸಿ, ಇಂದ್ರ, ಬ್ರಹ್ಮ, ವಿಷ್ಣು, ಮುನಿಶ್ರೇಷ್ಠರೂ, ಬೃಹಸ್ಪತಿ, ಗಣಗಳು, ದೇವತೆಗಳು, ಅಸುರರು, ಮನುಷ್ಯರು, ಇವರೆಲ್ಲರೂ ಲಿಂಗಸ್ವರೂಪಿಗಳಾಗಿಯೇ ಇರುವರು. ಎಂದು ತಿಳಿದು ಕೊಂಡರು. (ಎಂದರೆ ಇಂದ್ರಬ್ರಹ್ಮಾದಿ ದೇವತೆಗಳೂ ಮತ್ತು ಇನ್ನಿತರ ಬ್ರಹ್ಮಾದಿಸ್ಥಾವರಾಂತವೆಲ್ಲವೂ ಲಿಂಗದಲ್ಲಿಯೇ ಪ್ರತಿಷ್ಠಿತವಾಗಿರುತ್ತವೆ. ಎಂದು ದೃಢವಾಗಿ ತಿಳಿದುಕೊಂಡರು ಎಂದರ್ಥವು.)

ಶ್ರುತ್ವೈವಂ ಮುನಯಃ ಸರ್ವೇ ಷಟ್ಕುಲೀಯಾಃ ಸಮಾಹಿತಾಃ ।
ಸಂತ್ಯಜ್ಯ ಸರ್ವಂ ದೇವಸ್ಯ ಪ್ರತಿಷ್ಠಾಂ ಕರ್ತುಮುದ್ಯತಾಃ ॥ ೩ ॥

ಅಪೃಚ್ಛನ್ ಸೂತಮನಘಂ ಹರ್ಷಗದ್ಗದಯಾ ಗಿರಾ ।
ಲಿಂಗಪ್ರತಿಷ್ಠಾಂ ವಿಪುಲಾಂ ಸರ್ವೇ ತೇ ಶಂಸಿತವ್ರತಾಃ ॥ ೪ ॥

॥ ಸೂತ ಉವಾಚ ॥

ಪ್ರತಿಷ್ಠಾಂ ಲಿಂಗ ಮೂರ್ತೇರ್ವೋ ಯಥಾವದನು ಪೂರ್ವಶಃ ।
ಪ್ರವಕ್ಷ್ಯಾಮಿ ಸಮಾಸೇನ ಧರ್ಮಕಾಮಾರ್ಥ ಮುಕ್ತಯೇ ॥ ೫ ॥

ಕೃತ್ವೈವ ಲಿಂಗಂ ವಿಧಿನಾ ಭುವಿ ಲಿಂಗೇಷು ಯತ್ನತಃ ।
ಲಿಂಗಮೇಕತಮಂ ಶೈಲಂ ಬ್ರಹ್ಮವಿಷ್ಣು ಶಿವಾತ್ಮಕಂ ॥ ೬ ॥

---

೩. ಹೀಗೆಂದು ಕೇಳಿ ಷಟ್ಕುಲೋತ್ಪನ್ನರಾದ ಸಕಲ ಋಷಿಗಳೂ, ಮನಸ್ಸಮಾಧಾನವುಳ್ಳವರಾಗಿ, ಸಕಲವನ್ನೂ ಪರಿತ್ಯಜಿಸಿ ಲಿಂಗಮೂರ್ತಿಯ ಪ್ರತಿಷ್ಠೆಯನ್ನುಮಾಡಲು ನೆರವಾದರು.

೪. ಸಕಲಋಷಿಗಳೂ ಲಿಂಗಪ್ರತಿಷ್ಠಾಪನೆ ಮಾಡುವ ವಿಧಿಯಲ್ಲಿ ಸಂಶಯವುಳ್ಳವರಾಗಿ (ಎಂದರೆ ಲಿಂಗಪ್ರತಿಷ್ಠಾಪನೆಯ ವಿಧಿಯನ್ನು ಚೆನ್ನಾಗಿ ತಿಳಿಯದವರಾಗಿ) ಹರ್ಷಗದ್ಗದವಾದ ಮಾತಿನಿಂದ ಮಹಾತ್ಮನಾದ ಸೂತನನ್ನು ಕುರಿತು ಪ್ರತಿಷ್ಠಾವಿಧಿಯನ್ನು ಕೇಳಿದರು. ಋಷಿಗಳು ಹೀಗೆಂದು ಕೇಳಲು.

೫. ಸೂತನು ಹೇಳಿದನು. ಎಲೈ ಋಷಿಗಳೇ, ಧರ್ಮಕಾಮಾರ್ಥಮೋಕ್ಷಗಳೆಂಬ ಪುರುಷಾರ್ಥಗಳ ಸಿದ್ಧಿಗೋಸ್ಕರ ನಿಮಗೆ ನಾನು ಲಿಂಗಮೂರ್ತಿಯನ್ನು ಪ್ರತಿಷ್ಠಾಪನೆ ಮಾಡುವ ಕ್ರಮವನ್ನು ಆದಿಯಿಂದ ಸಂಕ್ಷೇಪವಾಗಿ ಹೇಳುವೆನು.

೬-೭. ಭೂಲೋಕದಲ್ಲಿ ಮುಂದೆ ಹೇಳುವ ಶೈಲಾದಿಗಳಲ್ಲಿ ಒಂದಾದ ಬ್ರಹ್ಮವಿಷ್ಣುಮಹೇಶ್ವರಾತ್ಮಕವಾದ ಲಿಂಗವನ್ನು (ಶೈಲವೆಂದರೆ ಶಿಲೆಯಿಂದ ನಿರ್ಮಿತವಾದುದು ಎಂದರ್ಥವು.) ಶಾಸ್ತ್ರೋಕ್ತ ಕ್ರಮದಿಂದ ಮಾಡಿಸಬೇಕು. ಲಿಂಗವನ್ನು ಸುವರ್ಣದಿಂದಲಾಗಲೀ, ಶಿಲೆಯಿಂದಲಾಗಲೀ, ಬೆಳ್ಳಿಯಿಂದಲಾಗಲೀ, ತಾಮ್ರದಿಂದಲಾಗಲೀ, ಮಾಡಿಸಬೇಕು. ಆದರೊಂದಿಗೆ ಪೀಠವನ್ನೂ ಮತ್ತು ಸೋಮಸೂತ್ರವನ್ನೂ,

ಹೇಮರತ್ನಮಯಂ ವಾಽಪಿ ರಾಜತಂ ತಾಮ್ರಜಂ ತು ವಾ ।
ಸವೇದಿಕಂ ಸಸೂತ್ರಂ ಚ ಸಮ್ಯಗ್ವಿಸ್ತೃತ ಮಸ್ತಕಂ ॥ ೭ ॥
ವಿಶೋಧ್ಯ ಸ್ಥಾಪಯೇದ್ಭಕ್ತ್ಯಾ ಸವೇದಿಕ ಮನುತ್ತಮಂ ।
ಲಿಂಗವೇದೀ ಉಮಾ ದೇವೀ ಲಿಂಗಂ ಸಾಕ್ಷಾನ್ಮಹೇಶ್ವರಃ ॥ ೮ ॥
ತಯೋಃ ಸಂಪೂಜನಾದೇವ ದೇವೀ ದೇವಶ್ಚ ಪೂಜಿತೌ ।
ಪ್ರತಿಷ್ಠಯಾ ಚ ದೇವೇಶೋ ದೇವ್ಯಾ ಸಾರ್ಧಂ ಪ್ರತಿಷ್ಠಿತಃ ॥ ೯ ॥
ತಸ್ಮಾತ್ಸವೇದಿಕಂ ಲಿಂಗಂ ಸ್ಥಾಪಯೇತ್ ಸ್ಥಾಪಕೋತ್ತಮಃ ॥೧೦॥
ಮೂಲೇ ಬ್ರಹ್ಮಾ ವಸತಿ ಭಗವಾನ್ಮಧ್ಯ ಭಾಗೇ ಚ ವಿಷ್ಣು ।
ಸರ್ವೇಶಾನಃ ಪಶುಪತಿ ರಜೋ ರುದ್ರಮೂರ್ತಿರ್ವರೇಣ್ಯಃ ॥
ತಸ್ಮಾಲ್ಲಿಂಗಂ ಗುರುತರತರಂ ಪೂಜಯೇತ್ಸ್ಥಾಪಯೇದ್ವಾ ।
ಯಸ್ಮಾತ್ಪೂಜ್ಯೋ ಗಣಪತಿರಸೌ ದೇವಮುಖ್ಯೈಃ ಸಮಸ್ತೈಃ ॥

---

ಮಾಡಿಸಬೇಕು. ಹೀಗೆ ಮೇಲೆ ಹೇಳಿದ ಕ್ರಮವನ್ನನುಸರಿಸಿ ಶುಭ್ರವಾದ ಪ್ರದೇಶದಲ್ಲಿ ಶ್ರೇಷ್ಠವಾದ ಆ ಲಿಂಗವನ್ನು ಪೀಠಸಹಿತವಾಗಿ ಭಕ್ತಿಪುರಸ್ಸರವಾಗಿ ಸ್ಥಾಪಿಸಬೇಕು.

೮–೧೦. ಲಿಂಗದ ಪೀಠವೇ ಸಾಕ್ಷಾತ್ ಪಾರ್ವತಿಯಸ್ವರೂಪವೂ, ಲಿಂಗವೇ ಸಾಕ್ಷಾತ್ಪರಮೇಶ್ವರಸ್ವರೂಪವಾಗಿಯೂ, ಇರುತ್ತದೆ. ಪೀಠಸಹಿತವಾದ ಲಿಂಗವನ್ನೂ ಪೂಜಿಸೋಣದರಿಂದಲೇ ಈಶ್ವರನನ್ನೂ ಮತ್ತು ಪಾರ್ವತಿಯನ್ನೂ ಸಹ ಪೂಜಿಸಿದಂತೆಯೇ ಆಗುವುದು. ಪ್ರತಿಷ್ಠೆಮಾಡುವಾಗಲೇ ಈಶ್ವರನೂ, ಪಾರ್ವತಿಯೊಂದಿಗೇ ಪ್ರತಿಷ್ಠೆ ಮಾಡಲ್ಪಟ್ಟವರುವನು. ಆದುದರಿಂದ ಲಿಂಗಪ್ರತಿಷ್ಠಾಪನೆಯ ಕ್ರಮವನ್ನು ತಿಳಿದ ಬುದ್ಧಿವಂತನಾದ ಮನುಷ್ಯನು ಪೀಠಸಹಿತವಾಗಿಯೇ ಲಿಂಗವನ್ನು ಸ್ಥಾಪನೆ ಮಾಡಬೇಕು.

೧೧. ಲಿಂಗದ ಮೂಲಭಾಗದಲ್ಲಿ ಬ್ರಹ್ಮನೂ, ಮಧ್ಯಭಾಗದಲ್ಲಿ ವಿಷ್ಣುವೂ, ಅಗ್ರಭಾಗದಲ್ಲಿ ಪಶುಪತಿಯೂ, ಉತ್ಪತ್ತಿರಹಿತನೂ, ಆದ ರುದ್ರನೂ, ವಾಸಮಾಡುತ್ತಾರೆ. ಪಂಚವಿಂಶತಿ ತತ್ವಗಳಿಗೆ ಅಧಿಪತಿಯಾದ ಶಿವನು ದೇವತೆಗಳೇ ಮೊದಲಾದ ಸಮಸ್ತರಿಗೂ, ಪೂಜಾರ್ಹನಾಗಿರುವನು. ಆದುದರಿಂದ ಲಿಂಗವನ್ನು ಸ್ಥಾಪನೆಮಾಡಿ ಪೂಜೆಮಾಡಬೇಕು.

ಗಂಧೈಃ ಸ್ರಗ್ಧೂಪ ದೀಪ್ಯೈಃ ಸ್ನಪನ ಹುತಬಲಿ ಸ್ತೋತ್ರಮಂತ್ರೋಪ
ಹಾರೈಃ ।
ನಿತ್ಯಂ ಯೇಽಭ್ಯರ್ಚಯಂತಿ ತ್ರಿದಶವರತನುಂ ಲಿಂಗಮೂರ್ತಿಂ
ಮಹೇಶಂ ॥
ಗರ್ಭಾಧಾನಾದಿ ನಾಶ ಕ್ಷಯ ಭಯ ರಹಿತಾಃ ದೇವಗಂಧರ್ವ
ಮುಖ್ಯೈಃ ।
ಸಿದ್ಧೈರ್ವಂದ್ಯಾಶ್ಚ ಪೂಜ್ಯಾಃ ಗಣವರನಮಿತಾಸ್ತೇ ಭವಂತ್ಯ
ಪ್ರಮೇಯಾಃ ॥೧೨॥

ತಸ್ಮಾದ್ಭಕ್ತ್ಯೋಪಚಾರೇಣ ಸ್ಥಾಪಯೇ ತ್ಪರಮೇಶ್ವರಂ ।
ಪೂಜಯೇಚ್ಚ ವಿಶೇಷೇಣ ಲಿಂಗಂ ಸರ್ವಾರ್ಥ ಸಿದ್ಧಯೇ ॥೧೩॥

---

೧೨. ಯಾರು ಗಂಧ, ಮಾಲ್ಯ, ಧೂಪ, ದೀಪ, ಸ್ನಾನ, ಬಲಿ, ಹೋಮ, ಸ್ತೋತ್ರ, ಮಂತ್ರ, ಮತ್ತು ನೈವೇದ್ಯ ಇವುಗಳಿಂದ ದೇವೇಶನಾದ ಲಿಂಗ ರೂಪಿಯಾದ ಮಹೇಶ್ವರನನ್ನು ಪೂಜಿಸುತ್ತಾರೋ ಅವರು ಗರ್ಭವಾಸ ಮೊದಲುಗೊಂಡು ನಾಶಕ್ಷಯಭಯ ಮುಂತಾದದುಃಖಗಳಿಂದ ವಿನಿರ್ಮು ಕ್ತರಾಗಿ ಗಂಧರ್ವ ಪ್ರಮುಖರಿಂದಲೂ, ಸಿದ್ಧರಿಂದಲೂ, ಮತ್ತು ಪ್ರಮಥಗಣಗಳಿಂದಲೂ ನಮಸ್ಕರಿಸ್ಪಟ್ಟವರಾಗಿ ಶಿವಸಾಯುಜ್ಯವನ್ನು ಹೊಂದುತ್ತಾರೆ. (ಅಪ್ರಮೇಯಾಃ ಎಂದರೆ ಪ್ರತ್ಯಕ್ಷಾದಿ ಪ್ರಮಾಣಗಳಿಗೆ ಅಗೋಚರನು ಎಂದರ್ಥವು. ನಿಷ್ಕ್ರಿಯಾಕನೂ, ನಿರ್ಗುಣನೂ, ಆದ ಪರಬ್ರಹ್ಮ ಸ್ವರೂಪಿಯಾದ ಶಿವನು ಅಪ್ರಮೇಯನು ಎಂದು ಶ್ರುತಿ ಸ್ಮೃತಿ ಪುರಾಣಗಳಲ್ಲಿ ಹೇಳಲ್ಪಟ್ಟಿದೆ. ಆದುದರಿಂದ ಆ ಶಿವನನ್ನೂ ಯಾರು ಪೂಜಿಸುತ್ತಾರೋ ಅವರು ಅಪ್ರಮೇಯರಾಗುತ್ತಾರೆ. ಎಂದರೆ ಶಿವಸಾಯುಜ್ಯವನ್ನೇ ಹೊಂದುತ್ತಾರೆ ಎಂದರ್ಥವು)

೧೩. ಆದುದರಿಂದ ಭಕ್ತಿಯಿಂದಲೂ, ತನಗಿಂತ ಶಿವನು ಉತ್ಕೃಷ್ಟನು ಎಂಬಭಾವನೆಯಿಂದಲೂ, ಲಿಂಗಮೂರ್ತಿ ಯಾದ ಪರಮೇಶ್ವರ ನನ್ನು ಸ್ಥಾಪಿಸಬೇಕು. ಮತ್ತು ಮುಖ್ಯವಾಗಿ ಸಕಲ ಅಭೀಷ್ಟಗಳ ಸಿದ್ಧಿ ಗೋಸ್ಕರ ಆ ಲಿಂಗಮೂರ್ತಿಯನ್ನೂ ಪೂಜಿಸಬೇಕು.

ಸಮಭ್ಯರ್ಚ್ಯ ಸ್ಥಾಪಯೇ ಲ್ಲಿಂಗಂ ತೀರ್ಥಮಧ್ಯೇ ಶಿವಾಸನೇ ।
ಕೂರ್ಚ ವಸ್ತ್ರಾದಿಭಿ ರ್ಲಿಂಗಂ ಆಚ್ಛಾದ್ಯ ಕಲಶೈಃ ಪುನಃ ॥೧೪॥
ಲೋಕಪಾಲಾದಿ ದೈವತ್ಯೈಃ ಸಕೂರ್ಚ್ಯೈಃ ಸಾಕ್ಷತೈಃ ಶುಭೈಃ ।
ಉತ್ಕೂರ್ಚ್ಯೈಃ ಸ್ವಸ್ತಿಕಾದ್ಯೈಶ್ಚ ಚಿತ್ರತಂತುಕ ವೇಷ್ಟಿತೈಃ ॥೧೫॥
ವಜ್ರಾದಿಕಾ ಯುಧೋಪೇತೈಃ ಸವಸ್ತ್ರೈಃ ಸಪಿಧಾನಕೈಃ ।
ಲಕ್ಷಯೇ ತ್ಸರಿತೋ ಲಿಂಗ ಮೀಶಾನೇನ ಪ್ರತಿಷ್ಠಿತಂ ॥೧೬॥
ಧೂಪ ದೀಪ ಸಮೋಪೇತಂ ವಿತಾನ ವಿತತಾಂಬರಂ ।
ಲೋಕಪಾಲ ಧ್ವಜೈ ಶ್ಚೈವ ಗಜಾದಿ ಮಹಿಷಾದಿಭಿಃ ॥೧೭॥
ಚಿತ್ರಿತೈಃ ಪೂಜಿತೈಶ್ಚೈವ ದರ್ಭಮಾಲಾ ಚ ಶೋಭನಾ ।
ಸರ್ವ ಲಕ್ಷಣ ಸಂಪೂರ್ಣಾ ತಯಾ ಬಾಹ್ಯೇ ಚ ವೇಷ್ಟಯೇತ್ ॥೧೮॥

---

೧೪–೧೬. ಈಗ ಲಿಂಗವನ್ನು ಪೂಜಿಸಿ ಸ್ಥಾಪನೆ ಮಾಡುವ ಸ್ಥಳವನ್ನು ಹೇಳುತ್ತಾರೆ. ಮೊದಲು ಲಿಂಗವನ್ನು ಅಭಿಷೇಕಮಾಡಿ ಬಳಿಕ ಅದನ್ನು ಪರಿಷ್ಕರಿಸಲ್ಪಟ್ಟ ಭೂಮಿಯಲ್ಲಿ (ದೇವಸ್ಥಾನದಲ್ಲಿ.) ಪೀಠದ ಮೇಲೆ ಸ್ಥಾಪನೆ ಮಾಡಬೇಕು. ಬಳಿಕ ಕೂರ್ಚ ವಸ್ತ್ರ ಗಂಧ ಮಾಲಿಕೆಗಳಿಂದ ಲಿಂಗವನ್ನು ಆಚ್ಛಾದನೆಮಾಡಿ, ವಜ್ರಾದಿ ಆಯುಧ ಧಾರಿಗಳಾದ ಇಂದ್ರಾದಿ ಅಷ್ಟದಿಕ್ಪಾಲಕರೂ ಬ್ರಾಹ್ಮ್ಯಾದಿ ಸಪ್ತಮಾತೃಗಳೂ ಇವರಿಂದ ಆವಾಹನ ಮಾಡಲ್ಪಟ್ಟ ಕೂರ್ಚಗಳಿಂದಲೂ ಮತ್ತು ಮಂತ್ರಾಕ್ಷತೆಗಳಿಂದಲೂ, ಅಲಂಕರಿಸಲ್ಪಟ್ಟ ಮೇಲುಮುಖವಾಗಿ ಸ್ವಸ್ತಿಕಾ ಕಾರವಾಗಿ ಸ್ಥಾಪಿಸಲ್ಪಟ್ಟ ಕೂರ್ಚಗಳುಳ್ಳ ವಸ್ತ್ರಾದಿಗಳಿಂದ ಆಚ್ಛಾದಿಸಲ್ಪಟ್ಟ ಕಲಶಗಳನ್ನು ಸ್ಥಾಪಿಸಿ, ಈಶ್ವರನ ಭಾವನೆಯಿಂದ ಪ್ರತಿಷ್ಠೆಮಾಡಲ್ಪಟ್ಟ ಲಿಂಗವನ್ನು ರಕ್ಷಿಸಬೇಕು. (ಅಸ್ಪೃಶ್ಯತೆ ಮುಂತಾದವುಗಳಾಗದಂತೆ ಲಿಂಗವನ್ನು ಜಾಗರೂಕತೆಯಿಂದ ನೋಡಿಕೊಳ್ಳಬೇಕೆಂದರ್ಥವು.)

೧೭–೧೮. ವಿಶಾಲವಾದ ಬಟ್ಟೆಯಿಂದ ಮೇಲುಕಟ್ಟನ್ನು ಕಟ್ಟಿ ಅದನ್ನು ಧೂಪದೀಪಾದಿಗಳಿಂದ ಪೂಜಿಸಬೇಕು. ಇದಲ್ಲದೆ ಇಂದ್ರಾದಿ ಲೋಕಪಾಲಕರ ಧ್ವಜಗಳಾದ ಗಜಾದಿಗಳಿಂದ ಆ ವಸ್ತ್ರವನ್ನು ಚಿತ್ರಿಸಿ ಪೂಜಿಸಬೇಕು. ಮತ್ತು ಆಮೇಲುಕಟ್ಟನ್ನು ದರ್ಭೆಯ ಮೌಂಜಿಯಿಂದ ಒಳಹೊರಭಾಗಗಳಲ್ಲಿ ವೇಷ್ಟನೆ ಮಾಡಬೇಕು.

ತತೋಽಧಿ ವಾಸಯೇತ್ತೋಯೇ ಧೂಪ ದೀಪ ಸಮನ್ವಿತೇ ।
ಪಂಚಾಹಂ ವಾ ತ್ರ್ಯಹಂ ವಾಽಥ ಏಕರಾತ್ರ ಮಥಾಪಿ ವಾ ॥೧೯॥
ವೇದಾಧ್ಯಯನ ಸಂಪನ್ನೋ ನೃತ್ಯಗೀತಾದಿ ಮಂಗಲೈಃ ।
ಕಿಂಕಿಣೀ ರವ ಕೋಪೇತಂ ತಾಲ ವೀಣಾರವೈರಪಿ ॥೨೦॥
ಉತ್ಥಾಪ್ಯ ಸ್ವಸ್ತಿಕಂ ಧ್ಯಾಯೇ ನ್ಮಂಡಪೇ ಲಕ್ಷಣಾನ್ವಿತೇ ।
ಸಂಸ್ಕೃತೇ ವೇದಿ ಸಂಯುಕ್ತೇ ನವ ಕುಂಡೇನ ಸಂವೃತೇ ॥೨೧॥
ಪೂರ್ವೋಕ್ತ ವಿಧಿನಾ ಯುಕ್ತೇ ಸರ್ವಲಕ್ಷಣ ಸಂಯುತೇ ।
ಅಷ್ಟಮಂಡಲ ಸಂಯುಕ್ತೇ ದಿಗ್ಗಜಾಷ್ಟಕ ಸಂಯುತೇ ॥೨೨॥
ಪೂರ್ವೋಕ್ತ ಲಕ್ಷಣೋ ಪೇತೈಃ ಕುಂಡೈಃ ಪ್ರಾಗಾದಿತಃ ಕ್ರಮಾತ್।
ಪ್ರಧಾನಂ ಕುಂಡ ಮೀಶಾನ್ಯಾಂ ಚತುರಸ್ರಂ ವಿಧೀಯತೇ ॥೨೩॥

---

೧೯–೨೦. ಅನಂತರ ಜಲವನ್ನು ಧೂಪ ದೀಪಾದಿಗಳಿಂದ ಅರ್ಚಿಸಿ, ಅದರಲ್ಲಿ ಲಿಂಗವನ್ನು ಜಲಾಧಿವಾಸ ಮಾಡಿಸಬೇಕು. ಐದು ದಿವಸಗಳಾಗಲೀ, ಮೂರು ಅಥವಾ ಒಂದು ದಿವಸವಾಗಲೀ, ಜಲಾಧಿ ವಾಸವನ್ನು ಮಾಡಿಸಬೇಕು. ನೃತ್ಯ ಗೀತಾದಿಗಳಿಂದಲೂ, ತಾಳ ವಿಣಾದಿವಾದ್ಯಗಳಿಂದಲೂ ಕೂಡಿರುವ ಆ ಕಾಲದಲ್ಲಿ ವೇದಾಧ್ಯಯನ ಸಂಪನ್ನನಾದ ಯಜಮಾನನು ಲಿಂಗಪ್ರತಿಷ್ಠಾಪನೆಗೆ ಯೋಗ್ಯವಾದ ಮುಹೂರ್ತವನ್ನು ನಿರೀಕ್ಷಿಸುತ್ತಾ ತದೇಕಮನಸ್ಕನಾಗಿರುವವನಾಗಿ,

೨೧–೨೬. ಪುಣ್ಯಾಹವಾಚನವನ್ನು ಮಾಡಿ, ಪೂಜಾದಿಗಳಿಂದ ಸಂಸ್ಕರಿಸಲ್ಪಟ್ಟ, ವೇದಿಕೆಗಳಿಂದಯುಕ್ತವಾದ, ಒಂಬತ್ತು ಕುಂಡಗಳಿಂದ ಕೂಡಿರುವ, ಅಷ್ಟದಿಕ್ಪಾಲಕರ ಎಂಟು ಮಂಡಲಗಳಿಂದ ಕೂಡಿರುವ, ಮಂಡಲದಲ್ಲಿ ಶಿವನನ್ನು ಸ್ಥಾಪಿಸಬೇಕು. ನವಕುಂಡಗಳ ಮಧ್ಯೆ ಪ್ರಧಾನ ಕುಂಡವನ್ನು ಈಶಾನ್ಯದಿಕ್ಕಿನಲ್ಲಿ ಶಿವನಿಗಾಗಿ ಚಚ್ಚೌಕವಾಗಿ ನಿರ್ಮಿಸಬೇಕು. ಅಥವಾ ಐದು ಕುಂಡಗಳುಳ್ಳ ಒಂದೇ ಸ್ಥಂಡಿಲವನ್ನಾದರೂ ನಿರ್ಮಿಸಬಹುದು. ಮಂಟಪವನ್ನು ಶಿವಾರ್ಚನೆಗೆ ಯೋಗ್ಯವಾದ

ಅಥವಾ ಪಂಚಕುಂಡೈಕಂ ಸ್ಥಂಡಿಲಂ ಚೈಕಮೇವಚ ।
ಯಜ್ಞೋಪಕರಣೈಃ ಸರ್ವೈಃ ಶಿವಾಚಾರ್ಯಾಂ ಹಿ ಭೂಷಣೈಃ॥೨೪॥
ವೇದಿಮಧ್ಯೇ ಮಹಾಶಯ್ಯಾಂ ಪಂಚತೂಲೀ ಪ್ರಕಲ್ಪಿತಾಂ ॥೨೫॥
ಕಲ್ಪಯೇತ್ಕಾಂಚನೋಪೇತಾಂ ಸಿತವಸ್ತ್ರಾವ ಗುಂಠಿತಾಂ ।
ಪ್ರಕಲ್ಪ್ಯೈವಂ ಶಿವಂ ಚೈವ ಸ್ಥಾಪಯೇತ್ಪರಮೇಶ್ವರಂ ॥೨೬॥
ಪ್ರಾಕ್ಶಿರಸ್ಕಂ ನ್ಯಸೇಲ್ಲಿಂಗಂ ಈಶಾನೇನ ಯಥಾವಿಧಿ ।
ರತ್ನನ್ಯಾಸೇ ಕೃತೇ ಪೂರ್ವಂ ಕೇವಲಂ ಕಲಶಂ ನ್ಯಸೇತ್ ॥೨೭॥
ಲಿಂಗ ಮಾಚ್ಛಾದ್ಯ ವಸ್ತ್ರಾಭ್ಯಾಂ ಕೂರ್ಚೇನ ಚ ಸಮಂತತಃ ।
ರತ್ನ ನ್ಯಾಸೇ ಪ್ರಸಕ್ತೇಽಥ ವಾಮಾದ್ಯಾ ನವಶಕ್ತಯಃ ॥೨೮॥
ನವರತ್ನಂ ಹಿರಣ್ಯಾದ್ಯೈಃ ಪಂಚಗವ್ಯೇನ ಸಂಯುತೈಃ ।
ಸರ್ವಧಾನ್ಯ ಸಮೋಪೇತಂ ಶಿಲಾಯಾ ಮಪಿ ವಿನ್ಯಸೇತ್ ॥೨೯॥

---

ಪುಷ್ಪಾದಿಗಳಿಂದ ಅಲಂಕರಿಸಿ ಮಂಟಪದಲ್ಲಿರುವ ವೇದಿಕೆಯ ಮಧ್ಯಭಾಗ ದಲ್ಲಿ ಅತ್ಯುನ್ನತವಾದ, ಸುವರ್ಣಮಯವಾದ ಮತ್ತು ಶ್ವೇತವಸ್ತ್ರದಿಂದ ಆಚ್ಛಾದಿಸಲ್ಪಟ್ಟ ಪೀಠವನ್ನು ನಿರ್ಮಿಸಿ, ಆ ಪೀಠದಲ್ಲಿ ಶಿವನನ್ನು ಸ್ಥಾಪಿಸಬೇಕು.

೨೭. ಲಿಂಗವನ್ನು ಈಶಾನ್ಯದಿಕ್ಕಿನಿಂದ ಪೂರ್ವಾಭಿಮುಖವಾಗಿ ಸ್ಥಾಪನೆಮಾಡಿ, ನವರತ್ನಗಳ ನ್ಯಾಸವನ್ನುಮಾಡಿ ಪ್ರಧಾನ ಕಲಶವನ್ನು ನ್ಯಾಸಮಾಡಬೇಕು.

೨೮. ಲಿಂಗವನ್ನು ವಸ್ತ್ರದ್ವಯದಿಂದಲೂ, ಮತ್ತು ಕೂರ್ಚದಿಂದ ಲೂ, ಆಚ್ಛಾದನೆ ಮಾಡಿ, ರತ್ನನ್ಯಾಸವನ್ನು ಮಾಡಿದತರುವಾಯ ವಾಮಾದಿನವಶಕ್ತಿಗಳನ್ನು ಸ್ಥಾಪಿಸಬೇಕು.

೨೯. ಪಂಚಗವ್ಯಗಳಿಂದ ಸಹಿತವಾದ ಹಿರಣ್ಯಾದಿಗಳೊಡನೆ ಸಕಲ ಧಾನ್ಯಗಳಮೇಲೆ ಸ್ಥಾಪಿಸಿರುವ ನವರತ್ನವನ್ನು ಆಧಾರ ಶಿಲೆಯಲ್ಲಿ ನ್ಯಾಸ ಮಾಡಬೇಕು.

ಸ್ಥಾಪಯೇ ದ್ಬ್ರಹ್ಮ ಲಿಂಗಂ ಹಿ ಶಿವಗಾಯತ್ರಿ ಸಂಯುತಂ ।
ಕೇವಲಂ ಪ್ರಣವೇನಾಪಿ ಸ್ಥಾಪಯೇಚ್ಛಿವ ಮವ್ಯಯಂ ॥೩೦॥

ಬ್ರಹ್ಮ ಜಜ್ಞಾನ ಮಂತ್ರೇಣ ಬ್ರಹ್ಮಭಾಗಂ ಪ್ರಭೋ ಸ್ತಥಾ ।
ವಿಷ್ಣುಗಾಯತ್ರಿಯಾ ಭಾಗಂ ವೈಷ್ಣವಂ ತ್ವಥ ವಿನ್ಯಸೇತ್ ॥೩೧॥

ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀ ಮಹಿ ।
ತನ್ನೋ ವಿಷ್ಣುಃ ಪ್ರಚೋದಯಾತ್ ॥
ಸೂತ್ರೇ ತತ್ವತ್ರಯೋ ಪೇತೇ ಪ್ರಣವೇನ ಪ್ರವಿನ್ಯ ಸೇತ್ ।
ಸರ್ವಂ ನಮಃ ಶಿವಾಯೇತಿ ನಮೋ ಹಂಸಃ ಶಿವಾಯಚ ॥೩೨॥

ರುದ್ರಾಧ್ಯಾಯೇನ ವಾ ಸರ್ವಂ ಪರಿಮೃಜ್ಯ ಚ ವಿನ್ಯಸೇತ್ ।
ಸ್ಥಾಪಯೇ ದ್ಬ್ರಹ್ಮಭಿಶ್ಚೈವ ಕಲಶಾನ್ ವೈ ಸಮಂತತಃ ॥೩೩॥

---

೩೦. ಪಂಚ ಬ್ರಹ್ಮಾತ್ಮಕವಾದ ಶಿವಲಿಂಗವನ್ನು ಶಿವಗಾಯತ್ರಿಯಿಂದ ಸ್ಥಾಪನೆ ಮಾಡಬೇಕು. ಶಿವಲಿಂಗವನ್ನು ಕೇವಲ ಪ್ರಣವದಿಂದಲೂ ಸ್ಥಾಪಿಸಬಹುದು.

೩೧–೩೨. ವೇದಿಕೆಯ ಕೆಳಗೆಶಿವನಬ್ರಹ್ಮಭಾಗವನ್ನು "ಬ್ರಹ್ಮಜಜ್ಞಾನಂ ಪ್ರಥಮಂ ಪುರಸ್ತಾ ದ್ವಿಸೀಮತಃ ಸುರುಚೋ ವೇನ ಆವಃ" ಎಂಬೀ ಮಂತ್ರದಿಂದ ವಿನ್ಯಾಸಮಾಡಬೇಕು. ವೇದಿಕೆಯ ಮಧ್ಯದ ವೈಷ್ಣವ ಭಾಗವನ್ನು ತನ್ನೋ ವಿಷ್ಣುಃ ಪ್ರಚೋದಯಾತ್ ಎಂಬ ಮಂತ್ರದಿಂದ ನ್ಯಾಸಮಾಡಬೇಕು. ತತ್ತ್ವತ್ರಯ ಯುಕ್ತವಾದ ವೇದಿಕೆಯ ಊರ್ಧ್ವ ಪೂರ್ವಮತ್ತು ಪಶ್ಚಿಮ ಭಾಗಗಳಲ್ಲಿ ಓಂಕಾರದಿಂದ ವಿನ್ಯಾಸ ಮಾಡಬೇಕು. ಅದಿಲ್ಲದಿದ್ದರೆ ಸಕಲ ಭಾಗಗಳಲ್ಲಿಯೂ, "ನಮಃ ಶಿವಾಯ" ಎಂಬ ಮಂತ್ರದಿಂದಾಗಲೀ, "ನಮೋಹಂಸಃ ಶಿವಾಯ," ಎಂಬ ಮಂತ್ರದಿಂದಾಗಲೀ, ರುದ್ರಾಧ್ಯಾಯದಿಂದಲಾಗಲೀ ಸ್ಪರ್ಶಿಸಿ, ವಿನ್ಯಾಸ ಮಾಡಬೇಕು.

೩೩. ಪಂಚಬ್ರಹ್ಮಮಂತ್ರಗಳಿಂದ ವೇದಿಕೆಯ ಸುತ್ತಲೂ ಕಲಶಗಳನ್ನು ಸ್ಥಾಪಿಸಬೇಕು.

ವೇದಿ ಮಧ್ಯೇ ನ್ಯಸೇತ್ಸರ್ವಾ ನ್ಪೂರ್ವೋಕ್ತ ವಿಧಿಸಂಯುತಾನ್ ।
ಮಧ್ಯ ಕುಂಭೇ ಶಿವಂ ದೇವೀಂ ದಕ್ಷಿಣೇ ಪರಮೇಶ್ವರೀಂ ॥೩೪॥
ಸ್ಕಂದಂ ತಯೋಶ್ಚ ಮಧ್ಯೇ ತು ಸ್ಕಂದ ಕುಂಭೇ ಸುಚಿತ್ರಿತೇ ।
ಬ್ರಹ್ಮಾಣಂ ಸ್ಕಂದ ಕುಂಭೇವಾ ಈಶಕುಂಭೇ ಹರಿಂ ತಥಾ ॥೩೫॥
ಅಥ ಶಿವಕುಂಭೇವಾಚ ಬ್ರಹ್ಮಾಂಗಾನಿ ಚ ವಿನ್ಯಸೇತ್ ।
ಶಿವೋ ಮಹೇಶ್ವರ ಶ್ಚೈವ ರುದ್ರೋ ವಿಷ್ಣುಃ ಪಿತಾಮಹಃ ॥೩೬॥
ಬ್ರಹ್ಮಾಣ್ಯೇವಂ ಸಮಾಸೇನ ಹೃದಯಾದೀನಿ ಚಾಂಬಿಕಾ ।
ವೇದಿಮಧ್ಯೇ ನ್ಯಸೇತ್ಸರ್ವಾ ನ್ಪೂರ್ವೋಕ್ತ ವಿಧಿ ಸಂಯುತಾನ್ ॥
ವರ್ಧನ್ಯಾಂ ಸ್ಥಾಪಯೇ ದ್ದೇವೀಂ ಗಂಧತೋಯೇನ ಪೂರ್ಯ ಚ ।
ಹಿರಣ್ಯಂ ರಜತಂ ರತ್ನಂ ಶಿವಕುಂಭೇ ಪ್ರವಿನ್ಯಸೇತ್ ॥೩೮॥

---

೩೪-೩೫ ಈಗ ಪ್ರತಿಮಾ ಸ್ಥಾಪನ ವಿಧಿಯನ್ನು ಹೇಳುತ್ತಾರೆ. ವೇದಿಕೆಯ ಮಧ್ಯ ಈ ಮುಂದೆ ಹೇಳುವರೀತಿಯಲ್ಲಿ ಸರ್ವರನ್ನೂ ನ್ಯಾಸ ಮಾಡಬೇಕು. ಮಧ್ಯದಲ್ಲಿರುವ ಕಲಶದಲ್ಲಿ ಶಿವನನ್ನೂ, ದಕ್ಷಿಣದಿಕ್ಕಿನ ಕಲಶದಲ್ಲಿ ಪಾರ್ವತಿಯನ್ನೂ, ಅವೆರಡರ ಮಧ್ಯದಲ್ಲಿ ಷಣ್ಮುಖನನ್ನೂ, ಅಥವಾ ಸ್ಕಂದ ಕುಂಭದಲ್ಲಿ ಬ್ರಹ್ಮನನ್ನೂ, ಈಶಾನ್ಯದಲ್ಲಿರುವ ಕುಂಭದಲ್ಲಿ ವಿಷ್ಣುವನ್ನೂ, ಇಲ್ಲದಿದ್ದಲ್ಲಿ ಶಿವನ ಕುಂಭದಲ್ಲಿ ಬ್ರಹ್ಮಾಂಗಗಳನ್ನಾಗಲೀ ವಿನ್ಯಾಸಮಾಡಬೇಕು.

೩೬-೩೭. ಶಿವ, ಮಹೇಶ್ವರ, ರುದ್ರ, ವಿಷ್ಣು, ಪಿತಾಮಹ, ಈ ಐದು ಪಂಚಬ್ರಹ್ಮರ ಹೆಸರು. ಇವರನ್ನು ವೇದಿ ಮಧ್ಯದಲ್ಲಿ ನ್ಯಾಸಮಾಡ ಬೇಕು. ಮತ್ತು ಹೃದಯಾದಿಗಳಲ್ಲಿ ಅಂಬಿಕೆಯನ್ನು ನ್ಯಾಸಮಾಡ ಬೇಕು.

೩೮. ಖಡ್ಗದಂತೆ ಆಕಾರವುಳ್ಳ ವೇದಿಕೆಯಲ್ಲಿ ದೇವಿಯಾದ ಪಾರ್ವತಿ ಯನ್ನು ಸ್ಥಾಪಿಸಿ ಶಿವಪ್ರತಿಮೆಯನ್ನು ಸ್ಥಾಪಿಸಿರುವ ಕುಂಭದಲ್ಲಿ ಸುವರ್ಣ ವನ್ನೂ, ಬೆಳ್ಳಿಯನ್ನೂ, ರತ್ನವನ್ನೂ ನಿಕ್ಷೇಪಮಾಡಬೇಕು.

ವರ್ಧನ್ಯಾಮುಪಿ ಯತ್ನೇನ ಗಾಯತ್ರ್ಯಂಗೈಶ್ಚ ಸುವ್ರತಾಃ ।
ವಿದ್ಯೇಶ್ವರಾ ನ್ದಿಶಾಂ ಕುಂಭೇ ಬ್ರಹ್ಮಕೂರ್ಚೇನ ಪೂರಿತೇ ॥೩೯॥

ಅನಂತೇಶಾದಿ ದೇವಾಂಶ್ಚ ಪ್ರಣವಾದಿ ನಮೋಽಂತಕಂ ।
ನವವಸ್ತ್ರಂ ಪ್ರತಿಘಟೆ ಮುಷ್ಟಕುಂಭೇಷು ದಾಪಯೇತ್ ॥೪೦॥

ವಿದ್ಯೇ ಶ್ವರಾಣಾಂ ಕುಂಭೇಷು ಹೇಮರತ್ನಾದಿ ವಿನ್ಯಸೇತ್ ।
ವಸ್ತ್ರಕ್ರಮೇಣ ಹೋತವ್ಯಂ ಗಾಯತ್ರ್ಯಂಗ ಕ್ರಮೇಣ ಚ ॥೪೧॥

ಜಯಾದಿ ಸ್ವಿಷ್ಟ ಪರ್ಯಂತಂ ಸರ್ವಂ ಪೂರ್ವವದಾಚರೇತ್ ।
ಸೇಚಯೇ ಚ್ಛಿವಕುಂಭೇನ ವರ್ಧನ್ಯಾ ವೈಷ್ಣವೇನ ಚ ॥೪೨॥

ಪೈತಾಮಹೇನ ಕುಂಭೇನ ಬ್ರಹ್ಮಭಾಗಂ ವಿಶೇಷತಃ ।
ವಿದ್ಯೇಶ್ವರಾಣಾಂ ಕುಂಭೇನ ಸೇಚಯೇ ತ್ಪರಮೇಶ್ವರಂ ॥೪೩॥

---

೩೯–೪೦, ಖಡ್ಗಾಕಾರವಾದ ವೇದಿಕೆಯಲ್ಲಿರುವ ವರ್ಧನೀ ಕುಂಭದಲ್ಲಿಯೂ, ಗಾಯತ್ರಿಯ ಅಂಗಮಂತ್ರಗಳಿಂದ ಹಿರಣ್ಯಾದಿ ವಿದ್ಯೇಶ್ವರರನ್ನೂ, ಅಷ್ಟದಿಕ್ಪಾಲಕರನ್ನೂ ಆವಾಹನೆ ಮಾಡಬೇಕು. ಮತ್ತು ಕುಂಭವನ್ನು ಬ್ರಹ್ಮಕೂರ್ಚದಿಂದ ಆಚ್ಛಾದನಮಾಡಬೇಕು. ಅನಂತರದಲ್ಲಿ ಈಶ ಮೊದಲಾದ ದೇವತೆಗಳನ್ನೂ ಓಂಕಾರ ಮೊದಲುಗೊಂಡು ನಮಃ" ಎಂಬ ಪರ್ಯಂತವೂ, ವಿನ್ಯಾಸಮಾಡಬೇಕು. ಇದಲ್ಲದೇ ಪ್ರತಿಯೊಂದು ಕಲಶದ ಮೇಲುಭಾಗದಲ್ಲಿಯೂ, ಒಂದೊಂದು ನೂತನವಾದ ವಸ್ತ್ರವನ್ನು ಇಡಬೇಕು.

೪೧. ವಿದ್ಯೇಶ್ವರರ ಕುಂಭದಲ್ಲಿ ಸುವರ್ಣ ಮತ್ತು ರತ್ನಾದಿಗಳನ್ನು ಪ್ರಕ್ಷೇಪ ಮಾಡಬೇಕು. ವಿದ್ಯೇಶ್ವರರನ್ನು ಉದ್ದೇಶಿಸಿ ಈಶಾನಾದಿ ಅಷ್ಟ ದಿಕ್ಪಾಲಕರ ಕ್ರಮದಿಂದ ಗಾಯತ್ರಿಯ ಅಂಗಮಂತ್ರದೊಂದಿಗೆ ಹೋಮ ಮಾಡಬೇಕು. ಹೋಮಮಾಡಿ, ಜಯಾದಿ ಹೋಮದಿಂದ ಮೊದಲುಗೊಂಡು ಸ್ವಿಷ್ಟ ಕೃದ್ಧೋಮದವರೆವಿಗೂ ಪೂರ್ವೋಕ್ತ ಸಾಮಾನ್ಯವಿಧಿಯಿಂದ ನೆರವೇರಿಸಬೇಕು.

೪೨–೪೩. ಶಿವ, ವಿಷ್ಣು, ಪರಮೇಶ್ವರ, ಇವರ ಪ್ರತಿಮೆಯನ್ನು ಸ್ಥಾಪಿಸಿರುವ ಕಲಶಗಳ ಉದಕದಿಂದ ಲಿಂಗವನ್ನು ಅಭಿಷೇಕಮಾಡಬೇಕು. ಮತ್ತು ದೇವಿಯನ್ನೂ, ವಿದ್ಯೇಶ್ವರರನ್ನೂ ಸ್ಥಾಪಿಸಿರುವ ಕಲಶದಿಂದಲೂ, ಶಿವನನ್ನು ಅಭಿಷೇಕ ಮಾಡಬೇಕು.

ವಿನ್ಯಸೇ ತ್ಸರ್ವಮಂತ್ರಾಣಿ ಪೂರ್ವವತ್ಸುಸಮಾಹಿತಃ ।
ಪೂಜಯೇ ತ್ಸ್ನಪನಂ ಕೃತ್ವಾ ಸಹಸ್ರಾದಿಷು ಸಂಭವೈಃ ॥೪೪॥

ದಕ್ಷಿಣಾ ಚ ಪ್ರದಾತವ್ಯಾ ಸಹಸ್ರ ಪಣಮುತ್ತಮಂ ।
ಇತರೇಷಾಂ ತದರ್ಧಂ ಸ್ಯಾತ್‌ತದರ್ಧಂ ವಾ ವಿಧೀಯತೇ ॥೪೫॥

ವಸ್ತ್ರಾಣಿ ಚ ಪ್ರಧಾನಸ್ಯ ಕ್ಷೇತ್ರಭೂಷಣಗೋಧನಂ ।
ಉತ್ಸವಶ್ಚ ಪ್ರಕರ್ತವ್ಯೋ ಹೋಮಯಾಗ ಬಲಿಃ ಕ್ರಮಾತ್ ॥೪೬॥

ನವಾಹಂ ವಾಽಪಿ ಸಪ್ತಾಹಂ ಏಕಾಹಂ ಚ ತ್ರ್ಯಹಂ ತಥಾ ।
ಹೋಮಶ್ಚ ಪೂರ್ವವತ್ಪ್ರೋಕ್ತೋ ನಿತ್ಯಮಭ್ಯರ್ಚ್ಯ ಶಂಕರಂ॥೪೭॥

ಭಾಸ್ಕರಾದೀನಾಂ ದೇವಾನಾಂ ಹೋಮಂ ಪೂರ್ವವ ದೇವತು ।
ಅಭ್ಯಂತರೇ ತಥಾ ಬಾಹ್ಯೇ ವಹ್ನೌ ನಿತ್ಯಂ ಸಮರ್ಚಯೇತ್ ॥೪೮॥

---

೪೪. ಪೂರ್ವೋಕ್ತರೀತಿಯಂತೆ ಚಿತ್ತಸಮಾಧಾನವುಳ್ಳವನಾಗಿ ಈಶಾನಾದಿಮಂತ್ರಗಳನ್ನು ನ್ಯಾಸಮಾಡಿ, ಶಿವನನ್ನು ಕಲಶಗಳಿಂದ ಸಹಸ್ರಾವೃತ್ತಿ ಸ್ನಾನಮಾಡಿಸಿ ಪೂಜಿಸಬೇಕು.

೪೫. ಸಹಸ್ರ ಸುವರ್ಣನಾಣ್ಯಗಳನ್ನು ಶಿವನಿಗೆ ಉತ್ತಮವಾದ ದಕ್ಷಿಣೆಯನ್ನಾಗಿ ಸಮರ್ಪಿಸಬೇಕು. ಮತ್ತು ಸ್ಥಾಪಿಸಿರುವ ಇನ್ನಿತರ ದೇವತೆಗಳಿಗೆ ಅದರಲ್ಲಿ ಅರ್ಧವನ್ನಾಗಲಿ, ಅದರಲ್ಲಿ ಅರ್ಧವನ್ನಾಗಲಿ ದಕ್ಷಿಣೆಯನ್ನಾಗಿ ಸಮರ್ಪಿಸಬೇಕು.

೪೬–೪೭. ಪ್ರಧಾನನಾದ ಶಿವನಿಗೆ ಭೂಮಿಯನ್ನೂ ಒಡವೆಗಳನ್ನೂ, ಗೋವುಗಳನ್ನೂ, ಧನವನ್ನೂ, ಸಮರ್ಪಿಸಬೇಕು. ಮತ್ತು ಉತ್ಸವವನ್ನು ಮಾಡಿಸಿ, ಕ್ರಮವಾಗಿ ಹೋಮ, ಯಾಗ, ಬಲಿ ಇವುಗಳನ್ನು ಮಾಡಬೇಕು. ಪೂರ್ವೋಕ್ತ ರೀತಿಯಲ್ಲಿ ಹೋಮವನ್ನು ಒಂಬತ್ತು ಏಳು, ಮೂರು, ಅಥವಾ ಒಂದುದಿವಸಗಳಾಗಲೀ, ಆಚರಿಸಬೇಕು.

೪೮. ಸೂರ್ಯಾದಿ ದೇವತೆಗಳ ಹೋಮವನ್ನಾದರೋ ಹಿಂದೆ ಹೇಳಿದಂತೇ ಆಚರಿಸಬೇಕು. ಸದಾಕಾಲವೂ ಎಂದರೆ ಶಿವಾಗ್ನಿ ಕಾರ್ಯದ ಕಾಲದಲ್ಲೂ, ಇನ್ನಿತರ ಕಾಲದಲ್ಲಿಯೂ. ಶಿವನನ್ನುದ್ದೇಶಿಸಿ ಅಗ್ನಿಯಲ್ಲಿ ಹೋಮವನ್ನು ಮಾಡಬೇಕು.

ಯ ಏವಂ ಸ್ಥಾಪಯೇಲ್ಲಿಂಗಂ ಸ ಏವ ಪರಮೇಶ್ವರಃ ।
ತೇನ ದೇವಗಣಾ ರುದ್ರಾ ಋಷಯೋಽಪ್ಸರಸ ಸ್ತಥಾ ॥೪೯॥
ಸ್ಥಾಪಿತಾಃ ಪೂಜಿತಾಶ್ಚೈವ ತ್ರೈಲೋಕ್ಯಂ ಸಚರಾಚರಂ ॥೫೦॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ಲಿಂಗಸ್ಥಾಪನ ವಿಧಿ
ನಿರೂಪಣಂ ನಾಮ ಸಪ್ತ ಚತ್ವಾರಿಂಶೋಽಧ್ಯಾಯಃ

---

೪೯–೫೦. ಯಾವನು ಹೀಗೆ ಹೇಳಿದ ಕ್ರಮವನ್ನನುಸರಿಸಿ ಲಿಂಗವನ್ನು ಸ್ಥಾಪಿಸುತ್ತಾನೋ ಅವನು ಸಾಕ್ಷಾತ್ಪರಮೇಶ್ವರನ ಸ್ವರೂಪವುಳ್ಳವನೇ ಆಗುತ್ತಾನೆ. ಅವನಿಂದ ದೇವತೆಗಳೂ, ಏಕಾದಶರುದ್ರರೂ, ಸಕಲ ಋಷಿಗಳೂ, ಅಪ್ಸರಸ್ತ್ರೀಯರು, ಇವರೇ ಮೊದಲಾದವರಿಂದೊಡಗೂಡಿರುವ, ಮೂರು ಲೋಕಗಳೂ ಸ್ಥಾಪಿಸಲ್ಪಟ್ಟಂತೆಯೇ ಮತ್ತು ಪೂಜಿಸಲ್ಪಟ್ಟಂತೆಯೇ ಆಗುತ್ತವೆ.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರ ಭಾಗದಲ್ಲಿ ಲಿಂಗಸ್ಥಾಪನ
ಕ್ರಮ ವಿವರಣೆಯೆಂಬ ನಲವತ್ತೇಳನೆಯ ಅಧ್ಯಾಯವು ಮುಗಿದುದು.

ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
ಅಷ್ಟಾ ಚತ್ವಾರಿಂಶೋಽಧ್ಯಾಯಃ

॥ ಸೂತ ಉವಾಚ ॥

ಸರ್ವೇಷಾಮಪಿ ದೇವಾನಾಂ ಪ್ರತಿಷ್ಠಾಮಪಿ ವಿಸ್ತರಾತ್ ।
ಸ್ವೈ ರ್ಮಂತ್ರೈರ್ಯಾಗ ಕುಂಡಾನಿ ವಿನ್ಯಸ್ಯೈಕೈಕ ಮೇವಚ ॥ ೧ ॥
ಸ್ಥಾಪಯೇ ದುತ್ಸವಂ ಕೃತ್ವಾ ಪೂಜಯೇಚ್ಚ ವಿಧಾನತಃ ।
ಭಾನೋಃ ಪಂಚಾಗ್ನಿನಾ ಕಾರ್ಯಂ ದ್ವಾದಶಾಗ್ನಿ ಕ್ರಮೇಣ ವಾ ॥ ೨ ॥
ಸರ್ವಕುಂಡಾನಿ ವೃತ್ತಾನಿ ಪದ್ಮಾಕಾರಾಣಿ ಸುವ್ರತಾಃ ।
ಅಂಬಾಯಾ ಯೋನಿ ಕುಂಡಂ ಸ್ಯಾ ದ್ವರ್ಧನ್ಯೇಕಾ ವಿಧೀಯತೇ ॥

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ನಲವತ್ತೆಂಟನೆಯ ಅಧ್ಯಾಯವು

೧. ಸೂತನು ಹೇಳಿದನು:–ಎಲೈ ಋಷಿಶ್ರೇಷ್ಠರೇ, ಸಕಲ ದೇವತೆಗಳ ಪ್ರತಿಷ್ಠಾಕ್ರಮವನ್ನು ನಿಮಗೆ ವಿಸ್ತಾರವಾಗಿ ಹೇಳುವೆನು. ತಮ್ಮ ತಮ್ಮ ಶಾಖೆಯಲ್ಲಿ ಹೇಳಲ್ಪಟ್ಟ ಮಂತ್ರಗಳಿಂದ ಯಾಗ ಕುಂಡವನ್ನು ನಿರ್ಮಿಸಿ, ಆ ಕುಂಡಗಳಲ್ಲಿ ಪ್ರತ್ಯೇಕವಾಗಿ ಒಂದೊಂದು ಕುಂಡದಲ್ಲಿಯೂ ಒಂದೊಂದು ದೇವತೆಯನ್ನು ಸ್ಥಾಪನೆಮಾಡಿ, ಉತ್ಸವವನ್ನು ಮಾಡಿಸಿ ವಿಧಿವತ್ತಾಗಿ ಪೂಜಿಸಬೇಕು.

೨. ಪಂಚಾಗ್ನಿಸ್ಥಾಪನೆಯ ಕ್ರಮದಿಂದಾಗಲೀ, ದ್ವಾದಶಾಗ್ನಿ ಸ್ಥಾಪನೆಯ ಕ್ರಮದಿಂದಲಾಗಲೀ, ಸೂರ್ಯನನ್ನು ಸ್ಥಾಪಿಸಬೇಕು.

೩–೪. ಎಲೈ ಋಷಿಶ್ರೇಷ್ಠರೇ, ಸಮಸ್ತಕುಂಡಗಳನ್ನೂ ಪದ್ಮದಂತೆ ವರ್ತುಲಾಕಾರವಾಗಿ ನಿರ್ಮಿಸಬೇಕು. ಪಾರ್ವತಿಗೆ ಯೋನಿಯ ಆಕಾರವುಳ್ಳ ಕುಂಡವನ್ನು ನಿರ್ಮಿಸಬೇಕು. ಅಥವಾ ಖಡ್ಗಾಕಾರವಾದ ಕುಂಡ

ಶಕ್ತೀನಾಂ ಸರ್ವಕಾರ್ಯೇಷು ಯೋನಿ ಕುಂಡಂ ವಿಧೀಯತೇ ।
ಗಾಯತ್ರೀಂ ಕಲ್ಪಯೇಚ್ಛಂಭೋಃ ಸರ್ವೇಷಾಮಪಿ ಯತ್ನತಃ ॥
ಸರ್ವೇ ರುದ್ರಾಂಶಜಾ ಯಸ್ಮಾತ್ತಸ್ಮಾತ್ ಕ್ಷೇಪೇಣ ವದಾಮಿ ವಃ ।

॥ ಗಾಯತ್ರೀ ಪ್ರಭೇದಾಃ ॥

ತತ್ಪುರುಷಾಯ ವಿದ್ಮಹೇ ವಾಗ್ವಿಶುದ್ಧಾಯ ಧೀಮಹಿ ।
ತನ್ನಃ ಶಿವಃ ಪ್ರಚೋದಯಾತ್ ॥ ೫ ॥

ಗಣಾಂಬಿಕಾಯೈ ವಿದ್ಮಹೇ ಕರ್ಮಸಿದ್ಧ್ಯೈ ಚ ಧೀಮಹಿ ।
ತನ್ನೋ ಗೌರೀ ಪ್ರಚೋದಯಾತ್ ॥ ೬ ॥

ತತ್ಪುರುಷಾಯ ವಿದ್ಮಹೇ ಮಹಾದೇವಾಯ ಧೀಮಹಿ ।
ತನ್ನೋ ರುದ್ರಃ ಪ್ರಚೋದಯಾತ್ ' ॥ ೭ ॥

ತತ್ಪುರುಷಾಯ ವಿದ್ಮಹೇ ವಕ್ರತುಂಡಾಯ ಧೀಮಹಿ ।
ತನ್ನೋ ದಂತಿಃ ಪ್ರಚೋದಯಾತ್ ॥ ೮ ॥

ಮಹಾಸೇನಾಯ ವಿದ್ಮಹೇ ವಾಗ್ವಿಶುದ್ಧಾಯ ಧೀಮಹಿ ।
ತನ್ನಃ ಸ್ಕಂದಃ ಪ್ರಚೋದಯಾತ್ ॥ ೯ ॥

---

ವನ್ನು ನಿರ್ಮಿಸಿದರೂ ಆಗಬಹುದು. ಸಕಲ ಕಾರ್ಯಗಳಲ್ಲಿಯೂ ಶಕ್ತಿಗಳಿಗೆ ಯೋನ್ಯಾಕಾರವಾದ ಕುಂಡವನ್ನೇ ನಿರ್ಮಿಸಬೇಕು. ಈಶ್ವರನ ಸಂಬಂಧ ವಾದ ಸಕಲ ಕಾರ್ಯಗಳಲ್ಲಿಯೂ, ಗಾಯತ್ರಿಯನ್ನು ಸ್ಥಾಪಿಸಬೇಕು.

೪. ಏಕೆಂದರೆ ಬೇರೆಯ ಸಕಲ ದೇವತೆಗಳೂ ರುದ್ರಾಂಶ ಸಂಭೂತರೇ ಆಗಿರುತ್ತಾರೆ. ಆದುದರಿಂದ ನಿಮಗೆ ಗಾಯತ್ರಿಯ ಪ್ರಭೇದ ಗಳನ್ನು ಹೇಳುವೆನು.

ಗಾಯತ್ರೀ ಮಂತ್ರಸ್ವರೂಪದಲ್ಲಿ ಪ್ರಭೇದಗಳು :—" ತತ್ಪುರುಷಾಯ ವಿದ್ಮಹೇ " ಎಂಬೀ ಮೊದಲಾದ ಮಂತ್ರಗಳಿಂದ ಗಾಯತ್ರಿಯ ಇಪ್ಪತ್ತೆರಡು ಪ್ರಭೇದಗಳನ್ನು ಹೇಳುತ್ತಾರೆ. ಮಂತ್ರಗಳು ಹೀಗಿವೆ.

೫–೨೭. ಈ ಮಂತ್ರ ರೂಪಭೇದದಿಂದ ಗಾಯತ್ರಿಯೂ ನಾನಾ

ತೀಕ್ಷ್ಣ ಶೃಂಗಾಯ ವಿದ್ಮಹೇ ವೇದಪಾದಾಯ ಧೀಮಹಿ ।
ತನ್ನೋ ವೃಷಃ ಪ್ರಚೋದಯಾತ್ ॥೧೦॥

ಹರಿವಕ್ತ್ರಾಯ ವಿದ್ಮಹೇ ರುದ್ರ ವಕ್ತ್ರಾಯ ಧೀಮಹಿ ।
ತನ್ನೋ ನಂದೀ ಪ್ರಚೋದಯಾತ್ ॥೧೧॥

ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ ।
ತನ್ನೋ ವಿಷ್ಣುಃ ಪ್ರಚೋದಯಾತ್ ॥೧೨॥

ಮಹಾಂಬಿಕಾಯೈ ವಿದ್ಮಹೇ ಕರ್ಮಸಿದ್ಧ್ಯೈ ಚ ಧೀಮಹಿ ।
ತನ್ನೋ ಲಕ್ಷ್ಮೀಃ ಪ್ರಚೋದಯಾತ್ ॥೧೩॥

ಸಮುದ್ಧೃತಾಯೈ ವಿದ್ಮಹೇ ವಿಷ್ಣುನೈಕೇನ ಧೀಮಹಿ ।
ತನ್ನೋ ರಾಧಾ ಪ್ರಚೋದಯಾತ್ ॥೧೪॥

ವೈನತೇಯಾಯ ವಿದ್ಮಹೇ ಸುವರ್ಣ ಪಕ್ಷಾಯ ಧೀಮಹಿ ।
ತನ್ನೋ ಗರುಡಃ ಪ್ರಚೋದಯಾತ್ ॥೧೫॥

ಪದ್ಮೋದ್ಭವಾಯ ವಿದ್ಮಹೇ ವೇದವಕ್ತ್ರಾಯ ಧೀಮಹಿ ।
ತನ್ನಃ ಸ್ರಷ್ಟಾ ಪ್ರಚೋದಯಾತ್ ॥೧೬॥

ಶಿವಾಸ್ಯಜಾಯೈ ವಿದ್ಮಹೇ ದೇವರೂಪಾಯೈ ಧೀಮಹಿ ।
ತನ್ನೋ ವಾಚಾ ಪ್ರಚೋದಯಾತ್ ॥೧೭॥

ದೇವರಾಜಾಯ ವಿದ್ಮಹೇ ವಜ್ರಹಸ್ತಾಯ ಧೀಮಹಿ ।
ತನ್ನಃ ಶಕ್ರಃ ಪ್ರಚೋದಯಾತ್ ॥೧೮॥

ರುದ್ರ ನೇತ್ರಾಯ ವಿದ್ಮಹೇ ಶಕ್ತಿಹಸ್ತಾಯ ಧೀಮಹಿ ।
ತನ್ನೋ ವಹ್ನಿಃ ಪ್ರಚೋದಯಾತ್ ॥೧೯॥

ವೈವಸ್ವತಾಯ ವಿದ್ಮಹೇ ದಂಡಹಸ್ತಾಯ ಧೀಮಹಿ ।
ತನ್ನೋ ಯಮಃ ಪ್ರಚೋದಯಾತ್ ॥೨೦॥

ನಿಶಾಚರಾಯ ವಿದ್ಮಹೇ ಖಡ್ಗಹಸ್ತಾಯ ಧೀಮಹಿ ।
ತನ್ನೋ ನಿರ್‌ಋತಿಃ ಪ್ರಚೋದಯಾತ್ ॥೨೧॥

---

ಭೇದ ಉಳ್ಳವಳೆಂದು ತಿಳಿದುಕೊಂಡು ಅವಳನ್ನು ಆ ಆಸನದಲ್ಲಿ ಸ್ಥಾಪಿಸಿ ಪೂಜಿಸಬೇಕು. (ಎಂದರೆ ಓಂಕಾರವನ್ನು ಗಾಯತ್ರಿಯ ಆಸನವೆಂದು

ಶುದ್ಧ ಹಸ್ತಾಯ ವಿದ್ಮಹೇ ಪಾಶಹಸ್ತಾಯ ಧೀಮಹಿ ।
ತನ್ನೋ ವರುಣಃ ಪ್ರಚೋದಯಾತ್ ॥೨೨॥

ಸರ್ವಪ್ರಾಣಾಯ ವಿದ್ಮಹೇ ಯಷ್ಟಿ ಹಸ್ತಾಯ ಧೀಮಹಿ ।
ತನ್ನೋ ವಾಯುಃ ಪ್ರಚೋದಯಾತ್ ॥೨೩॥

ಯಕ್ಷೇಶ್ವರಾಯ ವಿದ್ಮಹೇ ಗದಾಹಸ್ತಾಯ ಧೀಮಹಿ ।
ತನ್ನೋ ಯಕ್ಷಃ ಪ್ರಚೋದಯಾತ್ ॥೨೪॥

ಸರ್ವೇಶ್ವರಾಯ ವಿದ್ಮಹೇ ಶೂಲಹಸ್ತಾಯ ಧೀಮಹಿ ।
ತನ್ನೋ ರುದ್ರಃ ಪ್ರಚೋದಯಾತ್ ॥೨೫॥

ಕಾತ್ಯಾಯನ್ಯೈ ವಿದ್ಮಹೇ ಕನ್ಯಾಕುಮಾರ್ಯೈ ಧೀಮಹಿ ।
ತನ್ನೋ ದುರ್ಗಾ ಪ್ರಚೋದಯಾತ್ ॥೨೬॥

ಏವಂ ಪ್ರಭಿದ್ಯ ಗಾಯತ್ರೀಂ ತತ್ತದ್ದೇವಾನ್ ರೂಪತಃ ।
ಪೂಜಯೇತ್ಸ್ಥಾಪಯೇತ್ತೇಷಾಂ ಆಸನಂ ಪ್ರಣವಂ ಸ್ಮೃತಂ ॥೨೭॥

ಅಥವಾ ವಿಷ್ಣುಮತುಲಂ ಸೂಕ್ತೇನ ಪುರುಷೇಣ ವಾ ।
ವಿಷ್ಣುಂ ಚೈವ ಮಹಾವಿಷ್ಣುಂ ಸದಾ ವಿಷ್ಣುಮನುಕ್ರಮಾತ್ ॥೨೮॥

ಸ್ಥಾಪಯೇ ದ್ದೇವ ಗಾಯತ್ರ್ಯಾ ಪರಿಕಲ್ಪ್ಯ ವಿಧಾನತಃ ।
ವಾಸುದೇವಃ ಪ್ರಧಾನಸ್ತು ತತಃ ಸಂಕರ್ಷಣಃ ಸ್ವಯಂ ॥೨೯॥

---

ಭಾವಿಸಿ ಅಲ್ಲಿ ಗಾಯತ್ರಿಯನ್ನು ಪೂಜಿಸಬೇಕೆಂದರ್ಥವು.

೨೮. ಅಥವಾ ವಿಷ್ಣುಗಾಯತ್ರಿಯನ್ನೇ ದೇವಗಾಯತ್ರಿಯನ್ನಾಗಿ ಭಾವಿಸಿ ಸ್ಥಾಪನೆಮಾಡಿ, ಪೂಜಿಸಬೇಕು. (ಗಾಯತ್ರಿಯು ನಾನಾ ವಿಧವಾಗಿರುವುದು ಇತರ ದೇವತೆಗಳಿಗೆಲ್ಲರಿಗೂ ದೇವ ಗಾಯತ್ರಿ ಯೆಂದೂ, ಇನ್ನು ಅವತಾರಗಳಿಗೆ ವಿಷ್ಣುಗಾಯತ್ರಿಯೆಂದೂ ವಿಧಿ ಯಿರುತ್ತದೆ.) ವಿಷ್ಣುಗಾಯತ್ರಿಯಿಂದಾಗಲಿ, ವಿಷ್ಣುಸೂಕ್ತದಿಂದಾಗಲೀ, ಪುರುಷಸೂಕ್ತದಿಂದಾಗಲೀ ಸ್ಥಾಪಿಸಬೇಕು.

೨೯. ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ಇವೆ ಲ್ಲವುಗಳೂ, ವಿಷ್ಣುವಿನ ಮೂರ್ತಿಭೇದಗಳಾಗಿರುತ್ತವೆ. ಆ ಮೂರ್ತಿ ಗಳಲ್ಲಿ ವಾಸುದೇವನು ಪ್ರಧಾನನಾಗಿರುವನು.

ಪ್ರದ್ಯುಮ್ನೋ ಹ್ಯನಿ ರುದ್ಧಶ್ಚ ಮೂರ್ತಿಭೇದಾಸ್ತು ವೈ ಪ್ರಭೋಃ ।
ಬಹೂನಿ ವಿವಿಧಾನೀಹ ತಸ್ಯ ಶಾಪೋದ್ಭವಾನಿ ಚ ॥೩೦॥

ಸರ್ವಾ ವರ್ತೇಷು ರೂಪಾಣಿ ಜಗತಾಂ ಚ ಹಿತಾಯ ವೈ ।
ಮತ್ಸ್ಯಃ ಕೂರ್ಮೋಽಥ ವಾರಾಹೋ ನಾರಸಿಂಹೋಽಥ ವಾಮನಃ ॥
ರಾಮೋ ರಾಮಶ್ಚ ಕೃಷ್ಣಶ್ಚ ಬೌದ್ಧಃ ಕಲ್ಕೀ ತಥೈವ ಚ ।
ತಥಾಽನ್ಯಾನಿ ಚ ದೇವಸ್ಯ ಹರೇಃ ಶಾಪೋದ್ಭವಾನಿ ಚ ॥೩೨॥

ತೇಷಾ ಮಪಿ ಚ ಗಾಯತ್ರೀಂ ಕೃತ್ವಾ ಸ್ಥಾಪ್ಯ ಚ ಪೂಜಯೇತ್ ।
ಗುಹ್ಯಾನಿ ದೇವದೇವಸ್ಯ ಹರೇರ್ನಾರಾಯಣಸ್ಯ ಚ ॥೩೩॥

ವಿಜ್ಞಾನಾನಿ ಚ ಯಂತ್ರಾಣಿ ಮಂತ್ರೋಪ ನಿಷದಾನಿ ಚ ।
ಪಂಚ ಬ್ರಹ್ಮಾಂಗಜಾನೀಹ ಪಂಚ ಭೂತ ಮಯಾನಿ ಚ ॥೩೪॥

---

೩೦. ಮೇಲೆ ಹೇಳಿದ ರೂಪಭೇದಗಳಲ್ಲದೇ ವಿಷ್ಣುವಿಗೆ ಸಕಲ ಯುಗಗಳಲ್ಲಿಯೂ, ಶಾಪನಿಮಿತ್ತವಾಗಿಯೂ, ಜಗದುದ್ಧಾರಕ್ಕೋಸ್ಕರವೂ ಬಂದಿರುವ ಅನೇಕ ವಿಧಗಳಾದ ರೂಪಗಳಿರುವುವು.

೩೧–೩೨. ಈಗ ಈ ರೂಪಭೇದಗಳನ್ನು ಹೇಳುತ್ತಾರೆ:—ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿ, ಎಂಬೀ ರೂಪಭೇದಗಳು ವಿಷ್ಣುವಿಗೆ ಇರುವುವು. ಇವಲ್ಲದೇ ಭೃಗುಶಾಪನಿಮಿತ್ತವಾಗಿ ಆಗಾಗ್ಗೆ ಬಂದಿರುವ ಇನ್ನೂ ಅನೇಕ ಅವತಾರಗಳೂ ಇರುತ್ತವೆ.

೩೩–೩೪. ದೇವದೇವನಾದ ಶಿವನ ಮತ್ತು ವಿಷ್ಣುವಿನ ಸಂಬಂಧವಾದ, ಅತಿರಹಸ್ಯವಾಗಿರುವ ಅನೇಕ ಯಂತ್ರಗಳೂ, ಮಂತ್ರಗಳೂ, ಉಪನಿಷತ್ತುಗಳೂ, ಮತ್ತು ಸದ್ಯೋಜಾತಾದಿ ರೂಪಗಳೂ, ಇರುತ್ತವೆ. ಪೃಥಿವ್ಯಾದಿ ಪಂಚಭೂತಾತ್ಮಕವಾದ ಸ್ವರೂಪಗಳೂ ಇರುತ್ತವೆ. ಇವುಗಳನ್ನೂ ಸ್ಥಾಪನೆಮಾಡಿ ಪೂಜಿಸಬೇಕು.

ನಮೋ ನಾರಾಯಣಾಯೇತಿ ಮಂತ್ರಃ ಪರಮ ಶೋಭನಃ ।
ಹರೇ ರಷ್ಟಾಕ್ಷರಾಣೀಹ ಪ್ರಣವೇನ ಸಮಾಸತಃ ॥೩೫॥

ಓಂ ನಮೋ ವಾಸುದೇವಾಯ ನಮಃ ಸಂಕರ್ಷಣಾಯ ಚ ।
ಪ್ರದ್ಯುಮ್ನಾಯ ಪ್ರಧಾನಾಯ ಅನಿರುದ್ಧಾಯ ವೈ ನಮಃ ॥೩೬॥

ಏವಮೇಕೇನ ಮಂತ್ರೇಣ ಸ್ಥಾಪಯೇತ್ಪರಮೇಶ್ವರಂ ।
ಬಿಂಬಾನಿ ಯಾನಿ ದೇವಸ್ಯ ಶಿವಸ್ಯ ಪರಮೇಷ್ಠಿನಃ ॥೩೭॥

ಪ್ರತಿಷ್ಠಾ ಚೈವ ಪೂಜಾ ಚ ಲಿಂಗವನ್ಮುನಿ ಸತ್ತಮಾಃ ।
ಓಂನಮೋ ವಾಸುದೇವಾಯ ಓಂ ನಮಃ ಸಂಕರ್ಷಣಾಯ ।
ಓಂ ನಮಃ ಪ್ರದ್ಯುಮ್ನಾಯ ಓಂ ನಮಃ ಪ್ರಧಾನಾಯ ।
ರತ್ನವಿನ್ಯಾಸ ಸಹಿತಂ ಕೌತುಕಾನಿ ಹರೇರಪಿ ॥೩೮॥

ಅಚಲೇ ಕಾರಯೇತ್ಸರ್ವಂ ಚಲೇಽಪ್ಯೇವಂ ವಿಧಾನತಃ ।
ತನ್ನೇತ್ರೋನ್ಮೀಲನಂ ಕುರ್ಯಾ ನ್ನೇತ್ರಮಂತ್ರೇಣ ಸುವ್ರತಾಃ ॥೩೯॥

---

೩೫. ಈಗ ನಾರಾಯಣಾದಿ ಮುಖ್ಯ ಮಂತ್ರಗಳನ್ನೂ ಹೇಳುತ್ತಾರೆ:—"ಓಂ ನಮೋ ನಾರಾಯಣಾಯ" ಎಂಬ ಎಂಟು ಅಕ್ಷರಗಳಿಂದ ಕೂಡಿರುವ ವಿಷ್ಣುವಿನ ಮಂತ್ರವು ಶ್ರೇಷ್ಠತಮವಾದುದಾಗಿರುತ್ತದೆ.

೩೬–೩೭. ಓಂ ನಮಃ ಅನಿರುದ್ಧಾಯ ॥ ಎಂಬ ಈ ಮಂತ್ರಗಳೂ ಪ್ರತ್ಯೇಕವಾಗಿ ವಿಷ್ಣುವಿನ ಮಂತ್ರಗಳಾಗಿ ಇರುತ್ತವೆ. ಈ ರೀತಿ ಮೇಲೆ ಹೇಳಿರುವ ಮಂತ್ರಗಳಿಂದ ಪ್ರತ್ಯೇಕವಾಗಿ ವಿಷ್ಣುವನ್ನು ಸ್ಥಾಪಿಸಿ, ಪೂಜಿಸಬೇಕು. ಇದಲ್ಲದೇ ದೇವನಾದ ಶಿವನ ಯಾವ ಬಿಂಬಗಳಿರುವುವೋ ಆ ಬಿಂಬಗಳನ್ನೂ ಸಹ ಲಿಂಗದಂತೆಯೇ ಸ್ಥಾಪಿಸಿ ಪೂಜಿಸಬೇಕು.

೩೮–೩೯. ವಿಷ್ಣುವಿನ ಸಂಬಂಧವಾದ ಮಂಗಳಕಾರ್ಯಗಳನ್ನೂ ಸಹ ರತ್ನವಿನ್ಯಾಸ ಪೂರ್ವಕವಾಗಿಯೇ ಮಾಡಬೇಕು. ಸ್ಥಿರ ಪ್ರತಿಷ್ಠೆಯಲ್ಲಿಯೂ ಮತ್ತು ಚಲಪ್ರತಿಷ್ಠೆಯಲ್ಲಿಯೂ ಸಹ ಇದೇ ವಿಧಾನದಿಂದ

ಕ್ಷೇತ್ರ ಪ್ರದಕ್ಷಿಣಂ ಚೈವ ಆರಾಮಸ್ಯ ಪುರಸ್ಯ ಚ
ಜಲಾಧಿವಾಸನಂ ಚೈವ ಪೂರ್ವವತ್ಪರಿಕೀರ್ತಿತಂ ॥೪೦॥

ಕುಂಡ ಮಂಡಪ ನಿರ್ಮಾಣಂ ಶಯನಂ ಚ ವಿಧೀಯತೇ ।
ಹುತ್ವಾ ನವಾಗ್ನಿಭಾಗೇನ ನವಕುಂಡೇ ಯಥಾವಿಧಿ ॥೪೧॥

ಅಥವಾ ಪಂಚ ಕುಂಡೇಷು ಪ್ರಧಾನೇ ಕೇವಲೇಽಥವಾ ।
ಪ್ರತಿಷ್ಠಾ ಕಥಿತಾ ದಿವ್ಯಾ ಪಾರಂಪರ್ಯ ಕ್ರಮಾಗತಾ ॥೪೨॥

ಶಿಲೋದ್ಭವಾನಾಂ ಬಿಂಬಾನಾಂ ಚಿತ್ರಾ ಭಾಸಸ್ಯ ವಾ ಪುನಃ ।
ಜಲಾಧಿ ವಾಸನಂ ಪ್ರೋಕ್ತಂ ವೃಷೇಂದ್ರಸ್ಯ ಪ್ರಕೀರ್ತಿತಃ ॥೪೩॥

---

ಸಕಲ ಕಾರ್ಯಗಳನ್ನೂ ನೆರವೇರಿಸಬೇಕು ಸಾಕಾರವಾದ ಮೂರ್ತಿಗಳಿಗೆ ನೇತ್ರೋನ್ಮಿಲನ ಮಂತ್ರಗಳಿಂದ ನೇತ್ರೋನ್ಮಿಲನವನ್ನೂ ಮಾಡಬೇಕು.

೪೦. ಕ್ಷೇತ್ರ ಪ್ರದಕ್ಷಿಣೆಯನ್ನೂ, ಉದ್ಯಾನದ ಪ್ರದಕ್ಷಿಣೆಯನ್ನೂ, ಪಟ್ಟಣದ ಪ್ರದಕ್ಷಿಣೆಯನ್ನೂ, ಮಾಡಿಸಿ, ಪೂರ್ವೋಕ್ತ ರೀತಿಯಂತೆ ಜಲಾಧಿವಾಸವನ್ನೂ ಮಾಡಿಸಬೇಕು

೪೧. ಒಂಬತ್ತು ಕುಂಡಗಳಲ್ಲಿ ಪೂರ್ವೋಕ್ತ ರೀತಿಯಂತೆ ಹೋಮ ಮಾಡಿ, ವಿಧಿವತ್ತಾಗಿ ಕುಂಡ. ಮಂಟಪ, ಆಸನ, ಮುಂತಾದುವುಗಳ ನಿರ್ಮಾಣವನ್ನು ಮಾಡಬೇಕು.

೪೨. ಅಥವಾ ಐದೇ ಕುಂಡಗಳಲ್ಲಾಗಲೀ, ಇಲ್ಲದಿದ್ದರೆ ಪ್ರಧಾನ ಕುಂಡ ಒಂದರಲ್ಲೇ ಆಗಲಿ ಹೋಮವನ್ನು ಮಾಡಬಹುದು. ಎಲೈ ಋಷಿಗಳೇ, ಈ ರೀತಿಯಲ್ಲಿ ಗುರು ಶಿಷ್ಯ ಪರಂಪರೆಯಿಂದ ಕ್ರಮವಾಗಿ ಬಂದಿರುವ ಈ ಪ್ರತಿಷ್ಠಾವಿಧಿಯನ್ನು ನಿಮಗೆ ಹೇಳಿರುವೆನು.

೪೩. ಶಿಲೆಯಲ್ಲಿ ಉದ್ಭವಿಸಿರುವ ಆಕಾರಗಳಿಗೂ, ಮೂರ್ತಿಯ ಆಕಾರಗಳಿಗೂ, ಜಲಾಧಿವಾಸವನ್ನು ಹೇಳಿರುತ್ತಾರೆ. ಈಶ್ವರನ ಭಾವ ಚಿತ್ರಗಳಿಗೆ ಮಾತ್ರ ಜಲಾಧಿವಾಸವು ವಿಹಿತವಾಗಿರುವುದಿಲ್ಲ.

ಪ್ರಾಸಾದಸ್ಯ ಪ್ರತಿಷ್ಠಾಯಾಂ ಪ್ರತಿಷ್ಠಾ ಪರಿಕೀರ್ತಿತಾ ।
ಪ್ರಾಸಾದಾಂಗಸ್ಯ ಸರ್ವಸ್ಯ ಯಥಾಂಗಾನಾಂ ತನೋರಿವ ॥೪೪॥
ವೃಷಾಗ್ನಿ ಮಾತೃ ವಿಘ್ನೇಶ ಕುಮಾರಾನಪಿ ಯತ್ನತಃ ।
ಶ್ರೇಷ್ಠಾಂ ದುರ್ಗಾಂ ತಥಾ ಚಂಡೀಂ ಗಾಯತ್ರ್ಯನ್ಯೈ ಯಥಾವಿಧಿ॥
ಪ್ರಾಗಾದ್ಯಂ ಸ್ಥಾಪಯೇಚ್ಛಂಭೋಃ ರಷ್ಟಾವರಣಮುತ್ತಮಂ ।
ಲೋಕಪಾಲ ಗಣೇಶಾದ್ಯಾನಪಿ ಶಂಭೋಃ ಪ್ರವಿನ್ಯಸೇತ್ ॥೪೬॥
ಉಮಾ ಚಂಡೀ ಚ ನಂದೀ ಚ ಮಹಾ ಕಾಲೋ ಮಹಾ ಮುನಿಃ ।
ವಿಘ್ನೇಶ್ವರೋ ಮಹಾ ಭೃಂಗೀ ಸ್ಕಂದಃ ಸೌಮ್ಯಾದಿತಃ ಕ್ರಮಾತ್ ॥
ಇಂದ್ರಾದೀನ್ ಸ್ವೇಷು ಸ್ಥಾನೇಷು ಬ್ರಹ್ಮಾಣಂ ಚ ಜನಾರ್ದನಂ ।
ಸ್ಥಾಪಯೇ ಜ್ಜೈವ ಯತ್ನೇನ ಕ್ಷೇತ್ರೇಶಂ ವೇಶಗೋಚರೇ ॥೪೮॥

---

೪೪ ಪ್ರಾಸಾದ ಪ್ರತಿಷ್ಠಾವಿಧಿಯನ್ನು ಈ ಶ್ಲೋಕದಲ್ಲಿ ಹೇಳುತ್ತಾರೆ:—ಆಯಾದೇವತಾ ಪ್ರತಿಷ್ಠೆಯಂತೆ ಪ್ರಾಸಾದ ಪ್ರತಿಷ್ಠಾ ಕ್ರಮವೂ ಹೇಳಲ್ಪಟ್ಟಿದೆ. ದೇಹನಿರ್ಮಾಣಕ್ಕೆ ಅಂಗನಿರ್ಮಾಣವು ಹೇಗೆ ಆವಶ್ಯಕವೋ ಅದರಂತೆ, ಪ್ರಾಸಾದ ಪ್ರತಿಷ್ಠೆಗೂ ಪ್ರಾಸಾದಾಂಗಗಳ ಪ್ರತಿಷ್ಠೆಯೂ ಆವಶ್ಯಕವಾಗಿ ಇರುತ್ತದೆ.

೪೫-೪೬. ಈಗ ಅಷ್ಟಾವರಣ ದೇವತೆಗಳನ್ನು ಹೇಳುತ್ತಾರೆ:—ವೃಷ, ಅಗ್ನಿ, ಮಾತೃ, ವಿಘ್ನೇಶ, ಕುಮಾರ (ಷಣ್ಮುಖ) ಶ್ರೇಷ್ಠಾ, ದುರ್ಗಾ, ಚಂಡೀ, ಈ ಎಂಟು ಅಷ್ಟಾವರಣ ದೇವತೆಗಳ ಹೆಸರುಗಳು. ಈ ದೇವತೆಗಳನ್ನು ಈಶ್ವರನಸುತ್ತಲೂ ಕ್ರಮವಾಗಿ, ಪೂರ್ವ, ಆಗ್ನೇಯ, ಮೊದಲಾದ ಅಷ್ಟದಿಕ್ಕುಗಳಲ್ಲಿ ಸ್ಥಾಪಿಸಬೇಕು. ಮತ್ತು ಅಷ್ಟಲೋಕಪಾಲಕರನ್ನೂ ರುದ್ರನ ಪ್ರಮಥಗಣಗಳಾದ ಗಣೇಶಾದಿಗಳನ್ನೂ ಸ್ಥಾಪಿಸಬೇಕು.

೪೭-೪೮. ಉಮಾ, ಚಂಡೀ, ನಂದೀ, ಮಹಾಕಾಲ, ಮಹಾಮುನಿ, ವಿಘ್ನೇಶ್ವರ, ಮಹಾಭೃಂಗೀ, ಸ್ಕಂದ (ಷಣ್ಮುಖ) ಈ ಅಷ್ಟದೇವತೆಗಳನ್ನು ಕ್ರಮವಾಗಿ ಉತ್ತರದಿಕ್ಕಿನಿಂದ ಮೊದಲುಗೊಂಡು ಸ್ಥಾಪಿಸಬೇಕು. ಇಂದ್ರಾದಿ ಅಷ್ಟದಿಕ್ಪಾಲಕರನ್ನು ಅವರವರ ಸ್ಥಾನದಲ್ಲಿ ಎಂದರೆ

ಸಿಂಹಾಸನೇ ಹ್ಯನಂತಾದೀನ್ ವಿದ್ಯೇಶಾನಪಿ ಚ ಕ್ರಮಾತ್ ।
ಸ್ಥಾಪಯೇತ್ಪ್ರಣವೇನೈವ ಗುಹ್ಯಾಂಗಾದೀನಿ ಪಂಕಜೇ ॥೪೯॥
ಏವಂ ಸಂಕ್ಷೇಪತಃ ಪ್ರೋಕ್ತಂ ಚಲಸ್ಥಾಪನಮುತ್ತಮಂ ।
ಸರ್ವೇಷಾಮಪಿ ದೇವಾನಾಂ ದೇವೀನಾಂ ಚ ವಿಶೇಷತಃ ॥೫೦॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ಅಷ್ಟ
ಚತ್ವಾರಿಂಶೋಽಧ್ಯಾಯಃ

---

ಪೂರ್ವಾದಿ ದಿಕ್ಕುಗಳಲ್ಲಿ ಸ್ಥಾಪಿಸಿ, ಬ್ರಹ್ಮಾ, ಮತ್ತು ವಿಷ್ಣು ಇವರನ್ನೂ ಸ್ಥಾಪಿಸಬೇಕು. ಈಶಾನ್ಯ ದಿಕ್ಕಿನಲ್ಲಿ ಕ್ಷೇತ್ರಪಾಲನನ್ನು ಸ್ಥಾಪಿಸಬೇಕು.

೪೯. ಅನಂತಾದಿ ದೇವತೆಗಳನ್ನೂ ಮತ್ತು ವಾಗೀಶ್ವರೀ ಮುಂತಾದ ದೇವತೆಗಳನ್ನು ಸಿಂಹಾಸನದಲ್ಲಿ ಸ್ಥಾಪಿಸಿ, ಓಂಕಾರ ಮಂತ್ರದಿಂದ ಆವಾಹಿಸಬೇಕು. ಧರ್ಮಾದಿ ಗುಹ್ಯಾಂಗಗಳನ್ನೂ ಪೀಠಕಮಲದಲ್ಲಿ ಸ್ಥಾಪಿಸಬೇಕು.

೫೦. ಎಲೈ ಋಷಿಗಳೇ, ಈ ರೀತಿಯಲ್ಲಿ ಸಮಸ್ತ ದೇವತೆಗಳ ಮತ್ತು ದೇವಿಯರ, ಮುಖ್ಯವಾಗಿ ಚಲಪ್ರತಿಷ್ಠೆಯ,ಕ್ರಮವನ್ನು ಸಂಕ್ಷೇಪವಾಗಿ ನಿಮಗೆ ಹೇಳಿರುತ್ತೇನೆ.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರ ಭಾಗದಲ್ಲಿ
ನಲವತ್ತೆಂಟನೆಯ ಅಧ್ಯಾಯವು ಮುಗಿದುದು.

अथ श्री लिंगमहापुराणे उत्तरभागे
नव चत्वारिंशोऽध्यायः

॥ ಋಷಯ ಊಚುಃ ॥

ಅಘೋರೇಶಸ್ಯ ಮಾಹಾತ್ಮ್ಯಂ ಭವತಾ ಕಥಿತಂ ಪುರಾ ।
ಪೂಜಾಂ ಪ್ರತಿಷ್ಠಾಂ ದೇವಸ್ಯ ಭಗವನ್ವಕ್ತು ಮರ್ಹಸಿ ॥ ೧ ॥

॥ ಸೂತ ಉವಾಚ ॥

ಅಘೋರೇಣಾಂಗ ಯುಕ್ತೇನ ವಿಧಿವಚ್ಚ ವಿಶೇಷತಃ ।
ಪ್ರತಿಷ್ಠಾ ಲಿಂಗ ವಿಧಿನಾ ನಾನ್ಯಥಾ ಮುನಿ ಪುಂಗವಾಃ ॥ ೨ ॥

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ನಲವತ್ತೊಂಬತ್ತನೆಯ ಅಧ್ಯಾಯವು.

೧. ಋಷಿಗಳು ಹೇಳಿದರು:— ಎಲೈ ಷಡ್ಗುಣೈಶ್ವರ್ಯ ಸಂಪನ್ನನಾದ ಸೂತ ಮಹರ್ಷಿಯೇ, ಈ ಹಿಂದೆ ನೀನು ಅಘೋರೇಶನ ಮಾಹಾತ್ಮ್ಯೆಯನ್ನು ಹೇಳಿರುವೆ. ಇನ್ನು ಮುಂದೆ ಆ ದೇವನ ಪೂಜಾಕ್ರಮವನ್ನೂ, ಮತ್ತು ಪ್ರತಿಷ್ಠಾಕ್ರಮವನ್ನೂ ಹೇಳುವವನಾಗು.

ಋಷಿಗಳು ಸೂತಮಹರ್ಷಿಯನ್ನು ಕುರಿತು ಹೀಗೆ ಕೇಳಿಕೊಳ್ಳಲು,

೨. ಸೂತನು ಹೇಳಿದನು:—ಎಲೈ ಋಷಿಗಳೇ, ಹೃದಯಾದಿ ಅಂಗಗಳಲ್ಲಿ "ಅಘೋರೇಭ್ಯೋ" ಎಂಬ ಮಂತ್ರದಿಂದ ನ್ಯಾಸ ಮಾಡಿ, ಲಿಂಗಪ್ರತಿಷ್ಠಾಪನೆಯ ಕ್ರಮವು ಹಿಂದೆ ಯಾವ ರೀತಿಯಿಂದ ಹೇಳಲ್ಪಟ್ಟಿದೆಯೋ ಅದೇರೀತಿಯಿಂದ ಅಘೋರೇಶನ ಪ್ರತಿಷ್ಠೆಯನ್ನೂ ಮಾಡಬೇಕು. ಇದಕ್ಕಿಂತಲೂ ಬೇರೆಯದಾದ ಕ್ರಮವು ಇರುವುದಿಲ್ಲ. ಲಿಂಗಪೂಜೆಯು ಯಾವಕ್ರಮವನ್ನು ಅನುಸರಿಸಿ ಹೇಳಲ್ಪಟ್ಟಿದೆಯೋ ಅದೇಕ್ರಮವನ್ನನುಸರಿಸಿ ಅಗ್ನಿಯನ್ನು ಪೂಜಿಸಬೇಕು.

ತಥಾಽಗ್ನಿ ಪೂಜಾಂ ವೈ ಕುರ್ಯಾ ದ್ಯಥಾ ಪೂಜಾ ತಥೈವ ಚ ।
ಸಹಸ್ರಂ ವಾ ತದರ್ಧಂ ವಾ ಶತ ಮಷ್ಟೋತ್ತರಂ ತು ವಾ ॥ ೩ ॥

ತಿಲೈ ರ್ಹೋಮಃ ಪ್ರಕರ್ತವ್ಯೋ ದಧಿ ಮಧ್ವಾಜ್ಯ ಸಂಯುತೈಃ ।
ಘೃತ ಸಕ್ತು ಮಧೂನಾಂ ಚ ಸರ್ವ ದುಃಖಪ್ರಮಾರ್ಜನಂ ॥ ೪ ॥

ವ್ಯಾಧೀನಾಂ ನಾಶನಂ ಚೈವ ತಿಲಹೋಮಸ್ತು ಭೂತಿದಃ ।
ಸಹಸ್ರೇಣ ಮಹಾಭೂತಿಃ ಶತೇನ ವ್ಯಾಧಿ ನಾಶನಂ ॥ ೫ ॥

ಸರ್ವ ದುಃಖ ವಿನಿರ್ಮುಕ್ತೋ ಜಪೇನ ಚ ನ ಸಂಶಯಃ ।
ಅಷ್ಟೋತ್ತರ ಶತೇನೈವ ತ್ರಿಕಾಲೇ ಚ ಯಥಾ ವಿಧಿ ॥ ೬ ॥

---

೩. ಮೊಸರು, ಜೇನುತುಪ್ಪ, ತುಪ್ಪ, ಈ ಮೂರನ್ನೂ ಹೋಮ ದ್ರವ್ಯಗಳೊಂದಿಗೆ ಪ್ರತ್ಯೇಕವಾಗಿ ಎಳ್ಳಿನ ಕಾಳುಗಳನ್ನೂ ಸಾವಿರ ಬಾರಿಯಾಗಲೀ, ಐನೂರು ಸಲವಾಗಲೀ, ನೂರೆಂಟು ಆವೃತ್ತಿಯಾಗಲೀ ಹೋಮವನ್ನು ಮಾಡಬೇಕು.

೪. ಘೃತ, ಹಿಟ್ಟು, ಜೇನುತುಪ್ಪ, ಈ ಮೂರು ದ್ರವ್ಯಗಳಿಂದ ಹೋಮವನ್ನು ಮಾಡಿದರೆ ಸಕಲ ದುಃಖಗಳೂ ನಿವಾರಿಸಲ್ಪಡುವುವು. ಇದಲ್ಲದೇ ರೋಗಗಳೂ ನಿವೃತ್ತವಾಗುವುವು. ತಿಲಹೋಮವು ಐಶ್ವರ್ಯವನ್ನು ಕೊಡತಕ್ಕದ್ದಾಗಿರುವುದು.

೫-೬. ಸಾವಿರಬಾರಿ ಅಘೋರೇಶ ಜಪವನ್ನು ಮಾಡುವುದರಿಂದ ಮಹದೈಶ್ವರ್ಯವು ಪ್ರಾಪ್ತವಾಗುವುದು. ನೂರಾವರ್ತಿ ಜಪವನ್ನು ಆಚರಿಸುವುದರಿಂದ ಸಕಲ ರೋಗಗಳೂ ನಾಶವಾಗುವುವು. ನೂರೆಂಟು ಸಲ ತ್ರಿಕಾಲದಲ್ಲಿಯೂ ವಿಧಿವತ್ತಾಗಿ ಜಪವನ್ನಾಚರಿಸಿದರೆ ಸಕಲ ದುಃಖಗಳಿಂದಲೂ ಬಿಡಲ್ಪಟ್ಟವನಾಗುತ್ತಾನೆ.

ಅಷ್ಟೋತ್ತರ ಸಹಸ್ರೇಣ ಷಣ್ಮಾಸಾಜ್ಜಾಯತೇ ಫಲಂ ।
ಸಿದ್ಧಯೋ ನೈವ ಸಂದೇಹೋ ರಾಜ್ಯಮಂಡಲಿನಾಮಪಿ ॥ ೭ ॥
ಸಹಸ್ರೇಣ ಜ್ವರೋ ಯಾತಿ ಕ್ಷೀರೇಣ ಚ ಜುಹೋತಿ ಯಂ ।
ತ್ರಿಕಾಲಂ ಮಾಸ ಮೇಕಂ ತು ಸಹಸ್ರಂ ಜುಹುಯಾತ್ಸ್ವಯಃ ॥ ೮ ॥
ಮಾಸೇನ ಸಿಧ್ಯತೇ ತಸ್ಯ ಮಹಾ ಸೌಭಾಗ್ಯ ಮುತ್ತಮಂ ।
ಸಿಧ್ಯತೇ ಚಾಬ್ದ ಹೋಮೇನ ಕ್ಷೌದ್ರಾಜ್ಯದಧಿ ಸಂಯುತಂ ॥ ೯ ॥
ಯವಕ್ಷೀರಾಜ್ಯ ಹೋಮೇನ ಜಾತಿ ತಂಡುಲ ಕೇನ ವಾ ।
ಪ್ರೀಯೇತ ಭಗವಾನೀಶೋ ಹ್ಯಘೋರಃ ಪರಮೇಶ್ವರಃ ॥೧೦॥
ದಧ್ನಾ ಪುಷ್ಟಿ ರ್ನೃಪಾಣಾಂ ಚ ಕ್ಷೀರ ಹೋಮೇನ ಶಾಂತಿಕಂ ।
ಷಣ್ಮಾಸಂ ತು ಘೃತಂ ಹುತ್ವಾ ಸರ್ವ ವ್ಯಾಧಿ ವಿನಾಶನಂ ॥೧೧॥

---

೭–೮. ಆರುತಿಂಗಳುಗಳ ಪರ್ಯಂತವಾಗಿ ಪ್ರತಿದಿನವೂ ಸಾವಿರದ ಎಂಟಾವೃತ್ತಿ ಜಪವನ್ನು ಆಚರಿಸಿದರೆ ರಾಜ್ಯವು ಸುಭಿಕ್ಷವಾಗುವುದು. ಮತ್ತು ಸಾಮಂತ ರಾಜರುಗಳ ಇಷ್ಟಾರ್ಥಗಳೂ ಸಿದ್ಧಿಸುವುವು. ಇದರಲ್ಲಿ ಸಂಶಯ ವಿರುವುದಿಲ್ಲ. ಒಂದು ತಿಂಗಳಿನ ಪರ್ಯಂತರ ಪ್ರತಿದಿನವೂ ತ್ರಿಕಾಲಗಳಲ್ಲಿ ಸಾವಿರಬಾರಿಕ್ಷೀರವನ್ನೂ ಹೋಮಮಾಡಿದರೆ ಹೋಮಕರ್ತೃವು ಒಂದು ತಿಂಗಳಿನೊಳಗೆ ಮಹಾಸೌಭಾಗ್ಯವನ್ನು ಹೊಂದುತ್ತಾನೆ.

೯–೧೦. (ಜೇನು) ಕ್ಷೀರ, ಆಜ್ಯ, ದಧಿ, ಇವುಮೂರು ದ್ರವ್ಯಗಳನ್ನೂ ಮಿಶ್ರಮಾಡಿ, ಅವುಗಳಿಂದ ಹೋಮವನ್ನು ಮಾಡಿದರೆ ಒಂದುವರ್ಷದೊಳಗಾಗಿ ಸಿದ್ಧಿಯನ್ನು ಹೊಂದುವನು. ಯವವೆಂಬ ಧಾನ್ಯ, ಆಜ್ಯ, ಕ್ಷೀರ, ಈ ಮೂರು ದ್ರವ್ಯಗಳಿಂದಲಾಗಲೀ ಶುಚಿಯಾದ ಚರುವಿನಿಂದಾಗಲೀ, ಹೋಮವನ್ನು ಆಚರಿಸಿದರೆ ಅಘೋರಸ್ವರೂಪನಾದ ಪರ ಶಿವನು ಸುಪ್ರೀತನಾಗುತ್ತಾನೆ.

೧೧. ದಧಿ ಹೋಮವನ್ನು ಮಾಡುವುದರಿಂದ ರಾಜರುಗಳಿಗೆ ದೇಹ ಪುಷ್ಟಿಯೂ, ಕ್ಷೀರಹೋಮದಿಂದ ಶಾಂತಿಯೂ, ಘೃತ ಹೋಮವನ್ನು

ರಾಜಯಕ್ಷ್ಮಾ ತಿಲೈ ರ್ಹೋಮಾ ನ್ನಶ್ಯತೇ ವತ್ಸರೇಣ ತು
ಯವ ಹೋಮೇನ ಚಾಯುಷ್ಯಂ ಘೃತೇನ ಚ ಜಯಸ್ತದಾ ॥೧೨॥
ಸರ್ವ ಕುಷ್ಠ ಕ್ಷಯಾರ್ಥಂ ಚ ಮಧುನಾಽಕ್ತೈಶ್ಚ ತಂಡುಲೈಃ ।
ಜುಹುಯಾದಯುತಂ ನಿತ್ಯಂ ಷಣ್ಮಾಸಾನ್ನಿಯತಃ ಸದಾ ॥೧೩॥
ಆಜ್ಯಂ ಕ್ಷೀರಂ ಮಧುಶ್ಚೈವ ಮಧುರತ್ರಯ ಮುಚ್ಯತೇ ।
ಸಮಸ್ತಂ ತುಷ್ಯತೇ ತಸ್ಯ ನಾಶಯೇದ್ವೈ ಭಗಂದರಂ ॥೧೪॥
ಕೇವಲಂ ಘೃತಹೋಮೇನ ಸರ್ವರೋಗಕ್ಷಯಃ ಸ್ಮೃತಃ ।
ಸರ್ವವ್ಯಾಧಿ ಹರಂ ಧ್ಯಾನಂ ಸ್ಥಾಪನಂ ವಿಧಿನಾಽರ್ಚನಂ ॥೧೫॥

---

ಆರು ತಿಂಗಳುಗಳ ಪರ್ಯಂತ ಆಚರಿಸುವುದರಿಂದ ಸರ್ವ ರೋಗಗಳ ನಿವಾರಣೆಯೂ ಆಗುತ್ತದೆ.

೧೨. ತಿಲಹೋಮವನ್ನು ಮಾಡುವುದರಿಂದ ಒಂದುವರ್ಷದೊಳಗಾಗಿ ಕ್ಷಯರೋಗವು ಹೋಗಲಾಡಿಸಲ್ಪಡುವುದು. ಯವಹೋಮದಿಂದ ಆಯುಸ್ಸು ಅಭಿವೃದ್ಧಿಯಾಗುವುದು. ಘೃತಹೋಮದಿಂದ ಜಯವು ಲಭಿಸುವುದು.

೧೩. ಸರ್ವಕಾಲದಲ್ಲಿ ನಿಯಮ ಯುಕ್ತನಾಗಿ ಮಧು ಮಿಶ್ರಿತವಾದ ಅಕ್ಕಿಯಿಂದ ಆರು ತಿಂಗಳುಗಳ ಪರ್ಯಂತ ಹತ್ತುಸಾವಿರ ಬಾರಿ ಹೋಮವನ್ನು ಮಾಡಿದರೆ ಸಕಲ ಕುಷ್ಠಾದಿ ರೋಗಗಳೂ ನಾಶವಾಗುತ್ತವೆ.

೧೪. ಘೃತ, ಕ್ಷೀರ, ಮಧು, ಈ ಮೂರು ಪದಾರ್ಥಗಳು ಮಧುರತ್ರಯಗಳೆಂದು ಹೇಳಲ್ಪಡುತ್ತವೆ. (ಮೂರು ಮಧುರ ಪದಾರ್ಥಗಳು) ಈ ಮೂರು ಮಧುರದ್ರವ್ಯಗಳಿಂದ ಯಾವನು ಹೋಮಮಾಡುವನೋ ಅವನನ್ನು ಸಕಲಜನರೂ ಸಂತೋಷಗೊಂಡವರಾಗಿ ಕೊಂಡಾಡುತ್ತಾರೆ. ಇದಲ್ಲದೇ ಭಗಂದರ ವೆಂಬ ಮಹಾರೋಗವೂ ನಷ್ಟವಾಗುತ್ತದೆ.

೧೫. ಕೇವಲ ಘೃತ ಹೋಮದಿಂದ ಸಕಲ ರೋಗಗಳೂ ನಷ್ಟವಾಗುತ್ತವೆ. ಅಘೋರೇಶನ ಧ್ಯಾನ, ಸ್ಥಾಪನ, ಮತ್ತು ಅರ್ಚನ. ಈ ಮೂರರಿಂದ ಸಕಲ ಸಾಂಸಾರಿಕ ರೋಗಗಳೂ ನಷ್ಟವಾಗುತ್ತವೆ.

ಏವಂ ಸಂಕ್ಷೇಪತಃ ಪ್ರೋಕ್ತಂ ಅಘೋರಸ್ಯ ಮಹಾತ್ಮನಃ ।
ಪ್ರತಿಷ್ಠಾ ಯಜನಂ ಸರ್ವಂ ನಂದಿನಾ ಕಥಿತಂ ಪುರಾ ॥೧೬॥
ಬ್ರಹ್ಮ ಪುತ್ರಾಯ ಶಿಷ್ಯಾಯ ತೇನ ವ್ಯಾಸಾಯ ಸುವ್ರತಾಃ ॥೧೭॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
ಏಕೋನ ಪಂಚಾಶತ್ತಮೋಽಧ್ಯಾಯಃ

---

೧೬-೧೭. ಎಲೈ ಋಷಿಗಳೇ, ಅಘೋರೇಶನಪ್ರತಿಷ್ಠೆ ಮತ್ತು ಹೋಮ, ಇವುಗಳ ವಿಧಾನವನ್ನು ಸಂಕ್ಷೇಪವಾಗಿ ಹೇಳಿರುತ್ತೇನೆ. ಈ ವಿಧಿಯು ಹಿಂದೆ ನಂದಿಯಿಂದ ಶಿಷ್ಯನಾದ ಬ್ರಹ್ಮಪುತ್ರನಾದ ಸನತ್ಕುಮಾರನಿಗೆ ಹೇಳಲ್ಪಟ್ಟಿತು. ಸನತ್ಕುಮಾರನಿಂದ ವ್ಯಾಸನಿಗೆ ಹೇಳಲ್ಪಟ್ಟಿತು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ನಲವತ್ತೊಂಬತ್ತನೆಯ
ಅಧ್ಯಾಯವು ಮುಗಿದುದು.

अथ श्री लिंगमहापुराणे उत्तरभागे
पंचाशत्तमोऽध्यायः

॥ ऋषय ऊचुः ॥

ನಿಗ್ರಹಃ ಕಥಿತ ಸ್ತ್ವೇನ ಶಿವವಕ್ತ್ರೇಣ ಶೂಲಿನಾ ।
ಕೃತಾಪರಾಧಿನಾಂ ತಂ ತು ವಕ್ತುಮರ್ಹಸಿ ಸುವ್ರತ ॥ ೧ ॥

ತ್ವಯಾ ನ ವಿದಿತಂ ನಾಸ್ತಿ ಲೌಕಿಕಂ ವೈದಿಕಂ ತಥಾ ।
ಶ್ರೌತಂ ಸ್ಮಾರ್ತಂ ಮಹಾಭಾಗ ರೋಮಹರ್ಷಣ ಸುವ್ರತ ॥ ೨ ॥

॥ ಸೂತ ಉವಾಚ ॥

ಪುರಾ ಭೃಗು ಸುತೇನೋಕ್ತೋ ಹಿರಣ್ಯಾಕ್ಷಾಯ ಸುವ್ರತಾಃ ।
ನಿಗ್ರಹೋಽಘೋರ ಶಿಷ್ಯೇಣ ಶುಕ್ರೇಣಾಕ್ಷಯ ತೇಜಸಾ ॥ ೩ ॥

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಐವತ್ತನೆಯ ಅಧ್ಯಾಯವು

೧. ಋಷಿಗಳು ಹೇಳಿದರು. ಎಲೈ ಸದಾಚಾರ ಶೀಲನಾದ ಸೂತಮಹರ್ಷಿಯೇ, ವ್ಯಾಸನಿಂದ ನಿನಗೆ ಹೇಳಲ್ಪಟ್ಟ ಅಪರಾಧಿಗಳನ್ನು ಈಶ್ವರನು ನಿಗ್ರಹ ಮಾಡತಕ್ಕ ಕ್ರಮವನ್ನು ನೀನು ನಮಗೆ ಹೇಳುವವನಾಗು.

೨. ಕಥಾ ಶ್ರವಣದಿಂದ ರೋಮಾಂಚನವನ್ನುಂಟುಮಾಡುವ ಸೂತನೇ, ಲೌಕಿಕ, ವೈದಿಕ, ಶ್ರೌತ, ಸ್ಮಾರ್ತ, ಈ ಸರ್ವವಿಷಯವೂ ನಿನಗೆ ತಿಳಿಯದೇಇಲ್ಲ. ನೀನು ಲೌಕಿಕ ಕರ್ಮಗಳನ್ನೂ, ವೈದಿಕ ಕರ್ಮಗಳನ್ನೂ, ಶ್ರೌತ ಕರ್ಮವನ್ನೂ ಮತ್ತು ಸ್ಮಾರ್ತ ಕರ್ಮಗಳನ್ನೂ, ನೀನು ತಿಳಿದು ಕೊಂಡವನಾಗಿರುವೆ.

೩. ಸೂತನು ಹೇಳಿದನು: ಎಲೈ ಋಷಿಗಳೇ, ನಿಮ್ಮಿಂದ ಪ್ರಶ್ನಿಸಲ್ಪಟ್ಟ ನಿಗ್ರಹವಿಧಿಯು ಈ ಹಿಂದೆ ಭೃಗು ಮಹರ್ಷಿಯ ಪುತ್ರನೂ, ಅಘೋರರೂಪಿಯಾದ ಈಶ್ವರನ ಶಿಷ್ಯನೂ ಆದ, ಶುಕ್ರಾಚಾರ್ಯನಿಂದ ಹಿರಣ್ಯಾಕ್ಷನಿಂದ ಹೇಳಲ್ಪಟ್ಟಿರುತ್ತದೆ.

ತಸ್ಯ ಪ್ರಸಾದಾ ದ್ದೈತ್ಯೇಂದ್ರೋ ಹಿರಣ್ಯಾಕ್ಷಃ ಪ್ರತಾಪವಾನ್ ।
ತ್ರೈಲೋಕ್ಯ ಮಖಿಲಂ ಜಿತ್ವಾ ಸದೇವಾಸುರಮಾನುಷಂ ॥ ೪ ॥

ಉತ್ಪಾದ್ಯ ಪುತ್ರಂ ಗಣಪಂ ಚಾಂದಕಂ ಚಾರು ವಿಕ್ರಮಂ ।
ರರಾಜ ಲೋಕೇ ದೇವೇನ ವರಾಹೇಣ ನಿಷೂದಿತಃ ॥ ೫ ॥

ಸ್ತ್ರೀಬಾಧಾಂ ಬಾಲ ಬಾಧಾಂ ಚ ಗವಾಮಪಿ ವಿಶೇಷತಃ ।
ಕುರ್ವತೋ ನಾಸ್ತಿ ವಿಜಯೋ ಮಾರ್ಗೇಣಾನೇನ ಭೂತಲೇ ॥ ೬ ॥

ತೇನ ದೈತ್ಯೇನ ಸಾ ದೇವೀ ಧರಾ ನೀತಾ ರಸಾತಲಂ ।
ತೇನಾ ಘೋರೇಣ ದೇವೇನ ನಿಷ್ಫಲೋ ನಿಗ್ರಹಃ ಕೃತಃ ॥ ೭ ॥

ಸಂವತ್ಸರ ಸಹಸ್ರಾಂತೇ ವರಾಹೇಣ ಚ ಸೂದಿತಃ ।
ತಸ್ಮಾದಘೋರ ಸಿದ್ಧ್ಯರ್ಥಂ ಬ್ರಾಹ್ಮಣಾ ನ್ನೈವ ಬಾಧಯೇತ್ ॥

---

೪–೫. ದೈತ್ಯಪ್ರಭುವಾದ ಹಿರಣ್ಯಾಕ್ಷನು ಶುಕ್ರಾಚಾರ್ಯನ ಅನುಗ್ರಹದಿಂದ ಅಮಿತವಾದ ಪರಾಕ್ರಮವನ್ನು ಪಡೆದು, ದೇವತೆಗಳು, ರಾಕ್ಷಸರು, ಇವರುಗಳಿಂದೊಡಗೂಡಿರುವ ಲೋಕತ್ರಯಗಳನ್ನೂ ಜಯಿಸಿ, ಗಣಪನಾದ, ಚಾಂದಕನೆಂದು ಹೆಸರುಳ್ಳ, ಪರಾಕ್ರಮಿಗಳಾದ ಮುನಿಗಳನ್ನು ಹುಟ್ಟಿಸಿ ಸರ್ವೋತ್ಕೃಷ್ಟನಾಗಿರುವವನಾಗಿ, ಅಂತ್ಯದಲ್ಲಿ ವರಾಹಾವತಾರಿಯಾದ ವಿಷ್ಣುವಿನಿಂದ ಸಂಹರಿಸಲ್ಪಟ್ಟನು. ಏಕೆಂದರೆ,

೬. ಲೋಕದಲ್ಲಿ ಸ್ತ್ರೀಯರನ್ನೂ ಬಾಲಕರನ್ನೂ ಮತ್ತು ಗೋವುಗಳನ್ನೂ ಯಾವನು ಪೀಡಿಸುತ್ತಾನೆಯೋ ಅವನಿಗೆ ಇಂತಹ ದುರ್ಮಾರ್ಗದಿಂದ ಜಯವು ಲಭಿಸುವುದಿಲ್ಲ.

೭. ಆ ರಾಕ್ಷಸನಿಂದ ಭೂದೇವಿಯು ರಸಾತಲಕ್ಕೆ ಒಯ್ಯಲ್ಪಟ್ಟಳು. ಅವನನ್ನು ಸಂಹರಿಸಲು ಈಶ್ವರನಿಂದ ನಿಗ್ರಹವು ವ್ಯರ್ಥವಾಗಿ ಪರಿಣಮಿಸಿತು.

೮. ಸಾವಿರವರ್ಷಗಳು ಕಳೆದ ತರುವಾಯ ಅವನು ವರಾಹಾವತಾರಿಯಾದ ವಿಷ್ಣುವಿನಿಂದ ಸಂಹರಿಸಲ್ಪಟ್ಟನು. ಆದುದರಿಂದ ಅಘೋರೇ

ಸ್ತ್ರೀಣಾಮಪಿ ವಿಶೇಷೇಣ ಗವಾಮಪಿ ನ ಕಾರಯೇತ್ ।
ಗುಹ್ಯಾತ್ ಗುಹ್ಯ ತಮಂ ಗೋಪ್ಯ ಮತಿಗುಹ್ಯಂ ವದಾಮಿ ವಃ ।
ಆತತಾಯಿನ ಮುದ್ದಿಶ್ಯ ಕರ್ತವ್ಯಂ ನೃಪ ಸತ್ತಮೈಃ ॥ ೯ ॥
ಬ್ರಾಹ್ಮಣೇಭ್ಯೋ ನ ಕರ್ತವ್ಯಂ ಸ್ವರಾಷ್ಟ್ರೇಶಸ್ಯ ವಾ ಪುನಃ ॥೧೦॥
ಅತೀವ ದುರ್ಜಯೇ ಪ್ರಾಪ್ತೇ ಬಲೇ ಸರ್ವೇ ನಿಷೂದಿತೇ ।
ಅಧರ್ಮಯುದ್ಧೇ ಸಂಪ್ರಾಪ್ತೇ ಕುರ್ಯಾದ್ವಿಧಿ ಮನುತ್ತಮಂ ॥೧೧॥
ಅಘೃಣೇನೈವ ಕರ್ತವ್ಯೋ ಹ್ಯಘೃಣೇನೈವ ಕಾರಯೇತ್ ।
ಕೃತಮಾತ್ರೇ ನ ಸಂದೇಹೋ ನಿಗ್ರಹಃ ಸಂಪ್ರಜಾಯತೇ ॥೧೨॥

---

ಶನ ಜಪ, ಹೋಮ, ಮುಂತಾದುವುಗಳ ಸಿದ್ಧಿಯನ್ನು ಬಯಸುವವನು ಬ್ರಾಹ್ಮಣರನ್ನು ಎಂದಿಗೂ ಪೀಡಿಸಬಾರದು. ಇದಲ್ಲದೇ ಮುಖ್ಯವಾಗಿ ಸ್ತ್ರೀಯರನ್ನೂ ಮತ್ತು ಗೋವುಗಳನ್ನೂ ಪೀಡಿಸಬಾರದು.

೯. ಎಲೈ ಋಷಿಗಳೇ, ಅನ್ಯರನ್ನು ಸಂಹರಿಸಲು ಉದ್ಯುಕ್ತನಾದವನಿಗೆ ಪ್ರತೀಕಾರರೂಪವಾಗಿ ರಾಜರು ಅನುಷ್ಠಾನಮಾಡಬೇಕಾದ ರಹಸ್ಯವಾದ ಉಪಾಯವನ್ನು ನಿಮಗೆ ಹೇಳುತ್ತೇನೆ.

೧೦. ಈ ನಿಗ್ರಹ ಕ್ರಮವನ್ನು ಬ್ರಾಹ್ಮಣರಲ್ಲಿಯೂ ಮತ್ತು ಸ್ವದೇಶದವರಾದ ಜನರಲ್ಲಿಯೂ ಪ್ರಯೋಗಿಸಬಾರದು.

೧೧. ಅತ್ಯಂತ ಪರಾಜಯವು ಪ್ರಾಪ್ತವಾಗುತ್ತಿರಲಾಗಿ, ಸಮಸ್ತ ಸೈನ್ಯವೂ ನಷ್ಟವಾಗುತ್ತಿರಲಾಗಿ ಅಥವಾ ಅಧರ್ಮಯುದ್ಧವನ್ನುಮಾಡುವ ಸಂದರ್ಭವು ಒದಗುತ್ತಿರಲಾಗಿ ಈ ನಿಗ್ರಹಕ್ರಮವನ್ನು ಕೈಗೊಳ್ಳಬೇಕು.

೧೨. ಈ ನಿಗ್ರಹ ಕ್ರಮವನ್ನು ಅತ್ಯಂತ ಕ್ರೂರಸ್ವಭಾವವುಳ್ಳವನು ಮಾಡಬೇಕು. ಅಥವಾ ಕ್ರೂರಿಯಾದವನಿಂದ ಮಾಡಿಸಬೇಕು. ಏಕೆಂದರೆ ಈ ಕರ್ಮವು ಅಶಾಂತ ಕರ್ಮವಾಗಿರುವುದು. ಈ ಕ್ರಮವನ್ನು ಅನುಸರಿಸಿದರೆ ಶತ್ರುನಿಗ್ರಹವು ಆಗಿಯೇ ಆಗುತ್ತದೆ. ಇದರಲ್ಲಿ ಯಾವ ಸಂಶಯವೂ ಇರುವುದಿಲ್ಲ.

ಲಕ್ಷಮಾತ್ರಂ ಪುಮಾನ್ಜಪ್ತ್ವಾ ಅಘೋರಂ ಘೋರರೂಪಿಣಂ ।
ದಶಾಂಶಂ ವಿಧಿನಾ ಹುತ್ವಾ ತಿಲೇನ ದ್ವಿಜಸತ್ತಮಾಃ ॥೧೩॥

ಸಂಪೂಜ್ಯ ಲಕ್ಷಪುಷ್ಪೇಣ ಸಿತೇನ ವಿಧಿಪೂರ್ವಕಂ ।
ಬಾಣಲಿಂಗೇಽಥವಾ ವಹ್ನೌ ದಕ್ಷಿಣಾ ಮೂರ್ತಿ ಮಾಶ್ರಿತಃ ॥೧೪॥

ಸಿದ್ಧಮಂತ್ರೋಽನ್ಯಥಾ ನಾಸ್ತಿ ದೃಷ್ಟ್ವಾ ಸಿದ್ಧ್ಯಾದಯಃ ಪುನಃ ।
ಸಿದ್ಧಮಂತ್ರಃ ಸ್ವಯಂ ಕುರ್ಯಾ ತ್ಪ್ರೇತಸ್ಥಾನೇ ವಿಶೇಷತಃ ॥೧೫॥

ಮಾತೃಸ್ಥಾನೇಽಪಿ ವಾ ವಿದ್ವಾನ್ವೇದ ವೇದಾಂಗ ಪಾರಗಃ ।
ಕೇವಲಂ ಮಂತ್ರಸಿದ್ಧೋ ವಾ ಬ್ರಾಹ್ಮಣಃ ಶಿವಭಾವಿತಃ ॥೧೬॥

---

೧೩–೧೪. ಈಗ ಮಂತ್ರ ಸಿದ್ಧಿ ವಿಧಾನವನ್ನು ಹೇಳುತ್ತಾರೆ:— ಎಲೈ ಋಷಿಗಳೇ, ಭಯಂಕರವಾದ ಅಘೋರವೆಂಬ ಮಂತ್ರವನ್ನು ಒಂದು ಲಕ್ಷಬಾರಿ ಜಪಿಸಿ, ಹತ್ತುಸಾವಿರ ಸಲ ತಿಲಹೋಮವನ್ನು ಮಾಡಿದ ಬಳಿಕ ಬಾಣ ಲಿಂಗದಲ್ಲಾಗಲೀ ಅಥವಾ ಅಗ್ನಿಯಲ್ಲಾಗಲೀ ದಕ್ಷಿಣಾಮೂರ್ತಿಯ ಅವತಾರದ ಪ್ರತಿಮೆಯ ದೃಷ್ಟಿಯನ್ನಿಟ್ಟು ವಿಧಿ ಪೂರ್ವಕವಾಗಿ ಒಂದು ಲಕ್ಷ ಶ್ವೇತಪುಷ್ಪಗಳಿಂದ ಪೂಜಿಸಿದರೆ ಮಂತ್ರ ಸಿದ್ಧಿಯಾಗುವುದು.

೧೫. ಪೂರ್ವೋಕ್ತ ಕ್ರಮವನ್ನನುಸರಿಸಿದರೆ ಈ ಮಂತ್ರವು ಸಿದ್ಧಿಸಿ ಇಷ್ಟಮಂತ್ರವಾಗುತ್ತದೆ. ಅಸಿದ್ಧ ಮಂತ್ರದಿಂದ ಯಾವನೂ ಸಿದ್ಧಿಯನ್ನು ಪಡೆಯಲಾರನು. ಈ ಮಂತ್ರಸಿದ್ಧಿಯುಳ್ಳವನೇ ಈ ಹಿಂದೆ ಹೇಳಿದ ತೊಂದರೆಗಳು ಸಂಭವಿಸುತ್ತಿರಲಾಗಿ ಪುನಃ ಸ್ಮಶಾನದಲ್ಲಿ ಸ್ವತಃ ತಾನೇ ಮಂತ್ರವನ್ನು ಜಪಿಸಬೇಕು.

೧೬. ಅಥವಾ ಜ್ಞಾನಿಯೂ, ವೇದವೇದಾಂಗಗಳನ್ನರಿತವನೂ, ಗುರೂಪದೇಶ ಮಾತ್ರದಿಂದ ಮಂತ್ರಸಿದ್ಧಿಯುಳ್ಳವನೂ, ಶಿವಭಕ್ತನೂ ಆದ ಬ್ರಾಹ್ಮಣನು 'ಮಾತೃಸ್ಥಾನದಲ್ಲಿದರೂ, ಈ ಮಂತ್ರವಿಧಿಯನ್ನು ತನ್ನ ಉದ್ಧಾರಕ್ಕೋಸ್ಕರವಾಗಿ ಯಾಗಲೀ, ಅಥವಾ ರಾಜನ ಉಪಕಾರ ಕ್ಕೋಸ್ಕರವಾಗಲೀ, ಅನುಷ್ಠಾನಮಾಡಬಹುದು.

ಕುರ್ಯಾದ್ವಿಧಿ ಮಿಮಂ ಧೀಮಾನಾತ್ಮನೋಽರ್ಥಂ ನೃಪಸ್ಯ ಚ ।
ಶೂಲಾಷ್ಟಕಂ ನ್ಯಸೇದ್ವಿದ್ವಾ ನ್ಪೂರ್ವಾದೀಶಾನ ಕಾಂತಕಂ ॥೧೭॥

ತ್ರಿಶಿಖಂ ಚ ತ್ರಿಶೂಲಂ ಚ ಚತುರ್ವಿಂಶಚ್ಛಿಖಾಗ್ರತಃ ।
ಅಘೋರ ವಿಗ್ರಹಂ ಕೃತ್ವಾ ಸಂಕಲೀ ಕೃತ ವಿಗ್ರಹಃ ॥೧೮॥

ಸರ್ವನಾಶಕರಂ ಧ್ಯಾತ್ವಾ ಸರ್ವಕರ್ಮಾಣಿ ಕಾರಯೇತ್ ।
ಕಾಲಾಗ್ನಿ ಕೋಟಿಸಂಕಾಶಂ ಸ್ವದೇಹಮಪಿ ಭಾವಯೇತ್ ॥೧೯॥

ಶೂಲಂ ಕಪಾಲಂ ಪಾಶಂ ಚ ದಂಡಂ ಚೈವ ಶರಾಸನಂ ।
ಬಾಣಂ ಡಮರುಕಂ ಖಡ್ಗಂ ಅಷ್ಟಾಯುಧ ಮನುಕ್ರಮಾತ್ ॥೨೦॥

---

೧೭. ನಿಗ್ರಹವಿಧಾನವನ್ನು ಹೇಳುತ್ತಾನೆ :— ಪೂರ್ವದಿಕ್ಕಿನಿಂದ ಈಶಾನ್ಯದವರೆವಿಗೂ ಒಂದೊಂದು ದಿಕ್ಕಿನಲ್ಲಿ ಒಂದೊಂದರಂತೆ ಎಂಟು ತ್ರಿಶೂಲ ಆಯುಧಗಳನ್ನು ಸ್ಥಾಪಿಸಬೇಕು.

೧೮-೧೯. ಮೂರು ಶಿಖೆಗಳಿಂದ ಭಿನ್ನವಾದ ಅಗ್ರದಿಂದ ಯುಕ್ತವಾದ ತ್ರಿಶೂಲಾಕಾರವಾದ ಆಯುಧವನ್ನು ಅಷ್ಟದಿಕ್ಕುಗಳಲ್ಲಿ ಸ್ಥಾಪಿಸಬೇಕು. ಹೀಗೆ ಇಪ್ಪತ್ತುನಾಲ್ಕು ಅಗ್ರಗಳಿಂದ ಯುಕ್ತವಾದ ಆಯುಧಗಳ ಅಗ್ರಗಳಲ್ಲಿ ಅಘೋರರೂಪಿಯಾದ ಈಶ್ವರನ ಆಕೃತಿಯನ್ನು ರಚಿಸಿ ಪ್ರಲಯಕಾರಕನಾದ ಅಘೋರ ರೂಪಿಯಾದ ಶಿವನನ್ನು ಧ್ಯಾನಮಾಡಿ, ಸಕಲ ಕಾರ್ಯಗಳನ್ನೂ ನೆರವೇರಿಸಬೇಕು. ಮತ್ತು ತನ್ನ ದೇಹವನ್ನು ಕೋಟಿ ಸಂಖ್ಯಾಕವಾದ ಪ್ರಲಯಕಾಲದ ಅಗ್ನಿಗೆ ಸದೃಶವಾದ ಪ್ರತಾಪವುಳ್ಳದ್ದನ್ನಾಗಿ ಭಾವಿಸಬೇಕು.

೨೦. ಶೂಲ, ಕಪಾಲ, ಪಾಶ, ದಂಡ, ಶರಾಸನ, (ಧನುಸ್ಸು) ಬಾಣ, ಡಮರುಕ, ಖಡ್ಗ, ಇವು ಎಂಟು ಅಘೋರೇಶನ ಆಯುಧಗಳಾಗಿರುವುವು.

ಅಷ್ಟ ಹಸ್ತಶ್ಚ ವರದಃ ನೀಲಕಂಠೋ ದಿಗಂಬರಃ ।
ಪಂಚ ತತ್ತ್ವ ಸಮಾರೂಢಃ ಹ್ಯರ್ಧ ಚಂದ್ರಧರಃ ಪ್ರಭುಃ ॥೨೧॥

ದಂಷ್ಟ್ರಾ ಕರಾಲ ವದನೋ ರೌದ್ರ ದೃಷ್ಟಿರ್ಭಯಂಕರಃ ।
ಹುಂ ಫಟ್ಕಾರ ಮಹಾಶಬ್ದ ಶಬ್ದಿತಾಖಿಲ ದಿಙ್ಮುಖಃ ॥೨೨॥

ತ್ರಿನೇತ್ರಂ ನಾಗಪಾಶೇನ ಸುಬದ್ಧ ಮುಕುಟಂ ಸ್ವಯಂ ।
ಸರ್ವಾಭರಣ ಸಂಪನ್ನಂ ಪ್ರೇತ ಭಸ್ಮಾವಗುಂಠಿತಂ ॥೨೩॥

ಭೂತೈಃ ಪ್ರೇತೈಃ ಪಿಶಾಚೈಶ್ಚ ಡಾಕಿನೀಭಿಶ್ಚ ರಾಕ್ಷಸೈಃ ।
ಸಂವೃತಂ ಗಜಕೃತ್ತ್ಯಾ ಚ ಸರ್ವ ಭೂಷಣ ಭೂಷಿತಂ ॥೨೪॥

ವೃಶ್ಚಿಕಾಭರಣಂ ದೇವಂ ನೀರ(ಲ) ನೀರದನಿಸ್ವನಂ ।
ನೀಲಾಂಜನಾದ್ರಿ ಸಂಕಾಶಂ ಸಿಂಹಚರ್ಮೋತ್ತರೀಯಕಂ ॥೨೫॥

---

೨೧. ಈಗ ಅಘೋರೇಶನ ಧ್ಯಾನವನ್ನು ಹೇಳುತ್ತಾರೆ:—ಅಘೋರೇಶನು, ಎಂಟು ಕೈಗಳುಳ್ಳವನೂ, ಸಕಲ ಇಷ್ಟಾರ್ಥಗಳನ್ನು ಕೊಡುವವನೂ, ಕಪ್ಪಾದ ಕತ್ತುಳ್ಳವನೂ, ಸಕಲದಿಕ್ಕುಗಳನ್ನೂ ವ್ಯಾಪಿಸಿರುವವನೂ ಪಂಚತತ್ವಗಳಾದ ಪೃಥಿವ್ಯಾದಿಗಳಿಂದ ನಿರ್ಮಿಸಲ್ಪಟ್ಟ ನಂದಿಕೇಶ್ವರ'ನನ್ನು ಆರೋಹಣಮಾಡಿರುವವನೂ. ಶಿರಸ್ಸಿನಲ್ಲಿ ಅರ್ಧ ಚಂದ್ರವನ್ನು ಧರಿಸಿದವನೂ, ನಿಗ್ರಹಾನುಗ್ರಹ ಶಕ್ತಿಯುಳ್ಳವನೂ ಆಗಿರುತ್ತಾನೆ

೨೨. ಕೋರೆದಾಡೆಗಳಿಂದ ವಿಕಾರವಾದ ಮುಖವುಳ್ಳವನೂ, ಉಗ್ರವಾದ ನೋಟವುಳ್ಳವನೂ, ಭಯವನ್ನುಂಟುಮಾಡುವವನೂ, ಹುಂಕಾರ ಫಟ್ಕಾರಗಳಿಂದುಂಟಾದ ಶಬ್ದದಿಂದ ದಿಕ್ಕುಗಳಲ್ಲಿ ಪ್ರತಿಧ್ವನಿಯನ್ನುಂಟುಮಾಡುವವನೂ ಆಗಿರುತ್ತಾನೆ. ( ಮೇಲೆ ಹೇಳಿದಂತೆ ಈಶ್ವರನನ್ನು ಭಾವಿಸಿ ಧ್ಯಾನಮಾಡಬೇಕೆಂದರ್ಥವು. )

೨೩–೨೬. ಅಘೋರರೂಪಿಯಾದ ಈಶ್ವರನನ್ನು ಮುವ್ವತ್ತಾರು ಮಾತ್ರಾಪರಿಮಿತವಾದ ಕಾಲವುಳ್ಳ, ಕುಂಭಕ, ರೇಚಕ, ಪೂರಕಗಳೆಂಬ ಪ್ರಾಣಾಯಾಮತ್ರಯಗಳಿಂದ ಧ್ಯಾನಮಾಡಬೇಕು. ಈ ಅಘೋರರೂಪಿಯಾದ ಈಶ್ವರನು ಮೂರು ಕಣ್ಣುಗಳುಳ್ಳವನೂ, ಶಿರಸ್ಸಿನಲ್ಲಿ ನಾಗಪಾಶದ ವಾಸುಕಿಯನ್ನು ಧರಿಸಿರುವವನೂ, ಸಕಲ ಆ ಭರಣಗಳಿಂದ ಯುಕ್ತನೂ,

**ಧ್ಯಾಯೇದೇವ ಮಘೋರೇಶಂ ಘೋರ ಘೋರತರಂ ಶಿವಂ ।**
**ಷಡ್ವಿಂಶ ದುಕ್ತಮಾತ್ರಾಭಿಃ ಪ್ರಾಣಾಯಾಮೇನ ಸುವ್ರತಾಃ ॥೨೬॥**
**ಮಹಾಮುದ್ರಾ ಸಮಾಯುಕ್ತಃ ಸರ್ವಕರ್ಮಾಣಿ ಸಾಧಯೇತ್ ।**
**ಸಿದ್ಧಮಂತ್ರಸ್ಚಿತಾಗ್ನೌವಾ ಪ್ರೇತಸ್ಥಾನೇ ಯಥಾ ವಿಧಿ ॥೨೭॥**
**ಸ್ಥಾಪಯೇಸ್ಮಧ್ಯ ದೇಶೇತು ಐಂದ್ರೇಯಾಮ್ಯೇ ಚ ವಾರುಣೇ ।**
**ಕೌಬೇರ್ಯಾಂ ವಿಧಿವತ್ಕೃತ್ವಾ ಹೋಮಕುಂಡಾನಿ ಶಾಸ್ತ್ರತಃ ॥೨೮॥**
**ಆಚಾರ್ಯೋ ಮಧ್ಯಕುಂಡೇತು ಸಾಧಕಾಶ್ಚ ದಿಶಾಸು ವೈ ।**
**ಪರಿಸ್ತೀರ್ಯ ವಿಲೋಮೇನ ಪೂರ್ವವಚ್ಛೂಲ ಸಂವೃತಃ ॥೨೯॥**

---

ಸ್ಮಶಾನದಲ್ಲಿರುವ ಭಸ್ಮವನ್ನು ಲೇಪಿಸಿಕೊಂಡಿರುವವನೂ, ಭೂತ, ಪ್ರೇತ, ಪಿಶಾಚ, ಡಾಕಿನೀ, ರಾಕ್ಷಸರು, ಇವರಿಂದ ಪರಿವೃತನೂ, ಗಜಚರ್ಮಾಂಬರ ಧಾರಿಯೂ, ಸರ್ಪವನ್ನು ಆಭರಣವನ್ನಾಗಿ ಇಟ್ಟುಕೊಂಡಿರುವವನೂ, ಚೇಳನ್ನು ಆಭರಣವನ್ನಾಗಿಧರಿಸಿರುವವನೂ, ಮೇಘದಂತೆ ಗಂಭೀರವಾದ ಗರ್ಜನೆಯನ್ನು ಉಂಟುಮಾಡುವವನೂ, ಅಂಜನ ಪರ್ವತದಂತೆ ಕಾಂತಿ ಯುಳ್ಳವನೂ, ಸಿಂಹದ ಚರ್ಮವನ್ನು ಹೊದ್ದು ಕೊಂಡಿರುವವನೂ, ಆಗಿರುತ್ತಾನೆ. ಈ ರೀತಿಯಲ್ಲಿ ಭಾವಿಸಿ ಈಶ್ವರನನ್ನು ಧ್ಯಾನಿಸಬೇಕು.

೨೭–೨೮. ಮಂತ್ರಸಿದ್ಧಿಯನ್ನು ಪಡೆದವನು ಚಿತಾಗ್ನಿಯಲ್ಲಾಗಲಿ, ಶಾಸ್ತ್ರಾನುಸಾರವಾಗಿ ಸ್ಮಶಾನದ ಮಧ್ಯಪ್ರದೇಶದಲ್ಲಿ ಒಂದು ಮಹಾ ಕುಂಡವನ್ನು ನಿರ್ಮಿಸಿ, ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ, ಈ ದಿಕ್ಕುಗಳಲ್ಲಿಯೂ, ಮಹಾ ಮುದ್ರೆಗಳಿಂದ ಕೂಡಿದವನಾಗಿ ವಿಧಿಪೂರ್ವಕ ವಾಗಿ ಕುಂಡಗಳನ್ನು ನಿರ್ಮಿಸಿ ಎಲ್ಲ ಕರ್ಮಗಳನ್ನೂ ನೆರವೇರಿಸಬೇಕು.

೨೯. ಆಚಾರ್ಯನು ಮಧ್ಯಪ್ರದೇಶದಲ್ಲಿರುವ ಮಹಾಕುಂಡದ ಸಮೀಪದಲ್ಲಿಯೂ, ಋತ್ವಿಜರು ಚತುರ್ದಿಕ್ಕುಗಳಲ್ಲಿರುವ ಕುಂಡಗಳ ಸಮೀಪದಲ್ಲಿಯೂ, ಕುಳಿತುಕೊಂಡು ಹೋಮವನ್ನು ಮಾಡಬೇಕು. ಹಿಂದೆ ಹೇಳಿದಂತೆ ಆಯುಧಗಳನ್ನು ಸುತ್ತಲೂ, ಎಂಟು ದಿಕ್ಕುಗಳಲ್ಲಿಯೂ ಸ್ಥಾಪಿಸಬೇಕು. ಪರಿಸ್ತರಣವನ್ನು ವಿಪರೀತಕ್ರಮದಲ್ಲಿ ಮಾಡಬೇಕು.

ಕಾಲಾಗ್ನಿ ಪೀಠ ಮಧ್ಯಸ್ಥಃ ಸ್ವಯಂ ಶಿಷ್ಯೈಶ್ಚ ತಾದೃಶೈಃ ।
ಧ್ಯಾತ್ವಾ ಘೋರಮಘೋರೇಶಂ ದ್ವಾತ್ರಿಂಶಾಕ್ಷರ ಸಂಯುತಂ ॥

ವಿಭೀತಕೇನ ವೈ ಕೃತ್ವಾ ದ್ವಾದಶಾಂಗುಲ ಮಾನತಃ ।
ಪೀಠೇ ನ್ಯಸ್ಯ ನೃಪೇಂದ್ರಸ್ಯ ಶತ್ರುಮಂಗಾರಕೇಣ ತು ॥೩೧॥

ಕುಂಡಸ್ಯಾಧಃ ಖನೇಚ್ಛತ್ರುಂ ಬ್ರಾಹ್ಮಣಃ ಕ್ರೋಧಮೂರ್ಚ್ಛಿತಃ ।
ಅಧೋಮುಖೋರ್ಧ್ವ ಪಾದಂ ತು ಸರ್ವ ಕುಂಡೇಷು ಯತ್ನತಃ ॥

ಶ್ಮಶಾನಾಂಗಾರ ಮಾನೀಯ ತುಷೇಣ ಸಹ ದಾಹಯೇತ್ ।
ತತ್ರಾಗ್ನಿಂ ಸ್ಥಾಪಯೇತ್ತೂಷ್ಣೀಂ ಬ್ರಹ್ಮಚರ್ಯ ಪರಾಯಣಃ ॥೩೩॥

ಮಾಯೂರಾಸ್ತ್ರೇಣ ನಾಭ್ಯಾಂ ತು ಜ್ವಲನಂ ದೀಪಯೇತ್ತತಃ ।
ಕಂಚುಕಂ ತುಷ ಸಂಯುಕ್ತೈಃ ಕಾರ್ಪಾಸಾಸ್ಥಿ ಸಮನ್ವಿತೈಃ ॥೩೪॥

---

೩೦–೩೨. ಆಚಾರ್ಯನು ಕಾಲಾಗ್ನಿ ಪೀಠವೆಂದು ಸಂಜ್ಞೆಯುಳ್ಳ ಪೀಠದಲ್ಲಿ ಕುಳಿತುಕೊಂಡವನಾಗಿ ತನ್ನ ಶಿಷ್ಯರೊಂದಿಗೆ ಮುವ್ವತ್ತೆರಡು ಅಕ್ಷರಗಳಿಂದ ಯುಕ್ತವಾದ ಮಂತ್ರದಿಂದ ಅಘೋರೇಶನ ಧ್ಯಾನವನ್ನು ಮಾಡಿ, ರಾಜನ ಶತ್ರುವನ್ನು ಹನ್ನೆರಡು ಅಂಗುಲ ಪರಿಮಾಣದವಿಭೀತಕ ವೆಂಬ ಕಾಷ್ಠದಿಂದ ಅವನತ ನನ್ನಾಗಿ ಮಾಡಿ ಕ್ರೋಧಾವಿಷ್ಟನಾಗಿ ಸ್ಮಶಾನದ ಇದ್ದಿಲಿನೊಂದಿಗೆ ಆ ಶತ್ರುವಿನ ವಿಗ್ರವನ್ನು ಕುಂಡದಮಧ್ಯ ಭಾಗದಲ್ಲಿ ಮಣ್ಣುಗೂಡಿಸಿ, ಇದೇ ರೀತಿಯಲ್ಲಿ ಮುಖವನ್ನು ಕೆಳಭಾಗ ದಲ್ಲಿಯೂ, ಪಾದವನ್ನು ಮೇಲುಭಾಗದಲ್ಲಿಯೂ, ಇರುವಂತೆ ಮಾಡಿ, ಹೂಳಿ, ಸಕಲ ಕುಂಡಗಳಲ್ಲಿಯೂ ಆ ವಿಗ್ರವನ್ನೂ ಮಣ್ಣುಗೂಡಿಸಬೇಕು.

೩೩. ಶ್ಮಶಾನದ ಬೆಂಕಿಯ ಕೆಂಡವನ್ನು ತಂದು ಹೊಟ್ಟನೊಂದಿಗೆ ಆ ಶತ್ರುವನ್ನು ದಾಹಮಾಡಬೇಕು. ಬಳಿಕ ಬಹ್ಮಚರ್ಯವುಳ್ಳವನಾಗಿ ಮೌನ ಮುದ್ರೆಯನ್ನಾ ಚರಿಸುತ್ತಾ, ಆಚಾರ್ಯನು ಆ ಅಗ್ನಿಯನ್ನು ಅಲ್ಲಿಯೇ ಸ್ಥಾಪಿಸಬೇಕು.

೩೪–೩೫. ಮಯೂರಾಸ್ತ್ರದ ಪ್ರಭಾವದಿಂದ ಕುಂಡದಲ್ಲಿ ಅಗ್ನಿಯನ್ನು ಪ್ರಜ್ವಲನಮಾಡಿ, ರಕ್ತವಸ್ತ್ರದಂತೆ ಕೆಂಪಾಗಿರುವ ಕವಚವನ್ನು ಧರಿಸಿ ಹೊಟ್ಟನಿಂದ ಮಿಶ್ರಿತವಾದ ಹತ್ತಿಯ ಬೀಜದಿಂದಲೂ, ಕೈಗಾಣದಿಂದ

ರಕ್ತವಸ್ತ್ರಸಮಂ ಮಿಶ್ರೈ ಹೋಮದ್ರವ್ಯೈ ರ್ವಿಶೇಷತಃ ।
ಹಸ್ತಯಂತ್ರೋದ್ಭವೈಸ್ತೈಲೈಃ ಸಹ ಹೋಮಂ ತು ಕಾರಯೇತ್ ॥
ಅಷ್ಟೋತ್ತರ ಸಹಸ್ರಂ ತು ಹೋಮಯೇದನು ಪೂರ್ವಶಃ ।
ಕೃಷ್ಣಪಕ್ಷೇ ಚತುರ್ದಶ್ಯಾಂ ಸಮಾರಭ್ಯ ಯಥಾಕ್ರಮಂ ॥೩೬॥
ಅಷ್ಟಮ್ಯಂತಂ ತಥಾಂಗಾರ ಮಂಡಲಸ್ಥಾನವರ್ಜಿತಃ ।
ಏವಂ ಕೃತೇ ನೃಪೇಂದ್ರಸ್ಯ ಶತ್ರವಃ ಕುಲಜೈಃ ಸಹ ॥೩೭॥
ಸರ್ವದುಃಖ ಸಮೋಪೇತಾಃ ಪ್ರಯಾಂತಿ ಯಮಸಾದನಂ ।
ಮಂತ್ರೇಣಾನೇನ ಚಾದಾಯ ನೃಕಪಾಲೇ ನಖಂ ತಥಾ ॥೩೮॥
ಕೇಶಂ ನೃಣಾಂ ತಥಾಂಗಾರಂ ತುಷಂ ಕಂಚುಕಮೇವ ಚ ।
ಚೀರಚ್ಛಟಾಂ ರಾಜಧೂಲೀಂ ಗೃಹ ಸಂಮಾರ್ಜನಸ್ಯ ವಾ ॥೩೯॥
ವಿಷಸರ್ಪಸ್ಯ ದಂತಾನಿ ವೃಷದಂತಾನಿ ಯಾನಿ ತು ।
ಗವಾಂ ಚೈವ ಕ್ರಮೇಣೈವ ವ್ಯಾಘ್ರದಂತ ನಖಾನಿ ಚ ॥೪೦॥

---

ತಯಾರಿಸಲ್ಪಟ್ಟ ಎಣ್ಣೆಯಿಂದಲೂ, ಶಿಷ್ಯರೊಂದಿಗೂ ಹೋಮವನ್ನು ಮಾಡಬೇಕು.

೩೬. ಕೃಷ್ಣಪಕ್ಷದಲ್ಲಿ ಚತುರ್ದಶಿಯಿಂದ ಮೊದಲ್ಗೊಂಡು ಶುಕ್ಲ ಪಕ್ಷದ ಅಷ್ಟಮಿಯ ಪರ್ಯಂತವೂ, ಅಗ್ನಿ ಪ್ರಜ್ವಲನವನ್ನು ಮಾಡಿ, ಕ್ರಮವಾಗಿ ಸಾವಿರದ ಎಂಟಾವೃತ್ತಿ ಹೋಮವನ್ನು ಆಚರಿಸಬೇಕು. ಆಮೇಲೆ ಅಂಗಾರ ಮಂಡಲಸ್ಥಾನವನ್ನು ಬಿಡಬೇಕು.

೩೭. ಈ ರೀತಿಯಲ್ಲಿ ಅನುಷ್ಠಾನವನ್ನಾಚರಿಸಿದರೆ ರಾಜನ ಶತ್ರುಗಳು ತಮ್ಮ ವಂಶೋತ್ಪನ್ನರಾದವರೊಂದಿಗೆ ಸಕಲ ದುಃಖಗಳನ್ನೂ ಅನುಭವಿಸುವವರಾಗಿ ಯಮಾಲಯವನ್ನು ಹೊಂದುತ್ತಾರೆ ಎಂದರೆ ಮೃತರಾಗುತ್ತಾರೆ.

೩೮–೪೨. ಈ ಅಘೋರ ಮಂತ್ರದಿಂದ ಶತ್ರುವನ್ನು ನಾಶಮಾಡಿಸುವ ಬೇರೊಂದು ಕ್ರಮವನ್ನು ಹೇಳುತ್ತಾರೆ:— ಮನುಷ್ಯನ ಶಿರಃ ಕಪಾಲ, ಉಗುರುಗಳನ್ನೂ ತಲೆಯ ಕೂದಲನ್ನೂ. ಇದ್ದಿಲನ್ನೂ, ಭತ್ತದ ಹೊಟ್ಟನ್ನೂ, ಹಾವಿನ ಪೊರೆಯನ್ನೂ, ನಾರುಮಡಿಯ ತುದಿಯನ್ನೂ, ರಾಜ

ತಥಾ ಕೃಷ್ಣ ಮೃಗಾಣಾಂ ಚ ಬಿಡಾಲಸ್ಯ ಚ ಪೂರ್ವವತ್ ।
ನಕುಲಸ್ಯ ಚ ದಂತಾನಿ ವರಾಹಸ್ಯ ವಿಶೇಷತಃ ॥೪೧॥

ದಂಷ್ಟ್ರಾಣಿ ಸಾಧಯಿತ್ವಾ ತು ಮಂತ್ರೇಣಾನೇನ ಸುವ್ರತಾಃ ।
ಜಪೇದಷ್ಟೋತ್ತರ ಶತಂ ಮಂತ್ರಂ ಚಾಘೋರಮುತ್ತಮಂ ॥೪೨॥

ತತ್ಕಪಾಲಂ ನಖಂ ಕ್ಷೇತ್ರೇ ಗೃಹೇ ವಾ ನಗರೇಽಪಿ ವಾ ।
ಪ್ರೇತಸ್ಥಾನೇಽಪಿ ವಾ ರಾಷ್ಟ್ರೇ ಮೃತವಸ್ತ್ರೇಣ ವೇಷ್ಟಯೇತ್ ॥೪೩॥

ಶತ್ರೋರಷ್ಟಮ ರಾಶೌ ವಾ ಪರಿವಿಷ್ಟೇ ದಿವಾಕರೇ ।
ಸೋಮೇ ವಾ ಪರಿವಿಷ್ಟೇ ತು ಮಂತ್ರೇಣಾನೇನ ಸುವ್ರತಾಃ ॥೪೪॥

---

ಮಾರ್ಗದ ಧೂಳನ್ನಾಗಲೀ ಅಥವಾ ಕಸಪರಿಕೆಯ ಧೂಳನ್ನಾಗಲೀ, ವಿಷವುಳ್ಳ ಸರ್ಪದ ಹಲ್ಲುಗಳನ್ನೂ, ವೃಷಭದ ಹಲ್ಲುಗಳನ್ನೂ, ಗೋವುಗಳ ಹಲ್ಲುಗಳನ್ನೂ ಹುಲಿಯ ದಂತ ಮತ್ತು ಉಗುರುಗಳನ್ನೂ ಮತ್ತು ಜಿಂಕೆಯ ಹಲ್ಲು ಮತ್ತು ಉಗುರುಗಳನ್ನೂ, ಬೆಕ್ಕಿನ ಹಲ್ಲು ಮತ್ತು ಉಗುರುಗಳನ್ನೂ ಮುಂಗಸಿಯ ಹಲ್ಲುಗಳನ್ನೂ ಮುಖ್ಯವಾಗಿ ಹಂದಿಯ ಕೋರೆ ದಾಡೆಗಳನ್ನೂ ಅಘೋರ ಮಂತ್ರದ ಸಹಾಯದಿಂದ ಪಡೆದು, ಅಘೋರ ಮಂತ್ರವನ್ನು ನೂರೆಂಟು ಭಾರಿ ಜಪಿಸಬೇಕು.

೪೩–೪೪. ಅಘೋರ ಮಂತ್ರವನ್ನು ಪಠಿಸಿ, ಮೇಲೆ ಹೇಳಿರುವ ಮನುಷ್ಯನ ಕಪಾಲವನ್ನೂ ಮತ್ತು ಇತರ ದಂತ ನಖಾದಿಗಳನ್ನೂ ಪ್ರೇತ ವಸ್ತ್ರದಿಂದ ವೇಷ್ಟನಮಾಡಿಸಿ, ಶತ್ರುವಿನ ಅಷ್ಟಮಸ್ಥಾನದಲ್ಲಿ ಸೂರ್ಯನಾಗಲೀ, ಅಥವಾ ಚಂದ್ರನಾಗಲೀ ಇರುವ ವೇಳೆಯಲ್ಲಿ, ಶತ್ರುವಿನ ಮನೆಯಲ್ಲಾಗಲೀ, ಅಥವಾ ಅವನ ಕ್ಷೇತ್ರ (ಹೊಲ ಮುಂತಾದದ್ದು) ದಲ್ಲಾಗಲೀ ಅಥವಾ ಪಟ್ಟಣದ ಮಧ್ಯಭಾಗದಲ್ಲಾಗಲೀ ಸ್ಥಾಪಿಸಬೇಕು.

ಪೂರ್ವೋಕ್ತ ರೀತಿಯಂತೆ ಅನುಸರಿಸಿದರೆ ಹಾಗೆ ಆಚರಿಸಿದವನ ಶತ್ರುವು ಸ್ಥಾನ ಭ್ರಷ್ಟನಾಗುವನು. ಮತ್ತು ಮರಣವನ್ನೂ ಹೊಂದುವನು.

ಸ್ಥಾನನಾಶೋ ಭವೇತ್ತಸ್ಯ ಶತ್ರೋರ್ನಾಶಶ್ಚ ಜಾಯತೇ ।
ಶತ್ರೋಃ ರಾಜ್ಞಃ ಸಮಾಲಿಖ್ಯ ಗಮನೇ ಸಮುಪಸ್ಥಿತೇ ॥೪೫॥
ಭೂತಲೇ ದರ್ಪಣ ಪ್ರಖ್ಯೇ ವಿತಾನೋಪರಿ ಶೋಭಿತೇ ।
ಚತುಸ್ತೋರಣ ಸಂಯುಕ್ತೇ ದರ್ಭಮಾಲಾ ಸಮಾವೃತೇ ॥೪೬॥
ವೇದಾಧ್ಯಯನ ಸಂಪನ್ನೇ ರಾಷ್ಟ್ರೇ ವೃದ್ಧಿ ಪ್ರಕಾಶಕೇ ।
ದಕ್ಷಿಣೇನ ತು ಪಾದೇನ ಮೂರ್ಧ್ನಿ ಸಂತಾಡಯೇತ್ಸ್ವಯಂ ॥೪೭॥
ಏವಂ ಕೃತೇ ನೃಪೇಂದ್ರಸ್ಯ ಶತ್ರುನಾಶೋ ಭವಿಷ್ಯತಿ ।
ಸ್ವರಾಷ್ಟ್ರಪತಿ ಮುದ್ದಿಶ್ಯ ಯಃ ಕುರ್ಯಾದಾಭಿಚಾರಿಕಂ ॥೪೮॥
ಸ ಆತ್ಮಾನಂ ನಿಹತ್ಯೈವ ಸ್ವಕುಲಂ ನಾಶಯೇತ್ಕುಧೀಃ ।
ತಸ್ಮಾತ್ ಸ್ವರಾಷ್ಟ್ರಗೋಪ್ತಾರಂ ನೃಪತಿಂ ಪಾಲಯೇತ್ಸದಾ ॥೪೯॥

---

೪೫-೪೭. ಶತ್ರು ನಾಶದಲ್ಲಿ ಇನ್ನೊಂದು ಬಗೆಯನ್ನು ಹೇಳುತ್ತಾನೆ:—ರಾಜನು ಯುದ್ಧಕ್ಕೋಸ್ಕರ ಹೊರಡುವ ವೇಳೆಯು ಸನ್ನಿಹಿತವಾಗಲು ಅವನ ಶತ್ರುವಿನ ಚಿತ್ರವನ್ನು ಕನ್ನಡಿಯಂತೆ ಸ್ವಚ್ಛವಾಗಿಯೂ, ನಾಲ್ಕು ತೋರಣಗಳಿಂದ ಯುಕ್ತವಾಗಿಯೂ, ದರ್ಭೆಮಾಲೆಗಳಿಂದ ವೇಷ್ಟಿತವಾಗಿಯೂ, ಇರುವಂತೆ ವೇದಾಧ್ಯಯನಸಂಪನ್ನರಾದ ಬ್ರಾಹ್ಮಣರಿಂದ ಪವಿತ್ರೀಕರಿಸಲ್ಪಟ್ಟದ್ದಾಗಿ ಇರುವ ಪ್ರದೇಶದಲ್ಲಿ ಬರೆದು ಅದನ್ನು ಮಂತ್ರಸಿದ್ಧಿಯುಳ್ಳ ಆಚಾರ್ಯನು ತನ್ನ ಬಲಗಡೆಯ ಕಾಲಿನಿಂದ ಚೆನ್ನಾಗಿ ಒದೆಯಬೇಕು. ಹೀಗೆ ಮಾಡಿದರೆ ರಾಜನ ಶತ್ರುವಿನ ಮರಣವು ಆಗುವುದು.

೪೮. ತನ್ನ ದೇಶದ ರಾಜನನ್ನು ಸಂಹರಿಸುವ ಉದ್ದೇಶದಿಂದ ಯಾವ ದುಷ್ಟನು ಪೂರ್ವೋಕ್ತವಾದ ಕ್ರಮವನ್ನು ಕೈಗೊಳ್ಳುತ್ತಾನೋ ಅವನು ತನ್ನನ್ನೂ ಮತ್ತು ತನ್ನ ಕುಲವನ್ನೂ ನಾಶಮಾಡುವವನಾಗುತ್ತಾನೆ.

೪೯. ಆದುದರಿಂದ ತನ್ನ ದೇಶದ ದೊರೆಯನ್ನು ಯಾವಾಗಲೂ ಯಾವ ತೊಂದರೆಗೂ ಈಡಾಗದಂತೆ ಮಣಿಮಂತ್ರೌಷಧಿಗಳಿಂದ ಕಾಪಾಡುತ್ತಿರಬೇಕು.

ಮಂತ್ರೌಷಧಿ ಕ್ರಿಯಾದ್ಯೈಶ್ಚ ಸರ್ವಯತ್ನೇನ ಸರ್ವದಾ ।
ಏತದ್ರಹಸ್ಯಂ ಕಥಿತಂ ನ ದೇಯಂ ಯಸ್ಯಕಸ್ಯಚಿತ್ ॥೫೦॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
ಪಂಚಾಶತ್ತಮೋಽಧ್ಯಾಯಃ

---

೫೦. ಮೇಲೆಹೇಳಿರುವ ಮಂತ್ರ, ಔಷಧಿ, ನಿಗ್ರಹಕ್ರಿಯೆ, ಮುಂತಾದ ಎಲ್ಲಬಗೆಯ ಪ್ರಯತ್ನದಿಂದಲೂ ಧಾರ್ಮಿಕನಾದ ದೊರೆಯನ್ನು ಯಾವಾಗಲೂ ಕಾಪಾಡುತ್ತಿರಬೇಕು. ಎಲೈ ಋಷಿಗಳೇ, ಗುಪ್ತವಾದ ಈ ವಿಷಯವನ್ನು ನಾನು ನಿಮಗೆ ಹೇಳಿರುವೆನು. ಇದನ್ನು ಅನರ್ಹನಾದ ಯಾವನಿಗೂ ಹೇಳಬಾರದು. ಅರ್ಹನಾದವನಿಗೆ ಮಾತ್ರ ಉಪದೇಶ ಮಾಡುತ್ತಾ ಗುಪ್ತವಾಗಿ ಕಾಪಾಡಿಕೊಂಡಿರಬೇಕು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರ ಭಾಗದಲ್ಲಿ
ಐವತ್ತನೆಯ ಅಧ್ಯಾಯವು ಮುಗಿದುದು.

# ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
## ಏಕಪಂಚಾಶತ್ತಮೋಽಧ್ಯಾಯಃ

॥ ಋಷಯ ಊಚುಃ ॥

ನಿಗ್ರಹೋ ಘೋರರೂಪೋಽಯಂ ಕಥಿತೋಽಸ್ಮಾಕ ಮುತ್ತಮಂ ।
ವಜ್ರವಾಹನಿಕಾಂ ವಿದ್ಯಾಂ ವಕ್ತು ಮರ್ಹಸಿ ಸತ್ತಮ ॥ ೧ ॥

॥ ಸೂತ ಉವಾಚ ॥

ವಜ್ರವಾಹನಿಕಾ ನಾಮಾ ಸರ್ವಶತ್ರು ಭಯಂಕರೀ ।
ಅನಯಾ ಸೇಚಯೇದ್ವಜ್ರಂ ನೃಪಾಣಾಂ ಸಾಧಯೇತ್ತಥಾ ॥ ೨ ॥

ವಜ್ರಂ ಕೃತ್ವಾ ವಿಧಾನೇನ ತದ್ವಜ್ರ ಮಭಿಷಿಚ್ಯ ಚ ।
ಅನಯಾ ವಿದ್ಯಯಾ ತಸ್ಮಿನ್ವಿನ್ಯಸೇತ್ಕಾಂಚನೇನ ಚ ॥ ೩ ॥

---

### ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಐವತ್ತೊಂದನೆಯ ಅಧ್ಯಾಯವು

೧. ಋಷಿಗಳು ಹೇಳಿದರು. ಓ ಸೂತಮಹರ್ಷಿಯೇ, ಅಘೋರ ಮಂತ್ರದಿಂದ ಶತ್ರುನಿಗ್ರಹವನ್ನು ಮಾಡುವ ಕ್ರಮವನ್ನು ಇದುವರೆಗೆ ನೀನು ನಮಗೆ ಹೇಳಿರುತ್ತೀಯೆ. ಇನ್ನುಮುಂದೆ ವಜ್ರವಾಹನಿಕೆಯೆಂಬ ವಿದ್ಯೆಯನ್ನು ಹೇಳುವವನಾಗು.

೨. ಸೂತನು ಹೇಳಿದನು. ಈ ವಜ್ರವಾಹನಿಕೆಯೆಂಬ ವಿದ್ಯೆಯು ಎಲ್ಲಶತ್ರುಗಳಿಗೂ ಭಯವನ್ನುಂಟುಮಾಡುವುದಾಗಿರುತ್ತದೆ. ಈ ವಿದ್ಯೆಯಿಂದ ವಜ್ರವನ್ನು ಪ್ರೋಕ್ಷಿಸಿ, ಆ ವಜ್ರವನ್ನು ರಾಜರುಗಳಿಗೆ ಸಮರ್ಪಿಸಬೇಕು.

೩. ವಜ್ರವನ್ನು ವಿಧಿಪೂರ್ವಕವಾಗಿ ಸಂಸ್ಕರಿಸಿ ಅಭಿಷೇಕವನ್ನು ಮಾಡಿ, ವಜ್ರವಾಹನಿಕಾವಿದ್ಯೆಯಿಂದ ಆ ವಜ್ರದಲ್ಲಿ ಕಾಂಚನ ಶಲಾಕೆ (ಸುವರ್ಣದ ಕಡ್ಡಿ) ಯಿಂದ ಮಂತ್ರವನ್ನು ಬರೆಯಬೇಕು.

ತತಶ್ಚಾಕ್ಷರ ಲಕ್ಷಂ ಚ ಜಪೇದ್ವಿದ್ವಾನ್ಸಮಾಹಿತಃ ।
ವಜ್ರೀ ದಶಾಂಶಂ ಜುಹುಯಾ ದ್ವಜ್ರಕುಂಡೇ ಘೃತಾದಿಭಿಃ ॥ ೪ ॥
ತದ್ವಜ್ರಂ ಗೋಪಯೇನ್ನಿತ್ಯಂ ದಾಪಯೇತ್ ನೃಪತೇ ಸ್ತತಃ ।
ತೇನ ವಜ್ರೇಣ ವೈ ಗಚ್ಛನ್ ಶತ್ರೂನ್ ಜೀಯಾದ್ರಣಾಜಿರೇ ॥ ೫ ॥
ಪುರಾ ಪಿತಾಮಹೇನೈವ ಲಬ್ಧಾ ವಿದ್ಯಾ ಪ್ರಯತ್ನತಃ ।
ದೇವೀ ಶಕ್ರೋಪಕಾರಾರ್ಥಂ ಸಾಕ್ಷಾದ್ವಜ್ರೇಶ್ವರೀ ತಥಾ ॥ ೬ ॥
ಪುರಾ ತ್ವಷ್ಟ್ರಾ ಪ್ರಜಾನಾಥೋ ಹತಪುತ್ರಃ ಸುರೇಶ್ವರಾತ್ ।
ವಿದ್ಯಯಾ ಹರತಃ ಸೋಮ ಮಿಂದ್ರ ವೈರೇಣ ಸುವ್ರತಾಃ ॥ ೭ ॥

---

೪. ಬಳಿಕ ಒಂದು ಲಕ್ಷಸಂಖ್ಯಾಕವಾಗಿ ಮಂತ್ರಾಕ್ಷರಗಳನ್ನು ಅಷ್ಟುಲಕ್ಷಸಲ ಜಪಿಸಿ, ವಜ್ರವಿಶಿಷ್ಟನಾದ ವಿದ್ವಾಂಸನು ಹತ್ತು ಸಾವಿರ ಬಾರಿ ವಜ್ರಕುಂಡದಲ್ಲಿ ಘೃತಾದಿ ಹೋಮದ್ರವ್ಯಗಳಿಂದ ಹೋಮವನ್ನು ಮಾಡಬೇಕು.

೫. ವಜ್ರಪ್ರಯೋಗವನ್ನೂ ಮತ್ತು ಅದರ ಫಲವನ್ನೂ ಈಗ ಹೇಳುತ್ತಾರೆ:—ಆ ವಜ್ರವನ್ನು ಸರ್ವದಾ ಗುಪ್ತವಾಗಿ ರಕ್ಷಿಸಿ ರಾಜನಿಗೆ ಸಮರ್ಪಿಸಬೇಕು. ರಾಜನು ಆ ವಜ್ರವನ್ನು ತನ್ನೊಂದಿಗೆ ರಣಾಂಗಣಕ್ಕೆ ತೆಗೆದುಕೊಂಡು ಹೋಗಿ ಸಂಸ್ಕೃತವಾಗಿರುವ ಅದರ ಸಹಾಯದಿಂದ ಶತ್ರುಗಳನ್ನು ಯುದ್ಧದಲ್ಲಿ ಗೆಲ್ಲಬೇಕು.

೬. ಹಿಂದೆ ದೇವಾಸುರರ ಯುದ್ಧವು ನಡೆಯುತ್ತಿರಲು ಅದರಲ್ಲಿ ಇಂದ್ರನಿಗೆ ಸಹಾಯಾರ್ಥವಾಗಿ ಬ್ರಹ್ಮನು ಪ್ರಯತ್ನ ಪುರಃಸರವಾಗಿ ಈ ವಜ್ರವಾಹನಿಕಾ ವಿದ್ಯೆಯನ್ನು ಮಹೇಶ್ವರನಿಂದ ಪಡೆದನು.

೭-೯. ಹಿಂದೆ ಇಂದ್ರನು ಬ್ರಹ್ಮನಿಂದ ಉಪದೇಶಿಸಲ್ಪಟ್ಟ ಈ ವಿದ್ಯೆಯಿಂದ ಪ್ರಜಾಪತಿಯಾದ ತ್ವಷ್ಟೃ ಬ್ರಹ್ಮನ ಮಗನಾದ ವಿಶ್ವರೂಪನನ್ನು ಸಂಹರಿಸಲು, ಕ್ರೋಧಾವಿಷ್ಟನಾದ ಆ ಬ್ರಹ್ಮನು ಮಾಡಿದಯಾಗದಲ್ಲಿ ಅಧಿಕಾರಯುತವಾಗಿ ಇಂದ್ರನ ಭಾಗಕ್ಕೆ ಸಲ್ಲತಕ್ಕ ಸೋಮರಸರೂಪವಾದ ಹವಿಸ್ಸನ್ನು ಇಂದ್ರನು ಅಪೇಕ್ಷಿಸಲು, ಅವನನ್ನು ಕುರಿತು ಹೀಗೆಂದು ಹೇಳಿದನು. ಎಲೈಶಕ್ರನೇ, ನೀನು ನನ್ನ ಪುತ್ರನನ್ನು ಸಂಹರಿಸಿರುವುದರಿಂದ ಈ

ತಸ್ಮಿನ್ ಯಜ್ಞೇ ಯಥಾಪ್ರಾಪ್ತಂ ವಿಧಿನೋಪಕೃತಂ ಹವಿಃ ।
ತದೈಚ್ಛತ ಮಹಾಬಾಹುಃ ವಿಶ್ವರೂಪ ವಿಮರ್ದನಃ ॥ ೮ ॥

ಮತ್ಪುತ್ರ ಮವಧೀಃ ಶಕ್ರ ನ ದಾಸ್ಯೇ ತವ ಶೋಭನಂ ।
ಭಾಗಂ ಭಾಗಾರ್ಹತಾ ನ್ನೈವ ವಿಶ್ವರೂಪೋ ಹತಸ್ತ್ವಯಾ ॥ ೯ ॥

ಇತ್ಯುಕ್ತ್ವಾ ಚಾಶ್ರಮಂ ಸರ್ವಂ ಮೋಹಯಾಮಾಸ ಮಾಯಯಾ ।
ತತೋ ಮಾಯಾಂ ವಿನಿರ್ಭಿದ್ಯ ವಿಶ್ವರೂಪ ವಿಮರ್ದನಃ ॥೧೦॥

ಪ್ರಸಹ್ಯ ಸೋಮ ಮಪಿಬತ್ಸಗಣೈಶ್ಚ ಶಚೀಪತಿಃ ।
ತತಸ್ತಚ್ಛೇಷ ಮಾದಾಯ ಕ್ರೋಧಾವಿಷ್ಟಃ ಪ್ರಜಾಪತಿಃ ॥೧೧॥

ಇಂದ್ರಸ್ಯ ಶತ್ರೋ ವರ್ಧಸ್ವ ಸ್ವಾಹೇತ್ಯ ಗ್ನೌಜುಹಾವಹ ।

ತತಃ ಕಾಲಾಗ್ನಿ ಸಂಕಾಶೋ ವರ್ತನಾ ದ್ವೃತ್ರ ಸಂಜ್ಞಿತಃ ।
ಪ್ರಾದುರಾಸೀತ್ಸುರೇಶಾರಿ ದುರ್ದ್ರಾವ ಚ ವೃಷಾಂತಕಃ ॥೧೨॥

---

ಯಜ್ಞದಲ್ಲಿ ನಿನ್ನಭಾಗವಾದ ಈ ಸೋಮರಸವನ್ನು ನಿನಗೆ ಕೊಡುವುದಿಲ್ಲ. ಎಂದು ಹೇಳಿದನು. ಹೀಗೆಂದು ಹೇಳಿ ಆ ಪ್ರಜಾ ನಾಥನಾದ ತ್ವಷ್ಟ್ರುಬ್ರಹ್ಮನು ತನ್ನ ಮಾಯೆಯಿಂದ ಸಕಲ ಆಶ್ರಮವನ್ನೂ ಮೋಹಗೊಳಿಸಿದನು.

೧೦ ಹೀಗಾಗಲು ವಿಶ್ವರೂಪ ಸಂಹಾರಕನಾದ ಶಚೀಪತಿಯು ಆ ಮಾಯೆಯನ್ನು ಈ ವಿದ್ಯಾಮಹಿಮೆಯಿಂದ ಹೋಗಲಾಡಿಸಿ ತನಗೆ ಭಾಗವಾದಸೋಮರಸವನ್ನು ತನ್ನ ಪರಿವಾರದೊಂದಿಗೆ ಪಾನಮಾಡಿದನು.

೧೧. ಬಳಿಕ ಇದನ್ನುನೋಡಿ ಕ್ರೋಧಾವಿಷ್ಟನಾದತ್ವಷ್ಟ್ರುಬ್ರಹ್ಮನು ಇಂದ್ರನು ಪಾನಮಾಡಿ ಉಳಿದ ಸೋಮರಸವನ್ನು "ಇಂದ್ರಸ್ಯ ಶತ್ರೋ ವರ್ಧಸ್ವ ಸ್ವಾಹಾ" ಎಂದುಹೇಳಿ ಪುನಃ ಹೋಮವನ್ನು ಮಾಡಿದನು. (ಇಂದ್ರಸ್ಯ ಶತ್ರೋವರ್ಧಸ್ವ ಎಂದರೆ ಇಂದ್ರನ ಶತ್ರುವಾಗಿ ಒಬ್ಬನು ಹುಟ್ಟಲಿ. ಎಂದರ್ಥವು)

೧೨. ಈರೀತಿಯಲ್ಲಿ ಹೋಮಮಾಡಲು, ಅನಂತರದಲ್ಲಿ ಪ್ರಲಯ ಕಾಲಾಗ್ನಿಗೆ ಸದೃಶನಾಗಿಯೂ, ಇಂದ್ರನಿಗೆ ಶತ್ರುವೂ ಆದ ವೃತ್ರನೆಂದು ಸಂಜ್ಞೆಯುಳ್ಳ ರಾಕ್ಷಸನು ಹುಟ್ಟಿದನು. ಮತ್ತು ಅವನು ಇಂದ್ರನನ್ನು ಕೊಲ್ಲಲು ಅಟ್ಟಿಸಿಕೊಂಡು ಹೋದನು.

ತತಃ ಕಿರೀಟೀ ಭಗವಾನ್ ಪರಿತ್ಯಜ್ಯ ದಿವಂ ಕ್ಷಣಾತ್ ।
ಸಹಸ್ರನೇತ್ರಃ ಸಗಣೋ ದುದ್ರಾವ ಭಯವಿಹ್ವಲಃ ॥೧೩॥
ತದಾ ತಮಾಹ ಸ ವಿಭುಃ ಹೃಷ್ಟೋ ಬ್ರಹ್ಮಾ ಚ ವಿಶ್ವಸೃಟ್ ।
ತ್ಯಕ್ತ್ವಾ ವಜ್ರಂ ತನೇತೇನ ಜಹೀತ್ಯರಿ ಮರಿಂದಮಃ ॥೧೪॥
ಸೋಽಪಿ ಸನ್ನಹ್ಯ ದೇವೇಂದ್ರೋ ದೇವೈಃ ಸಾರ್ಧಂ ಮಹಾಭುಜಃ ॥
ನಿಹತ್ಯ ಚಾಪ್ರಯುಕ್ತೇನ ಗತವಾನ್ವಿಗತ ಜ್ವರಃ ।
ತಸ್ಮಾ ದ್ವಜ್ರೇಶ್ವರೀ ವಿದ್ಯಾ ಸರ್ವಶತ್ರು ಭಯಂಕರೀ ॥೧೬॥

---

೧೩. ಈರೀತಿಯಲ್ಲಿ ವೃತ್ರಾಸುರನು ಇಂದ್ರನನ್ನನುಸರಿಸಲು ಭಯಗೊಂಡ ಸಹಸ್ರಾಕ್ಷನು ಪರಿವಾರ ಸಮೇತನಾಗಿ ಕ್ಷಣಮಾತ್ರದಲ್ಲಿ ಅಂತರಿಕ್ಷವನ್ನು ಬಿಟ್ಟು ಓಡಿದನು. ಆ ಮೇಲೆ ವಿವೇಕದಿಂದ ತಪಸ್ಸನ್ನು ಮಾಡಿದನು.

೧೪. ಆಗ ವಿಶ್ವಕರ್ತೃವಾದ ಬ್ರಹ್ಮನು ಇಂದ್ರನ ಈ ಪ್ರಾಯಶ್ಚಿತ್ತದಿಂದ ಸಂತೋಷಗೊಂಡವನಾಗಿ ವಜ್ರೇಶ್ವರೀಮಂತ್ರವನ್ನು ಉಪದೇಶಿಸಿ ಇಂದ್ರನನ್ನು ಕುರಿತು ಹೀಗೆಂದು ಹೇಳಿದನು. ಎಲೈ ಇಂದ್ರನೇ, ಈ ಮಂತ್ರದಿಂದ ಸಿದ್ಧವಾದ ವಜ್ರಾಯುಧದಿಂದ ವೃತ್ರವನ್ನು ಸಂಹರಿಸು.

೧೫. ಪರಾಕ್ರಮಿಯಾದ ಇಂದ್ರನೂ ಸಹ ದೇವತೆಗಳಿಂದೊಡಗೂಡಿದವನಾಗಿ ಆ ವಜ್ರಾಯುಧದಿಂದ ಲೀಲಾಜಾಲವಾಗಿ ವೃತ್ರನನ್ನು ಸಂಹರಿಸಿ ಆಪತ್ತಿನಿಂದ ಪಾರಾಗಿ ಸ್ವಸ್ಥಾನವನ್ನು ಕುರಿತು ತೆರಳಿದನು.

೧೬. ಆದುದರಿಂದ ವಜ್ರೇಶ್ವರೀ ಎಂಬೀವಿದ್ಯೆಯು ಸರ್ವಶತ್ರುಗಳಿಗೂ ಭಯವನ್ನುಂಟುಮಾಡುವುದಾಗಿರುತ್ತದೆ. ಅಲ್ಲದೆ,

ಮಂದೇಹಾ ರಾಕ್ಷಸಾ ನಿತ್ಯಂ ವಿಜಿತಾ ವಿದ್ಯೆಯೈವ ತು ।
ತಾಂ ವಿದ್ಯಾಂ ಸಂಪ್ರವಕ್ಷ್ಯಾಮಿ ಸರ್ವಪಾಪ ಪ್ರಮೋಚನೀಂ ॥೧೭॥
ಓಂ ಭೂರ್ಭುವಃಸ್ವಃ ತತ್ ಸವಿತು ರ್ವರೇಣ್ಯಂ
ಭರ್ಗೋ ದೇವಸ್ಯ ಧೀಮಹಿ॥ ಧಿಯೋ ಯೋ ನಃ
ಪ್ರಚೋದಯಾತ್॥ ಓಂ ಫಟ್ ಜಹಿ ಹುಂ ಫಟ್
ಛಿಂಧಿ ಭಿಂಧಿ, ಜಹಿ ಹನ ಹನ ಸ್ವಾಹಾ॥
ವಿದ್ಯಾ ವಜ್ರೇಶ್ವರೀ ತ್ಯೇಷಾ ಸರ್ವ ಶತ್ರು ಭಯಂಕರೀ ।
ಅನಯಾ ಸಂಹೃತಿಃ ಶಂಭೋಃ ವಿದ್ಯಯಾ ಮುನಿಪುಂಗವಾಃ ॥೧೮॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
ಏಕಪಂಚಾಶತ್ತಮೋಽಧ್ಯಾಯಃ

---

೧೭. ಮಂದೇಹ ಎಂಬ ಹೆಸರುಳ್ಳ ರಾಕ್ಷಸರೂ ಈ ವಿದ್ಯೆಯಿಂದಲೇ ನಿಗ್ರಹಿಸಲ್ಪಟ್ಟಿರುತ್ತಾರೆ. ಎಲೈ ಋಷಿಗಳೇ, ಸಕಲ ಪಾಪಗಳನ್ನೂ ನಾಶ ಮಾಡುವ ಈ ವಿದ್ಯೆಯ ಮಹಿಮೆಯನ್ನೂ ನಿಮಗೆ ಹೇಳುತ್ತೇನೆ. ( ತಿಳಿಸುತ್ತೇನೆ.)

(ಇದು ವಜ್ರೇಶ್ವರೀ ವಿದ್ಯೆಯ ಮಂತ್ರಸ್ವರೂಪವಾಗಿರುತ್ತದೆ.)

೧೮. ಎಲೈ ಋಷಿಶ್ರೇಷ್ಠರೇ, ಪೂರ್ವೋಕ್ತ ಮಂತ್ರರೂಪವಾದ ವಜ್ರೇಶ್ವರೀಯೆಂಬ ಈ ವಿದ್ಯೆಯು ಸಕಲ ಶತ್ರುಗಳಿಗೂ ಭಯವನ್ನುಂಟು ಮಾಡುವುದಾಗಿರುತ್ತದೆ. ಈ ವಜ್ರೇಶ್ವರೀ ವಿದ್ಯೆಯಿಂದಲೇ ರುದ್ರನೂ ಪ್ರಲಯವನ್ನುಂಟುಮಾಡುತ್ತಾನೆ.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರ ಭಾಗದಲ್ಲಿ
ಐವತ್ತೊಂದನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
## ದ್ವಿಪಂಚಾಶತ್ತಮೋಽಧ್ಯಾಯಃ

**॥ ಋಷಯ ಊಚುಃ ॥**

**ಶ್ರುತಾ ವಜ್ರೇಶ್ವರೀ ವಿದ್ಯಾ ಬ್ರಾಹ್ಮೀ ಶಕ್ರೋಪಕಾರಿಣೀ ।**
**ಅನಯಾ ಸರ್ವಕಾರ್ಯಾಣಿ ನೃಪಾಣಾಮಿತಿ ನಃ ಶ್ರುತಂ ॥ ೧ ॥**

**ವಿನಿಯೋಗಂ ವದಸ್ವಾಸ್ಯಾ ವಿದ್ಯಾಯಾ ರೋಮಹರ್ಷಣ ।**

**॥ ಸೂತ ಉವಾಚ ॥**

**ವಶ್ಯಮಾಕರ್ಷಣಂ ಚೈವ ವಿದ್ವೇಷಣಮತಃ ಪರಂ ॥ ೨ ॥**

**ಉಚ್ಚಾಟನಂ ಸ್ತಂಭನಂ ಚ ಮೋಹನಂ ತಾಡನಂ ತಥಾ ।**
**ಉತ್ಸಾದನಂ ಕಥಾಚ್ಛೇದಂ ಮಾರಣಂ ಪ್ರತಿಬಂಧನಂ ॥ ೩ ॥**

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಐವತ್ತೆರಡನೆಯ ಅಧ್ಯಾಯವು.

೧. ಋಷಿಗಳು ಹೇಳಿದರು: ಓ ಸೂತ ಮಹರ್ಷಿಯೇ, ಇಂದ್ರನ ಸಹಾಯಕ್ಕೋಸ್ಕರ ಬ್ರಹ್ಮನು ಇಂದ್ರನಿಗೆ ಹೇಳಿಕೊಟ್ಟ ಈ ವಜ್ರೇಶ್ವರೀ, ಗಾಯತ್ರೀ, ವಿದ್ಯೆಗಳನ್ನು ನಾವು ಕೇಳಿದೆವು. ಮತ್ತು ಈ ವಿದ್ಯೆಗಳಿಂದ ರಾಜರ ಸಕಲ ಕಾರ್ಯಗಳೂ ಸಫಲಗೊಳ್ಳುವವೆಂದೂ ಕೇಳಿದೆವು. ಈಗ ಈ ವಿದ್ಯೆಗಳನ್ನು ಪ್ರಯೋಗಮಾಡುವ ವಿಧಾನವನ್ನು ನಮಗೆ ಹೇಳುವವನಾಗು.

೨-೩. ಸೂತನು ಹೇಳಿದನು: ಎಲೈ ಋಷಿಗಳೇ, ಈ ವಜ್ರೇಶ್ವರೀವಿದ್ಯೆಯಿಂದ ವಶೀಕರಣ, ಆಕರ್ಷಣ, ವಿದ್ವೇಷಣ, ಉಚ್ಚಾಟನ, ಸ್ತಂಭನ, ಮೋಹನ, ತಾಡನ, ಉತ್ಸಾದನ, ಭೇದ, ಮಾರಣ, ಪ್ರತಿಬಂಧನ, ಎಂಬೀ ಹನ್ನೊಂದು ಕ್ರಿಯೆಗಳನ್ನೂ ಸಾಧಿಸಬಹುದು. ಈ ಸೇನಾಸ್ತಂಭನಾದಿ ಕಾರ್ಯಗಳನ್ನೆಲ್ಲವನ್ನೂ ಸಾವಿತ್ರಿಯ ಮಂತ್ರದಿಂದ ಮಾಡಬೇಕು.

ಸೇನಾಸ್ತಂಭನಕಾದೀನಿ ಸಾವಿತ್ರ್ಯಾ ಸರ್ವಮಾಚರೇತ್ ।
ಆಗಚ್ಛ ವರದೇ ದೇವಿ ಭೂಮ್ಯಾಂ ಪರ್ವತಮೂರ್ಧನಿ ॥ ೪ ॥
ಬ್ರಾಹ್ಮಣೇಭ್ಯೋ ಹ್ಯನುಜ್ಞಾತಾ ಗಚ್ಛ ದೇವಿ ಯಥಾ ಸುಖಂ ।
ಉದ್ವಾಸ್ಯಾನೇನ ಮಂತ್ರೇಣ ಗಂತವ್ಯಂ ನಾನ್ಯಥಾ ದ್ವಿಜಾಃ ॥ ೫ ॥
ಪ್ರತಿಕಾರ್ಯಂ ತಥಾ ಬಾಹ್ಯಂ ಕೃತ್ವಾ ವಶ್ಯಾದಿಕಾಂ ಕ್ರಿಯಾಂ ।
ಉದ್ವಾಸ್ಯ ವಹ್ನಿಮಾಧಾಯ ಪುನರನ್ಯಂ ಯಥಾವಿಧಿ ॥ ೬ ॥
ದೇವೀಮಾವಾಹ್ಯ ಚ ಪುನರ್ಜಪೇತ್ಸಂ ಪೂಜಯೇತ್ಪುನಃ ।
ಹೋಮಂ ಚ ವಿಧಿನಾ ವಹ್ನೌ ಪುನರೇವ ಸಮಾಚರೇತ್ ॥ ೭ ॥
ಸರ್ವಕಾರ್ಯಾಣಿ ವಿಧಿನಾ ಸಾಧಯೇದ್ವಿದ್ಯಯಾ ಪುನಃ ।
ಜಾತೀ ಪುಷ್ಪೈಶ್ಚ ವಶ್ಯಾರ್ಥೀ ಜುಹುಯಾದಯುತ ಕ್ರಮಂ ॥ ೮ ॥

---

೪–೫. ಎಲೈ ಋಷಿಗಳೇ, "ಆಗಚ್ಛ ದೇವಿ" ಎಂಬೀ ಮಂತ್ರದಿಂದ ಸಾವಿತ್ರಿಯನ್ನು ಆವಾಹನೆಮಾಡಿ, ಪೂರ್ವೋಕ್ತವಾದ ವಶ್ಯಾಕರ್ಷಣಾದಿಗಳನ್ನು ಮುಗಿಸಿ, ಬಳಿಕ "ಬ್ರಾಹ್ಮಣೇಭ್ಯೋಹ್ಯನುಜ್ಞಾತಾ" ಎಂಬ ಮಂತ್ರದಿಂದ ವಿಸರ್ಜನೆಯನ್ನುಮಾಡಿ, ಅನಂತರದಲ್ಲಿ ಯುದ್ಧ ಭೂಮಿಗೆ ತೆರಳಬೇಕು.

೬–೭. ಪುರಶ್ಚರಣೆಯಲ್ಲಿ ಪ್ರತಿದಿನದ ಕಾರ್ಯವನ್ನು ಹೇಳುತ್ತಾನೆ-ಪ್ರಥಮದಿನದಲ್ಲಿ ದೇವಿಯನ್ನು ಆವಾಹಿಸಿ, ಪುನಃ ವಿಸರ್ಜಿಸಿ, ಅಗ್ನ್ಯಾಧಾನವನ್ನು ಮಾಡಿ, ಹೋಮಮಾಡಬೇಕು. ಬೇರೆಯ ದಿವಸಗಳಲ್ಲಿಯೂ, ಪೂರ್ವದಂತೆ ದೇವಿಯನ್ನು ಆವಾಹಿಸಿ, ತರುವಾಯ ಜಪಿಸಿ ಜಪದ ಅನಂತರ ಪೂಜಿಸಿ, ಪುನಃ ವಿಧಿಪೂರ್ವಕವಾಗಿ ಹೋಮವನ್ನು ಮಾಡಬೇಕು.

ಪೂರ್ವೋಕ್ತವಾದ ಈ ವಜ್ರೇಶ್ವರೀ, ಸಾವಿತ್ರೀ, ವಿದ್ಯೆಗಳಿಂದ ಸಕಲಕಾರ್ಯಗಳನ್ನೂ ಸಾಧಿಸಬೇಕು.

೮. ವಶೀಕರಣ ಸಿದ್ಧಿಯನ್ನು ಅಪೇಕ್ಷಿಸುವವನು ಜಾಜೀಪುಷ್ಪಗಳಿಂದಪೂಜೆಯನ್ನೂ, ಜಪವನ್ನೂಮಾಡಿ ಹೋಮವನ್ನು ಆಚರಿಸಬೇಕು.

ಘೃತೇನ ಕರವೀರೇಣ ಕುರ್ಯಾದಾಕರ್ಷಣಂ ದ್ವಿಜಾಃ ।
ವಿದ್ವೇಷಣಂ ವಿಶೇಷೇಣ ಕುರ್ಯಾಲ್ಲಾಂಗಲಕಸ್ಯ ಚ ॥ ೯ ॥

ತೈಲೇನೋಚ್ಚಾಟನಂ ಪ್ರೋಕ್ತಂ ಸ್ತಂಭನಂ ಮಧುನಾ ಸ್ಮೃತಂ ।
ತಿಲೇನ ಮೋಹನಂ ಪ್ರೋಕ್ತಂ ತಾಡನಂ ರುಧಿರೇಣ ಚ ॥೧೦॥

ಖರಸ್ಯ ಚ ಗಜಸ್ಯಾಥ ಉಷ್ಟ್ರಸ್ಯ ಚ ಯಥಾಕ್ರಮಂ ।
ಸ್ತಂಭನಂ ಸರ್ಷಪೇಣಾಪಿ ಪಾಟನಂ ಚ ಕುಶೇನ ಚ ॥೧೧॥

ಮಾರಣೋಚ್ಚಾಟನೇ ಚೈವ ರೋಹೀಬೀಜೇನ ಸುವ್ರತಾಃ ।
ಬಂಧನಂ ತ್ವಹಿಪತ್ರೇಣ ಸೇನಾಸ್ತಂಭಮತಃ ಪರಂ ॥೧೨॥

---

೯. ಅಲ್ಲದೆ ಆಕರ್ಷಣ ಸಿದ್ಧಿಯನ್ನಪೇಕ್ಷಿಸುವವನು ಆಜ್ಯದಿಂದ ಸಹಿತವಾದ ಕರವೀರ ಪುಷ್ಪಗಳಿಂದಲೂ, ವಿದ್ವೇಷಣವನ್ನಪೇಕ್ಷಿಸುವವನು ಲಾಂಗಕವೆಂಬ ಪುಷ್ಪ (ಕಹಲಾವಿಬ ಹಳ್ಳಿಯ ಹೂವು) ವಿಶೇಷದಿಂದಲೂ, ಹೋಮವನ್ನಾಚರಿಸಬೇಕು.

೧೦. ಉಚ್ಚಾಟನವನ್ನಪೇಕ್ಷಿಸುವವನು ತೈಲ ಹೋಮವನ್ನೂ, ಸ್ತಂಭನಾಪೇಕ್ಷಿಯು ಜೇನು ತುಪ್ಪದ ಹೋಮವನ್ನೂ, ಮೋಹನವನ್ನು ಅಪೇಕ್ಷಿಸುವವನು ಯಳ್ಳಿನಿಂದಲೂ, ತಾಡನಾಪೇಕ್ಷಿಯು ರಕ್ತದಿಂದ ಹೋಮವನ್ನೂ ಮಾಡಬೇಕು.

೧೧. ಕತ್ತೆ, ಆನೆ, ವಂಟೆ, ಇವುಗಳ ರಕ್ತದಿಂದಲೂ ತಾಡನವನ್ನು ಕ್ರಮವಾಗಿ ಮಾಡಬಹುದು. ಸಾಸುವೆಯಿಂದ ಸ್ತಂಭನವನ್ನು, ದರ್ಭೆಯಿಂದ ಉಚ್ಚಾಟನವನ್ನು ಮಾಡಬಹುದು.

೧೨. ಎಲೈ ಸದಾಚಾರಿಗಳಾದ ಋಷಿಗಳೇ, ರೋಹೀ ರಕ್ತರೋಡ ಎಂಬ ಬೀಜ ವಿಶೇಷದಿಂದ ಮಾರಣ ಉಚ್ಚಾಟನೆಯನ್ನು ಮಾಡಬಹುದು. ನಾಗವಲ್ಲಿ (ವೀಳ್ಯದೆಲೆ) ಯ ದಳದಿಂದ ಸೇನೆಯ ಬಂಧನವನ್ನು ಮಾಡ

ಕುನಟ್ಯಾ ನಿಯುತಂ ವಿದ್ಯಾತ್ ಪೂಜಯೇತ್ಪರ ಮೇಶ್ವರೀಂ ।
ಘೃತೇನ ಸರ್ವಸಿದ್ಧಿಃ ಸ್ಯಾತ್ಪಯಸಾ ವಾ ವಿಶುದ್ಧ್ಯತೇ ॥೧೩॥
ತಿಲೇನ ರೋಗನಾಶಶ್ಚ ಕಮಲೇನ ಧನಂ ಭವೇತ್ ।
ಕಾಂತಿರ್ಮಧೂಕ ಪತ್ರೇಣ ಸಾವಿತ್ರ್ಯಾ ಹ್ಯಯುತತ್ರಯಂ ॥೧೪॥
ಜಪಾದಿ ಪ್ರಭೃತೀನ್ ಸರ್ವಾನ್ ಸ್ವಿಷ್ಟಾಂತಂ ಪೂರ್ವವತ್ಸ್ಮೃತಂ ।
ಏವಂ ಸಂಕ್ಷೇಪತಃ ಪ್ರೋಕ್ತೋ ವಿನಿಯೋಗೋಽತಿ ವಿಸ್ತೃತಃ ॥

---

ಬಹುದು. ಇದರಂತೆ ಗೈರಿಕಾದಿ ಧಾತುಗಳಲ್ಲೊಂದಾದ ಕುನಟೀ ಎಂದರೆ ಮಣಿಶಿಲೆಯಿಂದ ಸ್ತಂಭನವನ್ನು ಮಾಡಬೇಕು. ಇವೆಲ್ಲಕ್ಕಿಂತಲೂ ಮೊದಲು ಗಾಯತ್ರಿಯನ್ನು ಜಪಿಸಬೇಕು.

೧೩. ಅಲ್ಲದೆ ಘೃತ ಹೋಮವನ್ನಾಚರಿಸಿದರೆ ಸಕಲ ಕಾರ್ಯಗಳೂ, ತಪ್ಪದಂತೆ ಕೈ ಗೂಡುವುವು. ಹಾಲಿನಿಂದ ಹೋಮವನ್ನು ಮಾಡಿದರೆ ಶುದ್ಧನಾಗುತ್ತಾನೆ. ತಿಲ ಹೋಮನ್ನು ಮಾಡಿದರೆ ರೋಗನಾಶವೂ ಕಮಲ ಪುಷ್ಪದಿಂದ ಹೋಮವನ್ನಾಚರಿಸಿದರೆ ಧನಲಾಭವೂ ಆಗುತ್ತವೆ.

೧೪. ಮಧೂಕ ಹಿಪ್ಪೆ ಎಂಬ ಪತ್ರ ವಿಶೇಷದಿಂದ ಸಾವಿತ್ರಿಯನ್ನುದ್ದೇಶಿಸಿ, ಮುವ್ವತ್ತು ಸಾವಿರ ಬಾರಿ ಹೋಮವನ್ನಾಚರಿಸಿದರೆ ಕಾಂತಿಯು ಉತ್ಪನ್ನವಾಗುವುದು.

ಹಿಂದೆ ಹೇಳಿದಂತೆ ಜಯಾದಿ ಸ್ವಿಷ್ಟಕೃದ್ಧೋಮ ಪರ್ಯಂತವಾದ ಕರ್ಮವನ್ನು ಸಾಂಗವಾಗಿ ನೆರವೇರಿಸಬೇಕು.

೧೫. ಈ ರೀತಿಯಲ್ಲಿ ಅತ್ಯಂತ ವಿಸ್ತಾರವಾಗಿ ಇರುವ ವಜ್ರೇಶ್ವರೀ ವಿದ್ಯೆಯು, ಗಾಯತ್ರೀ ವಿದ್ಯೆಯು, ಅನುಷ್ಠಾನ ಕ್ರಮವನ್ನು ಸಂಕ್ಷೇಪ ವಾಗಿ ನಿಮಗೆ ತಿಳಿಸಿರುತ್ತೇನೆ.

ಜಪೇದ್ವಾ ಕೇವಲಾಂ ವಿದ್ಯಾಂ ಸಂಪೂಜ್ಯ ಚ ವಿಧಾನತಃ ।
ಸರ್ವಸಿದ್ಧಿ ಮವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥೧೬॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
ದ್ವಿಪಂಚಾಶತ್ತಮೋಽಧ್ಯಾಯಃ

---

೧೬. ಅಥವಾ ಕೇವಲ ವಿದ್ಯೆಯನ್ನು ಆವಾಹನ ಪೂರ್ವಕವಾಗಿ ಪೂಜಿಸಿ ಜಪವನ್ನಾಚರಿಸಿದರೂ ಸಹ ಸಕಲ ಸಿದ್ಧಿಗಳನ್ನೂ ಹೊಂದುತ್ತಾನೆ. ಇದರಲ್ಲಿ ಯಾವ ಸಂಶಯವೂ ಇರುವುದಿಲ್ಲ.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರ ಭಾಗದಲ್ಲಿ ಐವತ್ತೆರಡನೆಯ
ಅಧ್ಯಾಯವು ಮುಗಿದುದು.



अथ श्री लिंगमहापुराणे उत्तरभागे
त्रिपंचाशत्तमोऽध्यायः

॥ ಋಷಯ ಊಚುಃ ॥

**ಮೃತ್ಯುಂ ಜಯ ವಿಧಿಂ ಸೂತ ಬ್ರಹ್ಮಕ್ಷತ್ರ ವಿಶಾಮಪಿ ।**
**ವಕ್ತುಮರ್ಹಸಿ ಚಾಸ್ಮಾಕಂ ಸರ್ವಜ್ಞೋಽಸಿ ಮಹಾಮತೇ ॥ ೧ ॥**

**॥ ಸೂತ ಉವಾಚ ॥**

**ಮೃತ್ಯುಂಜಯ ವಿಧಿಂ ವಕ್ಷ್ಯೇ ಬಹುನಾ ಕಿಂ ದ್ವಿಜೋತ್ತಮಾಃ ।**
**ರುದ್ರಾಧ್ಯಾಯೇನ ವಿಧಿನಾ ಘೃತೇನ ನಿಯುತಂ ಕ್ರಮಾತ್ ॥ ೨ ॥**
**ಸಘೃತೇನ ತಿಲೇನೈವ ಕಮಲೇನ ಪ್ರಯತ್ನತಃ ।**
**ದೂರ್ವಯಾ ಘೃತ ಗೋಕ್ಷೀರ ಮಿಶ್ರಯಾ ಮಧುನಾ ತಥಾ ॥ ೩ ॥**

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಐವತ್ತುಮೂರನೆಯ
ಅಧ್ಯಾಯವು.

೧. ಋಷಿಗಳು ಹೇಳಿದರು :—ಓ ಮಹಾ ಜ್ಞಾನಿಯಾದ ಸೂತ ಮಹರ್ಷಿಯೇ, ಬ್ರಾಹ್ಮಣಾದಿ ತ್ರೈವರ್ಣಿಕರಿಗೂ ಅನುಷ್ಠಾನಕ್ಕೆ ಉಪಯುಕ್ತವಾದ ಮೃತ್ಯುಂಜಯ ವಿಧಿಯನ್ನು ಹೇಳುವವನಾಗು.

೨-೪. ಸೂತನು ಹೇಳಿದನು :—ಎಲೈ ಋಷಿಶ್ರೇಷ್ಠರೇ, ಹೆಚ್ಚು ಪ್ರಾರ್ಥನೆಮಾಡುವುದರಿಂದೇನು ? ಮೃತ್ಯುಂಜಯ ವಿಧಿಯನ್ನು ನಾನು ನಿಮಗೆ ಹೇಳುವೆನು. ರುದ್ರಾಧ್ಯಾಯದ ಮಂತ್ರದೊಡನೆ ಘೃತದಿಂದಲೂ, ಘೃತದಿಂದ ಯುಕ್ತವಾದ ತಿಲದಿಂದಲೂ, ಘೃತ, ಮತ್ತು ಗೋಕ್ಷೀರಗಳಿಂದ ಯುಕ್ತವಾದ ದೂರ್ವೆಯಿಂದಲೂ, ಕೇವಲ ಮಧುವಿನಿಂದಲಾಗಲೀ, ಘೃತ ಮಿಶ್ರಿತವಾದ ಚರುದ್ರವ್ಯದಿಂದಲಾಗಲಿ, ಕೇವಲಕ್ಷೀರದಿಂದಲಾಗಲೀ, ಹೋಮವನ್ನು ಮಾಡಬೇಕು. ಈ ಹೋಮವೇ ಕಾಲಮೃತ್ಯುವಿಗಾಗಲೀ,

**ಚರುಣಾ ಸಘೃತೇನೈವ ಕೇವಲಂ ಪಯಸಾಽಪಿ ವಾ ।**
**ಜುಹುಯಾತ್ಕಾಲ ಮೃತ್ಯೋರ್ವಾ ಪ್ರತೀಕಾರಃ ಪ್ರಕೀರ್ತಿತಃ ॥ ೪ ॥**

**ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ತ್ರಿಪಂಚಾಶತ್ತ ಮೋಽಧ್ಯಾಯಃ**

---

ಅಥವಾ ಅಪಮೃತ್ಯುವಿಗೇ ಆಗಲೀ, ಪ್ರತೀಕಾರ ರೂಪವಾಗಿರುತ್ತದೆ. ಈ ಹೋಮಕ್ಕೆ ಮೃತ್ಯುಂಜಯ ಹೋಮವೆಂದು ಹೆಸರು.

**ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಐವತ್ತುಮೂರನೆಯ ಅಧ್ಯಾಯವು ಮುಗಿದುದು.**

## ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
## ಚತುಃ ಪಂಚಾಶತ್ತಮೋಽಧ್ಯಾಯಃ

**॥ ಸೂತ ಉವಾಚ ॥**

**ತ್ರಿಯಂಬಕೇಣ ಮಂತ್ರೇಣ ದೇವದೇವಂ ತ್ರಿಯಂಬಕಂ ।**
**ಪೂಜಯೇ ದ್ಬಾಣಲಿಂಗೇ ವಾ ಸ್ವಯಂಭೂತೇಽಪಿ ವಾ ಪುನಃ ॥**
**ಆಯುರ್ವೇದ ವಿದ್ವೈರ್ವಾಽಪಿ ಯಥಾವದನು ಪೂರ್ವಶಃ ।**
**ಅಷ್ಟೋತ್ತರಸಹಸ್ರೇಣ ಪುಂಡರೀಕೇಣ ಶಂಕರಂ ॥ ೨ ॥**
**ಕಮಲೇನ ಸಹಸ್ರೇಣ ತಥಾ ನಿಲೋತ್ಪಲೇನ ವಾ ।**
**ಸಂಪೂಜ್ಯ ಪಾಯಸಂ ದತ್ವಾ ಸಘೃತಂ ಚೌದನಂ ಪುನಃ ॥ ೩ ॥**
**ಮುದ್ಗಾನ್ನಂ ಮಧುನಾ ಯುಕ್ತಂ ಭಕ್ಷ್ಯಾಣಿ ಸುರಭೀಣಿ ಚ ।**
**ಅಗ್ನೌ ಹೋಮಶ್ಚ ವಿಪುಲೋ ಯಥಾವದನು ಪೂರ್ವಶಃ ॥ ೪ ॥**

---

ಶ್ರೀ ಲಿಂಗಮಹಾಪುರಾಣದಉತ್ತರಭಾಗದಲ್ಲಿ ಐವತ್ತುನಾಲ್ಕನೆಯ ಅಧ್ಯಾಯವು.

೧. ಸೂತನು ಹೇಳಿದನು. ಮೃತ್ಯುಪರಿಹಾರಕವಾದ ತ್ರಿಯಂಬಕ ಮಂತ್ರವನ್ನು ಸೂತನು ಹೇಳುತ್ತಾನೆ. ದೇವೇಶನಾದ ತ್ರಿನೇತ್ರನನ್ನು ತ್ರಿಯಂಬಕಮಂತ್ರದಿಂದ ಬಾಣಲಿಂಗದಲ್ಲಾಗಲೀ ಉದ್ಭವಿಸಿದ ಲಿಂಗ ದಲ್ಲಾಗಲೀ ಪೂಜಿಸಬೇಕು.

೨-೫. ಆಯುಸ್ಸನ್ನು ವೃದ್ಧಿಪಡಿಸುವ ಉಪಾಯವನ್ನು ತಿಳಿದ ಬ್ರಾಹ್ಮಣರು ಸಹಸ್ರನಾಮೋಕ್ತವಾದ ಕ್ರಮದಿಂದ ಸಾವಿರದಎಂಟು ಕಮಲಗಳಿಂದಾಗಲೀ, ಸಹಸ್ರಪತ್ರವುಳ್ಳ ಪದ್ಮಗಳಿಂದಾಗಲೀ, ಸಾವಿರದ ಎಂಟು ಕನ್ನೈದಿಲೆಗಳಿಂದಾಗಲೀ, ಶಿವನನ್ನು ಪೂಜಿಸಿ ಪಾಯಸವನ್ನೂ, ಪೊಂಗಲು, ತುಪ್ಪದ ಅನ್ನವನ್ನೂ, ಹುಗ್ಗಿಯನ್ನೂ, ಮನೋಹರವಾದ

ಪೂರ್ವೋಕ್ತೈರಪಿ ಪುಷ್ಪೈಶ್ಚ ಚರುಣಾ ಚ ವಿಶೇಷತಃ ।
ಜಪೇದ್ವೈ ನಿಯುತಂ ಸಮ್ಯಕ್ಸಮಾಪ್ಯ ಚ ಯಥಾಕ್ರಮಂ ॥ ೫ ॥

ಬ್ರಾಹ್ಮಣಾನಾಂ ಸಹಸ್ರಂ ಚ ಭೋಜಯೇದ್ವೈ ಸದಕ್ಷಿಣಂ ।
ಗವಾಂ ಸಹಸ್ರಂ ದತ್ವಾ ತು ಹಿರಣ್ಯಮಪಿ ದಾಪಯೇತ್ ॥ ೬ ॥

ಏತದ್ವಃ ಕಥಿತಂ ಸರ್ವಂ ಸರಹಸ್ಯಂ ಸಮಾಸತಃ ।
ಶಿವೇನ ದೇವದೇವೇನ ಶರ್ವೇಣಾತ್ಯುಗ್ರ ಶೂಲಿನಾ ॥ ೭ ॥

ಕಥಿತಂ ಮೇರುಶಿಖರೇ ಸ್ಕಂದಾಯಾಮಿತತೇಜಸೇ ।
ಸ್ಕಂದೇನ ದೇವದೇವೇನ ಬ್ರಹ್ಮಪುತ್ರಾಯ ಧೀಮತೇ ॥ ೮ ॥

ಸಾಕ್ಷಾತ್ಸನತ್ಕುಮಾರೇಣ ಸರ್ವಲೋಕ ಹಿತೈಷಿಣಾ ।
ಪಾರಾಶರ್ಯಾಯ ಕಥಿತಂ ಪಾರಂ ಪರ್ಯಕ್ರಮಾಗತಂ ॥ ೯ ॥

---

ಭಕ್ಷ್ಯಗಳನ್ನೂ, ಶಿವನಿಗೆ ನಿವೇದಿಸಿ, ಕ್ರಮವಾಗಿ ಹಿಂದೆ ಹೇಳಿದ ಶ್ವೇತ ಪದ್ಮಾದಿ ಪುಷ್ಪಗಳಿಂದಲೂ, ಚರುವಿನಿಂದಲೂ ಹೋಮವನ್ನುಮಾಡಿ, ನೂರು ಹತ್ತು ಸಾವಿರಬಾರಿ, ಹತ್ತು ಕೋಟಿಸಲ, ಜಪವನ್ನು ಮಾಡಿ ಬಳಿಕ

೬. ಸಹಸ್ರಬ್ರಾಹ್ಮಣರಿಗೆ ಭೋಜನವನ್ನುಮಾಡಿಸಿ ದಕ್ಷಿಣೆಯನ್ನು ಕೊಟ್ಟು ಸಹಸ್ರ ಗೋದಾನವನ್ನೂ ಮತ್ತು ಹಿರಣ್ಯದಾನವನ್ನೂ ಮಾಡಿಸ ಬೇಕು.

ಎಲೈ ಋಷಿಗಳೇ, ಗುಪ್ತವಿವರಗಳನ್ನೊಳಗೊಂಡ ಈ ವಿಷಯ ವನ್ನು ನಿಮಗೆ ಹೇಳಿರುತ್ತೇನೆ.

೭. ಪೂರ್ವದಲ್ಲಿ ಒಂದಾನೊಂದು ಕಾಲದಲ್ಲಿ ಮೇರು ಪರ್ವತದ ಶಿಖರದಲ್ಲಿ ದೇವೇಶನಾದ ಶಿವನು ಈ ವಿಷಯವನ್ನು ಅತಿಪರಾಕ್ರಮಿ ಯಾದ ಷಣ್ಮುಖನಿಗೆ ಹೇಳಿರುವನು.

೮–೯. ದೇವಸೇನಾನಿಯಾದ ಷಣ್ಮುಖನು ಬ್ರಹ್ಮಪುತ್ರನಾದ ಸನತ್ಕುಮಾರನಿಗೂ, ಸನತ್ಕುಮಾರನು ಗುರುಶಿಷ್ಯಪರಂಪರೆಯಿಂದ ಬಂದ ಈ ವಿಷಯವನ್ನು ವ್ಯಾಸನಿಗೂ ಹೇಳಿದನು.

ಶುಕೇ ಗತೇ ಪರಂಧಾಮ ದೃಷ್ಟ್ವಾ ರುದ್ರಂ ತ್ರಿಯಂಬಕಂ ।
ಗತಶೋಕೋ ಮಹಾಭಾಗೋ ವ್ಯಾಸಃ ಪರಋಷಿಃ ಪ್ರಭುಃ ॥೧೦॥
ಸ್ಕಂದಸ್ಯ ಸಂಭವಂ ಶ್ರುತ್ವಾ ಸ್ಥಿತಾಯ ಚ ಮಹಾತ್ಮನೇ ।
ತ್ರಿಯಂಬಕಾಯ ಮಾಹಾತ್ಮ್ಯಂ ಮಂತ್ರಸ್ಯ ಚ ವಿಶೇಷತಃ ॥೧೧॥
ಕಥಿತಂ ಬಹುಧಾ ತಸ್ಮೈ ಕೃಷ್ಣದ್ವೈಪಾಯನಾಯ ವೈ ।
ತತ್ಸರ್ವಂ ಕಥಯಿಷ್ಯಾಮಿ ಪ್ರಸಾದಾದೇವ ತಸ್ಯ ವೈ ॥೧೨॥
ದೇವಂ ಸಂಪೂಜ್ಯ ವಿಧಿನಾ ಜಪೇನ್ಮಂತ್ರಂ ತ್ರಿಯಂಬಕಂ ।
ಮುಚ್ಯತೇ ಸರ್ವ ಪಾಪೈಶ್ಚ ಸಪ್ತಜನ್ಮಕೃತೈರಪಿ ॥೧೩॥
ಸಂಗ್ರಾಮೇ ವಿಜಯಂ ಲಬ್ಧ್ವಾ ಸೌಭಾಗ್ಯಮತುಲಂ ಭವೇತ್ ।
ಲಕ್ಷಹೋಮೇನ ರಾಜ್ಯಾರ್ಥೀ ರಾಜ್ಯಂ ಲಬ್ಧ್ವಾ ಸುಖೀ ಭವೇತ್ ॥

---

೧೦–೧೧. ವ್ಯಾಸಪುತ್ರನಾದ ಶುಕನು ಮೋಕ್ಷಪದವಿಯನ್ನು ಹೊಂದಲು, ಋಷಿಶ್ರೇಷ್ಠನಾದ ವ್ಯಾಸನೂ ಶೋಕಾಕುಲನಾದನು. ಅವನು ಮಹೇಶ್ವರನನ್ನು ನೋಡಿ ಶಾಂತನಾದನು. ಷಣ್ಮುಖನ ಉತ್ಪತ್ತಿಯನ್ನೂ ಕೇಳಿದ ತ್ರಿಯಂಬಕನು ಮಂತ್ರದ ಮಾಹಾತ್ಮ್ಯೆಯನ್ನು ವ್ಯಾಸಮಹರ್ಷಿಗೆ ಹೇಳಿದನು.

೧೨. ಆ ಈಶ್ವರನ, ಮತ್ತು ವ್ಯಾಸಮಹರ್ಷಿಯ ಅನುಗ್ರಹದಿಂದಲೇ ಈ ಸರ್ವವಿಷಯಗಳನ್ನೂ ನಿಮಗೆ ಹೇಳಿರುವೆನು.

ದೇವನಾದ ತ್ರಿಯಂಬಕನನ್ನು ವಿಧಿವತ್ತಾಗಿ ಪೂಜಿಸಿ ಮಂತ್ರವನ್ನು ಜಪಿಸಬೇಕು. ಈರೀತಿ ಪೂಜಾಜಪಗಳನ್ನು ಅನುಷ್ಠಾನಮಾಡಿದರೆ ಸಪ್ತ ಜನ್ಮಗಳಿಂದ ಮಾಡಿರುವ ಸಕಲ ಪಾಪಗಳಿಂದಲೂ ಭಕ್ತನು ವಿನಿರ್ಮುಕ್ತ ನಾಗುತ್ತಾನೆ.

೧೪. ತ್ರಿಯಂಬಕನನ್ನು ಪೂಜಿಸಿ ಮಂತ್ರವನ್ನು ಜಪಿಸಿದರೆ ಅಮಿತ ವಾದ ಸುಕೃತವು ಲಭಿಸುತ್ತದೆ. ರಾಜ್ಯವನ್ನಪೇಕ್ಷಿಸುವವನು ಈ ಮಂತ್ರ ದಿಂದ ಲಕ್ಷಬಾರಿ ಹೋಮವನ್ನು ಮಾಡಿದಲ್ಲಿ ರಾಜ್ಯವನ್ನು ಪಡೆದು ಸುಖಿ ಯಾಗುತ್ತಾನೆ.

ಪುತ್ರಾರ್ಥೀ ಪುತ್ರಮಾಪ್ನೋತಿ ನಿಯುತೇನ ನ ಸಂಶಯಃ ।
ಧನಾರ್ಥೀ ಪ್ರಯುತೇನೈವ ಜಪೇದೇವ ನ ಸಂಶಯಃ ॥೧೫॥

ಧನಧಾನ್ಯಾದಿಭಿಃ ಸರ್ವೈಃ ಸಂಪೂರ್ಣಂ ಸರ್ವಮಂಗಲೈಃ ।
ಕ್ರೀಡತೇ ಪುತ್ರಪೌತ್ರೈಶ್ಚ ಮೃತಃ ಸ್ವರ್ಗೇ ಪ್ರಜಾಯತೇ ॥೧೬॥

ನಾನೇನ ಸದೃಶೋ ಮಂತ್ರೋ ಲೋಕೇ ವೇದೇ ಚ ಸುವ್ರತಾಃ ।
ತಸ್ಮಾತ್ತ್ರಿಯಂಬಕಂ ದೇವಂ ತೇನ ನಿತ್ಯಂ ಪ್ರಪೂಜಯೇತ್ ॥೧೭॥

ಅಗ್ನಿಷ್ಟೋಮಸ್ಯ ಯಜ್ಞಸ್ಯ ಫಲಮಷ್ಟಗುಣಂ ಭವೇತ್ ।
ತ್ರಯಾಣಾಮಪಿ ಲೋಕಾನಾಂ ಗುಣಾನಾಮಪಿ ಯಃ ಪ್ರಭುಃ ॥

---

೧೫. ಪುತ್ರನನ್ನಪೇಕ್ಷಿಸುವವನು ನೂರುಸಾವಿರ ಆವೃತ್ತಿ ಜಪವನ್ನಾಚರಿಸಿದರೆ ಪುತ್ರನನ್ನು ಪಡೆಯುವನು. ಧನವನ್ನಪೇಕ್ಷಿಸುವವನು ಹತ್ತುಲಕ್ಷಜಪವನ್ನಾಚರಿಸಿದರೆ ಧನವನ್ನೂ, ಪಡೆಯುವನು. ಇದರಲ್ಲಿ ಸಂಶಯವಿರುವುದಿಲ್ಲ.

೧೬. ಯಾವನು ಈ ಮಂತ್ರವನ್ನು ಜಪಿಸುವನೋ ಅವನು ಧನಧಾನ್ಯಾದಿ ಸಕಲಸೌಭಾಗ್ಯಾತಿಶಯಗಳನ್ನೂ ಪಡೆಯುವನು. ಮತ್ತು ಪುತ್ರಪೌತ್ರಾದಿಗಳನ್ನು ಹೊಂದಿ ಮೃತನಾದ ತರುವಾಯ ಸ್ವರ್ಗಲೋಕವನ್ನು ಪಡೆದು ಅಲ್ಲಿ ಸಂತೋಷದಿಂದ ಇರುತ್ತಾನೆ.

೧೭. ಎಲೈ ಸದಾಚಾರಿಗಳಾದ ಋಷಿಗಳೇ ಲೋಕದಲ್ಲಿಯೂ ಮತ್ತು ವೇದದಲ್ಲಿಯೂ, ತ್ರಿಯಂಬಕ ಮಂತ್ರ ಸದೃಶ ಮಂತ್ರವು ಮತ್ತೊಂದಿರುವುದಿಲ್ಲ. ಆದುದರಿಂದ ನಿತ್ಯವೂ ದೇವೇಶನಾದ ತ್ರಿಯಂಬಕನನ್ನು ಈ ಮಂತ್ರದಿಂದ ಪೂಜಿಸಬೇಕು.

೧೮–೨೦. ಈ ತ್ರಿಯಂಬಕಮಂತ್ರವನ್ನು ಜಪಿಸಿ, ಇದರಿಂದ ಹೋಮವನ್ನು ಮಾಡಿದರೆ ಅಗ್ನಿಷ್ಟೋಮಯಾಗದಿಂದ ಉಂಟಾಗುವ ಫಲಕ್ಕಿಂತಲೂ ಎಂಟರಷ್ಟು ಫಲವು ಹೆಚ್ಚಾಗಿ ಸಿಕ್ಕುತ್ತದೆ. ತ್ರಿಯಂಬ

**ವೇದಾನಾಮಪಿ ದೇವಾನಾಂ ಬ್ರಹ್ಮಕ್ಷತ್ರ ವಿಶಾಮಪಿ ।**
**ಅಕಾರೋಕಾರ ಮಕಾರಾಣಾಂ ಮಂತ್ರಾಣಾಮಪಿ ವಾಚಕಃ ॥೧೯॥**

**ತಥಾ ಸೋಮಸ್ಯ ಸೂರ್ಯಸ್ಯ ವಹ್ನೇರಗ್ನಿತ್ರಯಸ್ಯ ಚ ।**
**ಅಂಬಾ ಉಮಾ ಮಹಾದೇವೋ ಹ್ಯಂಬಕಸ್ತು ತ್ರಿಯಂಬಕಃ ॥೨೦॥**

**ಸುಪುಷ್ಪಿತಸ್ಯ ವೃಕ್ಷಸ್ಯ ಯಥಾ ಗಂಧಃ ಸು ಶೋಭನಃ ।**
**ವಾತಿ ದೂರಾತ್ತಥಾ ತಸ್ಯ ಗಂಧಃ ಶಂಭೋರ್ಮಹಾತ್ಮನಃ ॥೨೧॥**

**ತಸ್ಮಾತ್ಸುಗಂಧೋ ಭಗವಾನ್ ಗಂ ಧಾರಯತಿ ಶಂಕರಃ ।**
**ಗಾಂಧಾರಶ್ಚ ಮಹಾದೇವೋ ದೇವಾನಾಮಪಿ ಲೀಲಯಾ ॥೨೨॥**

---

ಕನು ಮೂರುಲೋಕಗಳಿಗೂ ಸತ್ತ್ವರಜಸ್ತಮೋಗುಣಗಳೆಂಬ ಮೂರು ಗುಣಗಳಿಗೂ ನಿಯಾಮಕನಾಗಿರುವನು. ಇದಲ್ಲದೇ ಅಕಾರ, ಉಕಾರ, ಮಕಾರವೆಂಬೀ ಮೂರು ಅಕ್ಷರಗಳಿಂದ ಕೂಡಿರುವ ಓಂಕಾರಕ್ಕೆ ಕಾರಣನೂ, ಇದರಂತೆ ಚಂದ್ರ, ಸೂರ್ಯ, ಅಗ್ನಿ, ಮತ್ತು ದಕ್ಷಿಣಾಗ್ನ್ಯಾದಿ ಅಗ್ನಿತ್ರಯ, ಇವೆಲ್ಲಕ್ಕೂ ಕಾರಣನೂ, ಅಂಬಾ, ಉಮಾ, ಎಂಬ ನಾಮ ಭೇದಗಳನ್ನು ಹೊಂದಿರುವ ಮಹಾದೇವಿಯ ಪತಿಯೂ, ಇವರೆಲ್ಲರ ಸ್ವರೂಪನೂ ಆಗಿರುವನು. ಆದುದರಿಂದಲೇ ಇವನಿಗೆ ತ್ರಿಯಂಬಕನೆಂಬ ವುದು. (ತ್ರಿಯಂಬಕನೆಂದರೆ ಮೂರಕ್ಕೂ ತಾಯಿಯು, ಮತ್ತು ಮೂರು ಸುಂಜ್ಞೆಯು ಇರಕಣ್ಣುಗಳುಳ್ಳವನೆಂದರ್ಥವು.)

೨೧. ಚೆನ್ನಾಗಿ ವಿಕಸಿತವಾಗಿರುವ ಹೂಗಳಿಂದ ಅಲಂಕೃತವಾಗಿರುವ ಮರದಿಂದ ಗಾಳಿಯ ಸಹಾಯದಿಂದ ಗಂಧವು ಯಾವ ರೀತಿಯಲ್ಲಿ ನಾನಾದಿಕ್ಕುಗಳಲ್ಲಿ ಹರಡುವುದೋ ಆದರಂತೆ, ಈಶ್ವರನ ಅನುಗ್ರಹ ರೂಪವಾದ ಗಂಧವು ಬಹಳ ದೂರದಲ್ಲಿದ್ದರೂ ಭಕ್ತರಿಗೆ ಉಂಟಾಗುವುದು.

೨೨. ಆದುದರಿಂದಲೇ ಮಹಾದೇವನು ಸುಗಂಧರೂಪನು. ಅಲ್ಲದೆ ದೇವತೆಗಳಿಗೆ ಲೀಲಾ ಜಾಲವಾಗಿ ಗಾನವನ್ನು ಮಾಡಿಸುವ ಸಾಮರ್ಥ್ಯವನ್ನೂ ದಯಪಾಲಿಸಿರುವವನು.

ಸುಗಂಧಸ್ತಸ್ಯ ಲೋಕೇಽಸ್ಮಿನ್ವಾಯುರ್ವಾತಿ ನ ಭಸ್ತಲೇ ।
ತಸ್ಮಾತ್ಸುಗಂಧಿಸ್ತಂ ದೇವಂ ಸುಗಂಧಿಂ ಪುಷ್ಟಿವರ್ಧನಂ ॥೨೩॥
ಯಸ್ಯ ರೇತಃ ಪುರಾ ಶಂಭೋಃ ಹರೇರ್ಯೋನೌ ಪ್ರತಿಷ್ಠಿತಂ ।
ತಸ್ಯ ವೀರ್ಯಾದ ಭೂದಂಡಂ ಹಿರಣ್ಮಯ ಮಜೋದ್ಭವಂ ॥೨೪॥
ಚಂದ್ರಾದಿತ್ಯೌ ಸನಕ್ಷತ್ರೌ ಭೂರ್ಭುವಃ ಸ್ವಃ ಮಹಸ್ತಪಃ ।
ಸತ್ಯಲೋಕಮತಿಕ್ರಮ್ಯ ಪುಷ್ಟಿರ್ವೀರ್ಯಸ್ಯ ತಸ್ಯ ವೈ ॥೨೫॥
ಪಂಚಭೂತಾನ್ಯಹಂಕಾರೋ ಬುದ್ಧಿಃ ಪ್ರಕೃತಿರೇವಚ ।
ಪುಷ್ಟಿರ್ಬೀಜಸ್ಯ ತಸ್ಯೈವ ತಸ್ಮಾದ್ವೈ ಪುಷ್ಟಿವರ್ಧನಃ ॥೨೬॥

---

೨೩. ಆ ಸುಗಂಧದ ಮಹಿಮೆಯಿಂದಲೇ ಎಂದರೆ ಆ ತ್ರಿಯಂಬಕನ ಗಾನರೂಪವಾದ ಶಬ್ದದಿಂದ ಪುಷ್ಟಿಯನ್ನು ಪಡೆದ ವಾಯುವು ಆಕಾಶದಲ್ಲಿ ಸಂಚರಿಸುತ್ತದೆ. ಆದುದರಿಂದ ಗಾಯನವನ್ನರಿತ ಮತ್ತು ಸಕಲ ರಕ್ಷಕನಾದ ಆ ಮಹಾದೇವನನ್ನು ಜಪಿಸಬೇಕು.

೨೪. ಹಿಂದೆ ಯಾವ ಪರಮೇಶ್ವರನ ವೀರ್ಯವು ಸ್ತ್ರೀರೂಪಿಯಾದ ವಿಷ್ಣುವಿನ ಯೋನಿಯಲ್ಲಿ (ನಾಭಿಸ್ಥಾನದಲ್ಲಿ) ಸ್ಥಾಪಿಸಲ್ಪಟ್ಟಿತೋ ಆ ಪರಮೇಶ್ವರನ ವೀರ್ಯದಿಂದಲೇ ಹಿರಣ್ಯಗರ್ಭ ಬ್ರಹ್ಮನೂ, ಅವನಿಂದ ಉಂಟಾದ ಈ ಸಕಲ ಬ್ರಹ್ಮಾಂಡವೂ ಹುಟ್ಟಿ ಸಾಗುತ್ತಿರುವುದು.

೨೫. ಮಹೇಶ್ವರನ ಆ ವೀರ್ಯವು ಚಂದ್ರಲೋಕ, ಆದಿತ್ಯಲೋಕ, ನಕ್ಷತ್ರಲೋಕ, ಭೂರ್ಲೋಕ, ಭುವರ್ಲೋಕ, ಸುವರ್ಲೋಕ, ಮಹರ್ಲೋಕ, ತಪೋ ಲೋಕ, ಮತ್ತು ಸತ್ಯಲೋಕ, ಎಂಬ ಈ ಲೋಕಗಳನ್ನು ಅತಿಕ್ರಮಿಸಿ, ಸಕಲ ಸ್ಥಳಗಳನ್ನೂ ವ್ಯಾಪಿಸಿರುತ್ತದೆ. (ಎಂದರೆ ಸಕಲ ಲೋಕಗಳೂ ಈ ವೀರ್ಯದಿಂದಲೇ ಹುಟ್ಟಿ ಪುಷ್ಟವಾಗಿವೆ. ಎಂದರ್ಥವು).

೨೬. ಮತ್ತು ಆ ವೀರ್ಯವೇ ಪೃಥಿವ್ಯಾದಿ ಪಂಚಭೂತಗಳಿಗೂ, ಅಹಂಕಾರ, ಬುದ್ಧಿ, ಮೂಲ ಪ್ರಕೃತಿ, ಎಂಬೀ ತತ್ತ್ವಗಳಿಗೆಲ್ಲಕ್ಕೂ ಕಾರಣಭೂತವಾಗಿಯೂ ಇರುತ್ತದೆ. ಆದುದರಿಂದ ಈ ಎಲ್ಲ ಪೂರ್ವೋಕ್ತವಾದ ವಸ್ತುಗಳಿಗೆ ಅದು ಪುಷ್ಟಿದಾಯಕವೂ ಆಗಿರುತ್ತದೆ.

ತಂ ಪುಷ್ಟಿವರ್ಧನಂ ದೇವಂ ಘೃತೇನ ಪಯಸಾ ತಥಾ ।
ಮಧುನಾ ಯವಗೋಧೂಮ ಮಾಷ ಬಿಲ್ವಫಲೇನ ಚ ॥೨೭॥
ಕುಮುದಾರ್ಕ ಶಮೀಪತ್ರ ಗೌರಸರ್ಷಪಶಾಲಿಭಿಃ ।
ಹುತ್ವಾ ಲಿಂಗೇ ಯಥಾನ್ಯಾಯಂ ಭಕ್ತ್ಯಾದೇವಂ ಯಜಾಮಹೇ ॥
ಋತೇನಾನೇನ ಮಾಂ ಪಾಶಾದ್ಬಂಧನಾತ್ಕರ್ಮಯೋಗತಃ ।
ಮೃತ್ಯೋಶ್ಚ ಬಂಧನಾಚ್ಚೈವ ಮುಕ್ಷೀಯ ಭವ ತೇಜಸಾ ॥೨೯॥
ಉರ್ವಾರುಕಾಣಾಂ ಪಕ್ವಾನಾಂ ಯಥಾಕಾಲಾದಭೂತ್ಪುನಃ ।
ತಥೈವ ಕಾಲಃ ಸಂಪ್ರಾಪ್ತೋ ಮನುನಾ ತೇನ ಯತ್ನತಃ ॥೩೦॥

---

೨೭–೨೮. (ಈ ಹಿಂದಿನ ಶ್ಲೋಕಗಳಿಂದ "ತ್ರಿಯಂಬಕಂ ಯಜಾಮಹೇ" ಎಂಬ ಮಂತ್ರದಲ್ಲಿರುವ ತ್ರಿಯಂಬಕವೆಂಬ ಶಬ್ದವನ್ನು ನಾನಾರ್ಥಗಳಿಂದ ವಿವರಿಸಿದರು. ಈಗ ಯಜಾಮಹೇ ಎಂಬ ಶಬ್ದದ ಅರ್ಥವನ್ನು ವಿವರಿಸುತ್ತಾರೆ).

ಸಕಲ ವಸ್ತುಗಳಿಗೂ ವೃದ್ಧಿಕಾರಕನಾದ ಆ ತ್ರಿಯಂಬಕನನ್ನು ಮಧು, ಅಕ್ಕಿ, ಗೋಧಿ, ಉದ್ದು, ಬಿಲ್ವ ಫಲ, ಶ್ವೇತ ಫಲ, ಅರ್ಕಪುಷ್ಪ, ಶಮೀ ಪತ್ರ, ಶ್ವೇತಸರ್ಷಪ (ಬಿಳಿಯ ಸಾಸುವೆ,) ಬತ್ತ, ಈ ದ್ರವ್ಯಗಳಿಂದ ಸರಿಯಾಗಿ ಹೋಮವನ್ನು ಮಾಡಿ, ಲಿಂಗದಲ್ಲಿ ಭಕ್ತಿಯಿಂದ ಪೂಜೆಯನ್ನು ಮಾಡುತ್ತೇವೆ.

೨೯. ಓ ಶಿವನೇ, ನಾನು ಆಚರಿಸಿರುವ ಈ ಕ್ರಮವಾದ ಹೋಮದಿಂದ ತುಷ್ಟನಾಗಿ, ನಿನ್ನ ತೇಜಸ್ಸಿನಿಂದ ಕರ್ಮಯೋಗವೆಂಬ ಪಾಶದಿಂದ ಕಟ್ಟುಬಿದ್ದಿರುವ ನನ್ನನ್ನು ಮುಕ್ತನನ್ನಾಗಿ ಮಾಡು, ಮತ್ತು ಮೃತ್ಯುಪಾಶದಿಂದಲೂ ನನ್ನನ್ನು ಮುಕ್ತನನ್ನಾಗಿ ಮಾಡು.

೩೦. ಪಕ್ವವಾದ ಉರ್ವಾರುಕ ಫಲವು (ಸೌತೇಕಾಯಿ) ಹೇಗೆ ಕಾಲಾಂತರದಲ್ಲಿ ತನ್ನ ಬಂಧನದಿಂದ ವಿಮುಕ್ತವಾಗುವುದೋ ಹಾಗೆ ತ್ರಿಯಂಬಕನನ್ನು ಭಕ್ತಿ ಯತ್ನಪೂರ್ವಕವಾಗಿ ಜಪಿಸಿ ಹೋಮವನ್ನಾಚರಿಸಿದರೆ ಕಾಲಕ್ರಮದಲ್ಲಿ ಮೃತ್ಯುಪಾಶಕರ್ಮಗಳಿಂದ ವಿಮುಕ್ತನಾಗುತ್ತಾನೆ.

ಏವಂ ಮಂತ್ರವಿಧಿಂ ಜ್ಞಾತ್ವಾ ಶಿವಲಿಂಗಂ ಸಮರ್ಚಯೇತ್ ।
ತಸ್ಯ ಪಾಶಕ್ಷಯೋಽತೀವ ಯೋಗಿನೋ ಮೃತ್ಯು ನಿಗ್ರಹಃ ॥೩೧॥
ತ್ರಿಯಂಬಕಸಮೋ ನಾಸ್ತಿ ದೇವೋ ವಾ ಘೃಣಯಾಽನ್ವಿತಃ ।
ಪ್ರಸಾದಶೀಲಃ ಪ್ರೀತಶ್ಚ ತಥಾ ಮಂತ್ರೋಽಪಿ ಸುವ್ರತಾಃ ॥೩೨॥
ತಸ್ಮಾತ್ಸರ್ವಂ ಪರಿತ್ಯಜ್ಯ ತ್ರಿಯಂಬಕಮುಮಾಪತಿಂ ।
ತ್ರಿಯಂಬಕೇಣ ಮಂತ್ರೇಣ ಪೂಜಯೇತ್ಸುಸಮಾಹಿತಃ ॥೩೩॥
ಸರ್ವಾವಸ್ಥಾಂ ಗತೋ ವಾಽಪಿ ಮುಕ್ತೋಽಯಂ ಸರ್ವಪಾತಕೈಃ ।
ಶಿವಧ್ಯಾನಾನ್ನ ಸಂದೇಹೋ ಯಥಾ ರುದ್ರ ಸ್ತಥಾ ಸ್ವಯಂ ॥೩೪॥

---

೩೧. ಪೂರ್ವೋಕ್ತ ರೀತಿಯಿಂದ ಈ ಮಂತ್ರವಿಧಿಯನ್ನು ತಿಳಿದುಕೊಂಡು ಶಿವಲಿಂಗವನ್ನು ಪೂಜಿಸಬೇಕು. ಹೀಗೆ ಪೂಜಿಸುವ ಕರ್ಮಿಯು ಸಂಸಾರಪಾಶದಿಂದ ವಿನಿರ್ಮುಕ್ತನಾಗಿ ಮೃತ್ಯುವನ್ನೂ ನಿಗ್ರಹಿಸುವನು.

೩೨. ದೇವತೆಗಳಲ್ಲಿ ತ್ರಿಯಂಬಕನಿಗೆ ಸದೃಶನಾದ, ಕರುಣಾರ್ದ್ರ ಹೃದಯನಾದ ಮತ್ತೊಬ್ಬ ದೇವನು ಇರುವುದಿಲ್ಲ. ತ್ರಿಯಂಬಕನು ಸುಪ್ರೀತನೂ, ಅನುಗ್ರಹವನ್ನುಂಟುಮಾಡುವ ಸ್ವಭಾವವುಳ್ಳವನೂ ಆಗಿರುವನು. ಹಾಗೆಯೇ ಈ ಮಂತ್ರವೂ ಶೀಘ್ರಸಿದ್ಧಿಯನ್ನುಂಟು ಮಾಡುತ್ತದೆ.

೩೩. ಆದುದರಿಂದ ಇತರ ಕಾಮ್ಯಜಪತಪಾದಿಗಳನ್ನೂ ಪರಿತ್ಯಜಿಸಿ, ಚಿತ್ತೈಕಾಗ್ರ್ಯದಿಂದ ಕೂಡಿದವನಾಗಿ ಪಾರ್ವತೀಪತಿಯಾದ ಆ ತ್ರಿಯಂಬಕನನ್ನು ತ್ರಿಯಂಬಕ ಮಂತ್ರದಿಂದ ಪೂಜಿಸಬೇಕು.

೩೪. ಈಗ ಶಿವಧ್ಯಾನ ಮಾಹಾತ್ಮ್ಯೆಯನ್ನು ಹೇಳುತ್ತಾರೆ. ಯಾವ ವಿಪನ್ನಾವಸ್ಥೆಯನ್ನು ಹೊಂದಿದ್ದರೂ ಸಹ ಶಿವಧ್ಯಾನವನ್ನು ಮಾಡುವುದರಿಂದ ಸಕಲ ಪಾಪಗಳಿಂದಲೂ ಭಕ್ತನು ವಿನಿರ್ಮುಕ್ತನಾಗುತ್ತಾನೆ. ಏಕೆಂದರೆ ಶಿವಧ್ಯಾನವನ್ನು ಮಾಡುವುದರಿಂದ ಧ್ಯಾನಮಾಡುವವನಿಗೆ ಶಿವತಾದಾತ್ಮ್ಯವೇ ವುಂಟಾಗುತ್ತಿರಲು ಶಿವನು ಹೇಗೆ ಸಕಲ ಪಾಪಗಳಿಂದಲೂ, ವಿನಿರ್ಮುಕ್ತನೋ ಸಚ್ಚಿದಾನಂದರೂಪನೋ ಅದರಂತೆಯೇ ಶಿವಧ್ಯಾನಿಯೂ ಪಾಪವಿನಿರ್ಮುಕ್ತನಾಗಿ, ಸಚ್ಚಿದಾನಂದರೂಪನಾಗಿತ್ತಾನೆ.

**ಹತ್ವಾ ಭಿತ್ವಾ ಚ ಭೂತಾನಿ ಭುಕ್ತ್ವಾ ಚಾನ್ಯಾಯತೋಽಪಿ ವಾ ।**
**ಶಿವಮೇಕಂ ಸಕೃತ್ಸ್ಮೃತ್ವಾ ಸರ್ವಪಾಪೈಃ ಪ್ರಮುಚ್ಯತೇ ॥೩೫॥**

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
ಚತುಃ ಪಂಚಾಶತ್ತಮೋಽಧ್ಯಾಯಃ

---

೩೫. ಭೂತದಯಾ, ನ್ಯಾಯ, ಧರ್ಮಾದಿಗಳನ್ನು ಬಿಟ್ಟು ಪ್ರಾಣಿಹಿಂಸೆಯನ್ನು ಮಾಡಿದ್ದರೂ, ಮತ್ತು ಅಭೋಜ್ಯವಸ್ತುಗಳನ್ನು ಭುಜಿಸಿದ್ದರೂ, ಸಹ ಒಂದೇ ಒಂದು ಬಾರಿ ಶಿವನನ್ನು ಏಕಾಂತಭಕ್ತಿಯೊಡನೆ ಸ್ಮರಿಸುವುದರಿಂದ ಸಕಲ ಪಾಪಗಳಿಂದಲೂ ಬಿಡಲ್ಪಟ್ಟು ಭಕ್ತನು ಶಿವನ ಸಾರೂಪ್ಯವನ್ನು ಹೊಂದುತ್ತಾನೆ.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರ ಭಾಗದಲ್ಲಿ ಐವತ್ತುನಾಲ್ಕನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ
## ಪಂಚ ಪಂಚಾಶತ್ತಮೋಽಧ್ಯಾಯಃ

**॥ ಋಷಯ ಊಚುಃ ॥**

**ಕಥಂ ತ್ರಿಯಂಬಕೋ ದೇವೋ ದೇವದೇವೋ ವೃಷಧ್ವಜಃ ।**
**ಧ್ಯೇಯಃ ಸರ್ವಾರ್ಥಸಿದ್ಧ್ಯರ್ಥಂ ಯೋಗಮಾರ್ಗೇಣ ಸುವ್ರತ ॥**

**ಪೂರ್ವಮೇವಾಪಿ ನಿಖಿಲಂ ಶ್ರುತಂ ಶ್ರುತಿಸಮಂ ಪುನಃ ।**
**ವಿಸ್ತರೇಣ ಚ ತತ್ಸರ್ವಂ ಸಂಕ್ಷೇಪಾದ್ವಕ್ತುಮರ್ಹಸಿ ॥ ೨ ॥**

**॥ ಸೂತ ಉವಾಚ ॥**

**ಏವಂ ಪೃತಾಮ ಹೇನ್ನೈವ ನಂದೀ ದಿನಕರಪ್ರಭಃ ।**
**ಮೇರು ಪೃಷ್ಠೇ ಪುರಾ ಪೃಷ್ಟೋ ಮುನಿ ಸಂಘೈಃ ಸಮಾವೃತಃ ॥ ೩ ॥**

---

ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಐವತ್ತೈದನೆಯ ಅಧ್ಯಾಯವು.

೧. ಋಷಿಗಳು ಹೇಳಿದರು :—ಓ ಸೂತ ಮಹರ್ಷಿಯೇ, ವೃಷಭ ಧ್ವಜನಾದ ಆ ತ್ರಿಯಂಬಕನನ್ನು ಸಕಲ ಇಷ್ಟಾರ್ಥ ಸಿದ್ಧಿಗೋಸ್ಕರ ಧ್ಯಾನಯೋಗ ಮಾರ್ಗದಿಂದ ಧ್ಯಾನಿಸುವ ಬಗೆಯನ್ನು ನಮಗೆ ಹೇಳುವವನಾಗು.

೨. ಶ್ರುತಿ ಸದೃಶವಾದ ತ್ರಿಯಂಬಕ ಧ್ಯಾನದ ವಿಷಯವನ್ನು ಈ ಹಿಂದೆಯೇ ವಿಸ್ತಾರವಾಗಿ ಹೇಳಿರುತ್ತೀಯೆ, ಆದರೂ ಆ ಸಕಲ ವಿಷಯ ಗಳ ಸಾರವನ್ನೂ ಸಂಕ್ಷೇಪವಾಗಿ ಹೇಳುವವನಾಗು.

೩. ಎಲೈ ಋಷಿಗಳೇ, ನೀವು ಕೇಳಿದ ಈ ವಿಷಯವನ್ನೇ ಹಿಂದೆ ಒಂದಾನೊಂದು ಕಾಲದಲ್ಲಿ ಬ್ರಹ್ಮಪುತ್ರನಾದ ಸನತ್ಕುಮಾರನು ಮೇರು ಪರ್ವತದ ತಪ್ಪಲಿನ ಭಾಗದಲ್ಲಿ ಆಸೀನನಾಗಿದ್ದ ತೇಜೋವಂತನಾದ, ಮತ್ತು ಋಷಿಗಳಿಂದ ಕೂಡಿರುವ ನಂದಿಯನ್ನು ಕುರಿತು ಹೀಗೆಂದು ಕೇಳಿದನು.

ಸೋಽಪಿ ತಸ್ಮೈ ಕುಮಾರಾಯ ಬ್ರಹ್ಮಪುತ್ರಾಯ ಸುವ್ರತಾಃ।
ವಿಥಃ ಪ್ರೋವಾಚ ಭಗವಾನ್ ಪ್ರಣತಾಯ ಸಮಾಹಿತಃ ॥ ೪ ॥

॥ ನಂದಿಕೇಶ್ವರ ಉವಾಚ ॥

ಏವಂ ಪುರಾ ಮಹಾದೇವೋ ಭಗವಾನ್ನೀಲ ಲೋಹಿತಃ।
ಗಿರಿ ಪುತ್ರ್ಯಾಽಂಬಯಾ ದೇವ್ಯಾ ಭಗವತ್ಯೈಕ ಶಯ್ಯಯಾ ॥ ೫ ॥

॥ ಶ್ರೀ ದೇವ್ಯುವಾಚ ॥

ಪೃಷ್ಟಃ ಕೈಲಾಸ ಶಿಖರೇ ಹೃಷ್ಟಪುಷ್ಟ ತನೂರುಹಃ।
ಯೋಗಃ ಕತಿ ವಿಧಃ ಪ್ರೋಕ್ತಸ್ತತ್ಕಥಂ ಚೈವ ಕೀದೃಶಂ ॥ ೬ ॥
ಜ್ಞಾನಂ ಚ ಮೋಕ್ಷದಂ ದಿವ್ಯಂ ಮುಚ್ಯತೇ ಯೇನ ಜಂತವಃ।

---

೪. ಎಲೈ ಋಷಿಗಳೇ, ಈ ರೀತಿಯಲ್ಲಿ ನಂದಿಕೇಶ್ವರನನ್ನು ನಮಸ್ಕರಿಸಿ ಆ ಬ್ರಹ್ಮ ಪುತ್ರನಾದ ಸನತ್ಕುಮಾರನು ಈ ವಿಷಯವನ್ನು ಪ್ರಶ್ನಿಸಲು, ಭಗವಂತನಾದ ನಂದಿಕೇಶ್ವರನು ಸನತ್ಕುಮಾರನಿಗೆ ಈ ವಿಷಯವನ್ನು ಹೀಗೆ ಹೇಳಿದನು.

೫. ನಂದಿಕೇಶ್ವರನು ಹೇಳಿದನು:— ಎಲೈ ಸನತ್ಕುಮಾರನೇ, ಹಿಂದೆ ಒಂದಾನೊಂದು ಕಾಲದಲ್ಲಿ ಈಶ್ವರ ನೊಂದಿಗೆ ಶಯನಾರೂಢಳಾದ ಗಿರಿ ಪುತ್ರಿಯಾದ ಪಾರ್ವತಿಯು ಪತಿಯಾದ, ಹರ್ಷ ಚಿತ್ತನಾದ, ನೀಲ ಕಂಠನಾದ ಆ ಪರಮೇಶ್ವರನನ್ನು ಕುರಿತು ತ್ರಿಯಂಬಕ ಧ್ಯಾನವನ್ನು ಮಾಡುವ ಬಗೆಯನ್ನು ಹೇಳೆಂದು ಕೇಳಿಕೊಂಡಳು. ಹೇಗೆಂದರೆ,

೬. ಶ್ರೀ ದೇವಿಯು ಹೇಳಿದಳು:—ಓ ಪ್ರಭುವೇ, ಯೋಗವು ಎಷ್ಟುವಿಧವಾಗಿ ವಿಂಗಡಿಸಲ್ಪಟ್ಟಿದೆ? ಆ ವಿಧಗಳು ಯಾವುವು? ಮತ್ತು ಯಾವ ಜ್ಞಾನದಿಂದ ಪ್ರಾಣಿಗಳು ಸಂಸಾರಪಾಶದಿಂದ ವಿಮುಕ್ತರಾಗಿ ಮೋಕ್ಷವನ್ನೈದುವರೋ ಆ ಮೋಕ್ಷಸಾಧನವಾದ ಜ್ಞಾನದ ಸ್ವರೂಪವೇನು? ಎಂಬೀವಿಷಯಗಳನ್ನು ಹೇಳುವವನಾಗು.

॥ ಶ್ರೀ ಭಗವಾನುವಾಚ ॥

ಪ್ರಥಮೋ ಮಂತ್ರಯೋಗಶ್ಚ ಸ್ಪರ್ಶಯೋಗೋ ದ್ವಿತೀಯಕಃ ॥
ಭಾವಯೋಗಸ್ತೃತೀಯಃ ಸ್ಯಾತ್ ಅಭಾವಶ್ಚ ಚತುರ್ಥಕಃ ।
ಸರ್ವೋತ್ತಮೋ ಮಹಾಯೋಗಃ ಪಂಚಮಃ ಪರಿಕೀರ್ತಿತಃ ॥ ೮ ॥

ಧ್ಯಾನಯುಕ್ತೋ ಜಪಾಭ್ಯಾಸಃ ಮಂತ್ರಯೋಗಃ ಪ್ರಕೀರ್ತಿತಃ ।
ನಾಡೀ ಶುದ್ಧ್ಯಧಿಕೋ ಯಸ್ತು ರೇಚಕಾದಿ ಕ್ರಮಾನ್ವಿತಃ ॥ ೯ ॥

---

೭–೮. ಶ್ರೀ ಭಗವಂತನು ಹೇಳಿದನು :—ಎಲೌ, ದೇವಿಯೇ, ಯೋಗವು ಕ್ರಮವಾಗಿ ಮಂತ್ರಯೋಗ, ಸ್ಪರ್ಶಯೋಗ, ಭಾವಯೋಗ ಅಭಾವಯೋಗ, ಮಹಾಯೋಗ, ಎಂದು ಐದುವಿಧವಾಗಿಹೇಳಲ್ಪಟ್ಟಿರುತ್ತದೆ. ಈ ಐದುಯೋಗಗಳಲ್ಲಿ ಐದನೆಯ ಯೋಗವಾದ ಮಹಾಯೋಗವು ಇನ್ನಿತರ ಯೋಗಗಳಿಗಿಂತಲೂ, ಬಹಳ ಪ್ರಶಸ್ತವಾಗಿರುತ್ತದೆ.

೯–೧೧. ನಾನಾಕಡೆಗಳಲ್ಲಿ ಸಂಚರಿಸುವ ಸ್ವಭಾವವುಳ್ಳ ಅಂತಃಕರಣವನ್ನು ಧ್ಯೇಯವಾದ ವಸ್ತುವಿನಲ್ಲಿಟ್ಟು, ಅದರನಾಮ ಅಥವಾ ಮಂತ್ರವನ್ನು ನಿರಂತರವಾಗಿ ಜಪಿಸುವುದಕ್ಕೆ ಮಂತ್ರಯೋಗವೆಂದು ಹೆಸರು. ಈ ಯೋಗವೇ ಪ್ರಥಮ ಯೋಗವಾಗಿರುತ್ತದೆ. ಸ್ಪರ್ಶ ಯೋಗವೆಂದರೆ ರೇಚಕ, ಪೂರಕ, ಕುಂಭಕವೆಂದು ಸಂಜ್ಞೆಯುಳ್ಳ ಮೂರು ಪ್ರಾಣಾಯಾಮಗಳನ್ನು ಅನುಷ್ಠಾನಮಾಡಿ, ಅದರ ಮೂಲಕ ಸುಷುಮ್ನಾನಾಡಿಯನ್ನೂ ಸಕಲ ನಾಡಿಗಳನ್ನು ಶುದ್ಧವಾದವುಗಳನ್ನಾಗಿ ಮಾಡುವುದು. ಇದೇ ಮುಖ್ಯವಾದ ಸ್ಪರ್ಶಯೋಗದ ಫಲವಾಗಿರುತ್ತದೆ. ರೇಚಕವೆಂದರೆ ನಾಸಾಪುಟದ ಮಾರ್ಗದಿಂದ ಒಳಗಿನ ವಾಯುವನ್ನು ನಿಧಾನವಾಗಿ ಹೊರಗೆ ಬಿಡುವ ಕ್ರಿಯೆಗೆ ರೇಚಕವೆಂದು ಹೆಸರು. ಇದನ್ನೇ ರೇಚಕ ಪ್ರಾಣಾಯಾಮವೆಂದು ಹೇಳುತ್ತಾರೆ. ಪೂರಕ ಪ್ರಾಣಾಯಾಮವೆಂದರೆ ನಾಸಾಪುಟದಿಂದ ಹೊರಗಿನ ಶುದ್ಧವಾದ ವಾಯುವನ್ನು ಒಳಗೆ ಸೆಳೆದುಕೊಳ್ಳುವ ಕ್ರಿಯೆಗೆ ಪೂರಕವೆಂದು ಹೆಸರು. ಇದನ್ನೇ ಪೂರಕ

**ಸಮಸ್ತವ್ಯಸ್ತ ಯೋಗೇನ ಜಯೋ ವಾಯೋಃ ಪ್ರಕೀರ್ತಿತಃ ।**
**ಬಲಸ್ಥಿರ ಕ್ರಿಯಾ ಯುಕ್ತೋ ಧಾರಣಾದ್ಯೈಶ್ಚ ಶೋಭನೈಃ ॥೧೦॥**
**ಧಾರಣಾತ್ರಯ ಸಂದೀಪ್ತೋ ಭೇದತ್ರಯ ವಿಶೋಧಕಃ ।**
**ಕುಂಭಕಾವಸ್ಥಿತೋಽಭ್ಯಾಸಃ ಸ್ಪರ್ಶಯೋಗಃ ಪ್ರಕೀರ್ತಿತಃ ॥೧೧॥**

---

ಪ್ರಾಣಾಯಾಮವೆಂದು ಹೇಳುತ್ತಾರೆ. ಕುಂಭಕವೆಂದರೆ ಪೂರಕ ಪ್ರಾಣಾಯಾಮದಿಂದ ಒಳಗೆ ಸೆಳೆದುಕೊಂಡಿರುವ ವಾಯುವನ್ನು ಅಂತಃ ಕರಣ ಪ್ರದೇಶದಲ್ಲಿಯೇ (ಹೃದಯದಲ್ಲಿ) ಸ್ತಬ್ಧವಾಗಿರುವಂತೆ ಮಾಡುವ ಕ್ರಿಯೆಗೆ ಕುಂಭಕವೆಂದು ಹೆಸರು. ಇದನ್ನೇ ಕುಂಭಕ ಪ್ರಾಣಾಯಾಮ ವೆಂದು ಹೇಳುತ್ತಾರೆ. ಮೊದಲು ರೇಚಕ, ಪೂರಕ, ಕುಂಭಕ, ವೆಂಬೀ ಪ್ರಾಣಾಯಾಮ ಕ್ರಮಗಳಿಂದ ಸುಷುಮ್ನಾದಿ ನಾಡಿಗಳನ್ನು ಶುದ್ಧ ವಾದುವುಗಳನ್ನಾಗಿ ಮಾಡಿ, ಸಮಸ್ತ ಯೋಗ, ಮತ್ತು ವ್ಯಸ್ತಯೋಗ ಗಳಿಂದ ಪ್ರಾಣವಾಯುವನ್ನು ಜಯಿಸಿ, ಧಾರಣ, ಧ್ಯಾನ, ಸಮಾಧಿ ಮೊದ ಲಾದ ಯೋಗದ ಅಂಗಗಳನ್ನು ಸತತವಾಗಿ ಅಭ್ಯಾಸಮಾಡಿ, ಆದರಿಂದ ಅಂತರಿಂದ್ರಿಯನ್ನು ನಿಗ್ರಹಿಸಬೇಕು. ಅಂತರಿಂದ್ರಿಯ ನಿಗ್ರಹದಿಂದ ವೀರ್ಯಸ್ತಂಭನವು ಉಂಟಾಗುತ್ತದೆ. ಈ ಕ್ರಿಯೆಗೆ ವಜ್ರೀ ಕ್ರಿಯೆಯೆಂದು ಹೇಳುತ್ತಾರೆ. ತರುವಾಯ ಸಾತ್ವಿಕ, ರಾಜಸ ಮತ್ತು ತಾಮಸಗಳೆಂಬ ಮೂರು ಧಾರಣೆಗಳಲ್ಲಿ ಸಾತ್ವಿಕವಾದಕುಂಭಕ ಪ್ರಾಣಾಯಾಮದ ಲ್ಲಿಯೇ ನೆಲೆಸಿ ಇರಬೇಕು. ಇದಕ್ಕೆ ಸ್ಪರ್ಶಯೋಗವೆಂದು ಹೆಸರು. ಸ್ಪರ್ಶಯೋಗದಿಂದುಟಾಗುವ ಆಧ್ಯಾತ್ಮಿಕವಾದ ಪ್ರಧಾನ ಫಲವು ಯಾವು ದೆಂದರೆ ಸ್ವಭಾವದಿಂದ ಶುದ್ಧವಾದ ಚೈತನ್ಯಕ್ಕೆ ಔಪಾಧಿಕವಾಗಿ ಪ್ರಾಪ್ತ ವಾಗಿರುವ, ವಿಶ್ವ, ತೈಜಸ, ಮತ್ತು ಪ್ರಾಜ್ಞ, ಎಂಬೀ ಮೂರು ಬಗೆಯ ಅವಸ್ಥೆಗಳಿಂದ ಉಂಟಾಗಿರುವ ಭೇದ ದೃಷ್ಟಿಯು ಹೊರಟು ಹೋಗಿ ಕೈವಲ್ಯಾವಸ್ಥಾನರೂಪವಾದ ಮೋಕ್ಷವು ಕ್ರಮದಿಂದ ಸಿದ್ಧಿಸುವುದು. ಚಿತ್ತನೈರ್ಮಲ್ಯ ಸಾಧಕವಾದ ಇದೇ ಸ್ಪರ್ಶಯೋಗವಾಗಿರುತ್ತದೆ.

ಮಂತ್ರ ಸ್ಪರ್ಶ ವಿನಿರ್ಮುಕ್ತೋ ಮಹಾದೇವಂ ಸಮಾಶ್ರಿತಃ ।
ಬಹಿರಂತರ್ವಿ ಭಾಗಸ್ಥಃ ಸ್ಫುರತ್ಸಂಹರಣಾತ್ಮಕಃ ॥೧೨॥
ಭಾವಯೋಗಃ ಸಮಾಖ್ಯಾತ ಶ್ಚಿತ್ತಶುದ್ಧಿ ಪ್ರದಾಯಕಃ ।
ವಿಲೀನಾವಯವಂ ಸರ್ವ ಜಗತ್ಸ್ಥಾವರ ಜಂಗಮಂ ॥೧೩॥
ಶೂನ್ಯಂ ಸರ್ವಂ ನಿರಾಭಾಸಂ ಸ್ವರೂಪಂ ಯತ್ರ ಚಿಂತ್ಯತೇ ।
ಅಭಾವಯೋಗಃ ಸಂಪ್ರೋಕ್ತಃ ಚಿತ್ತನಿರ್ವಾಣ( ರ್ಮಲ )ಕಾರಕಃ ॥

---

೧೨. ಭಾವ ಯೋಗವೆಂದರೆ ಮಂತ್ರಯೋಗ ಮತ್ತು ಸ್ಪರ್ಶ ಯೋಗಗಳ ಸಾಧನಾವಸ್ಥೆಯನ್ನು ಬಿಟ್ಟು ರೂಪಾದಿ ಬಾಹ್ಯ ವಿಷಯಗಳಿಂದಲೂ, ಸುಖಾದಿ ಆಂತರಿಕ ವಿಷಯಗಳಿಂದಲೂ, ಮನಸ್ಸನ್ನು ಉಪಸಂಹರಿಸಿ ಅದರ ಮೂಲಕ ಚಿತ್ತವನ್ನು ಶುದ್ಧಿಪಡಿಸುವಿಕೆ, ಇದಕ್ಕೆ ಭಾವಯೋಗವೆಂದು ವ್ಯವಹಾರವು.

೧೩–೧೪. ಅಭಾವ ಯೋಗವೆಂದರೆ? ಸ್ಥಾವರ ಜಂಗಮಾತ್ಮಕವಾದ ನಿಖಿಲ ಪ್ರಪಂಚವನ್ನೂ ಲಯವನ್ನು ಹೊಂದಿಸಿ, ಎಂದರೆ ನಮ್ಮ ಕಣ್ಣೆದುರಿಗೆ ಕಾಣುತ್ತಿರುವ ಸಾಕಾರವಾದ ಈ ಪ್ರಪಂಚವು ಈಶ್ವರಾಧೀನವಾದ ಸಾರ್ವಜನೀನವಾದ ಮಾಯೆಯಿಂದಲೂ, ಆಕಾರವುಳ್ಳದ್ದಾಗಿಯೂ ಅವಯವಗಳಿಂದ ಕೂಡಿರುವುದಾಗಿಯೂ, ನಮ್ಮಲ್ಲಿರುವ ಮಾಯಾಂಶವಾದ ಅವಿದ್ಯೆಯಿಂದಲೇ, ತೋರುತ್ತಾ ಇರುವುದು. ಈ ಪದಾರ್ಥಗಳೂ, ಆಕಾರವೂ, ಅವಯವವೂ, ವಾಸ್ತವವಾಗಿ ಇರುವುದಿಲ್ಲ. ಎಂದು ಭಾವಿಸಿ, ಸಕಲ ಪ್ರಪಂಚವೂ ಶುಕ್ತಿರೂಪ್ಯ, ಮೃಗಮರೀಚಿಕಾದಿಗಂಳತೆ ಮಿಥ್ಯಾಭೂತವಾಗಿರುತ್ತಾ, ಇವುಗಳಲ್ಲಿ ಈಶ್ವರನಲ್ಲಿರುವ ಸತ್ತೆಗಿಂತಲೂ ಅತಿರಿಕ್ತ ಸತ್ತೆಯಿಲ್ಲದೇ ಇರುವುದರಿಂಗಲೂ, ಇವು ಸ್ವಯಂಪ್ರಕಾಶ ಸತ್ಯ ಸ್ವರೂಪಗಳಲ್ಲ ಎಂದು ಭಾವಿಸಿ, ಇವುಗಳೆಲ್ಲವೂ ನೀರಸವಾದವುಗಳೆಂದು ತಿಳಿದು ಹಾಗೆಯೇ ಸತತವಾಗಿ ಚಿಂತಿಸುತ್ತಿರುವುದು. ಇದಕ್ಕೆ ಅಭಾವಯೋಗವೆಂದು ಹೆಸರು. ಇದರಿಂದ ಚಿತ್ತಶುದ್ಧಿಯೂ ಲಯವೂ ಉಂಟಾಗುವುದು.

ನೀರೂಪಃ ಕೇವಲಃ ಶುದ್ಧಃ ಸ್ವಚ್ಛಂದಂ ಚ ಸುಶೋಭನಃ ।
ಅನಿರ್ದೇಶ್ಯಃ ಸದಾಲೋಕ್ಯಃ ಸ್ವಯಂವೇದ್ಯಃ ಸಮಂತತಃ ॥೧೫॥

ಸ್ವಭಾವೋ ಭಾಸತೇ ಯತ್ರ ಮಹಾಯೋಗಃ ಪ್ರಕೀರ್ತಿತಃ ।
ನಿತ್ಯೋದಿತಃ ಸ್ವಯಂ ಜ್ಯೋತಿಃ ಸರ್ವಚಿತ್ತ ಸಮುತ್ಥಿತಃ ॥೧೬॥

---

೧೫–೧೬. ಮಹಾ ಯೋಗವೆಂದರೆ ರೂಪರಹಿತವೂ, ಅದ್ವಿತೀಯವೂ, ಸುಖದುಃಖಾದಿ ಸಂಸರ್ಗ ಇಲ್ಲದೇ ಶುದ್ಧವೂ, ಪ್ರಕಾಶಮಾನವೂ, ಗುಣ, ಕ್ರಿಯೆ. ಜಾತಿ, ಮುಂತಾದುವುಗಳಿಂದ ನಿರ್ದೇಶ ಮಾಡಲು ಅಶ್ಯಕವಾದುದೂ, ಸರ್ವತ್ರಸಮನಾಗಿ ವ್ಯಾಪಿಸಿರುವ, ಸ್ವಯಂ ಪ್ರಕಾಶ ಸ್ವರೂಪವೂ, (ಸ್ವಯಂಪ್ರಕಾಶ ಸ್ವರೂಪವೆಂದರೆ, ಲೋಕದಲ್ಲಿ ಘಟಾಪಟಾದಿ ದೃಶ್ಯ ವಸ್ತುಗಳು ದೃಗ್ಗೋಚರವಾಗಲು ಬೆಳಕಿನ ಆವಶ್ಯಕತೆ ಇರುವುದು. ಆದರೆ ದೀಪವನ್ನು ಪ್ರಕಾಶಪಡಿಸುವುದಕ್ಕೋಸ್ಕರ ಬೇರೆಯ ದೀಪದ ಆವಶ್ಯಕತೆಯು ಹೇಗೆ ಇರುವುದಿಲ್ಲವೋ ಆದರಂತೆ ದೀಪಸ್ಥಾನೀಯವಾದ ಈ ಸಚ್ಚಿದಾನಂದ ಸ್ವರೂಪವನ್ನು ಪ್ರಕಾಶಪಡಿಸಲು ಪ್ರಕಾಶಕವಾದ ಮತ್ತೊಂದು ವಸ್ತುವಿನ ಅವಶ್ಯಕತೆಯು ಇರುವುದಿಲ್ಲ. ಏಕೆಂದರೆ ಅದು ತನ್ನನ್ನು ತಾನೇ ಪ್ರಕಾಶಪಡಿಸತಕ್ಕ ಸಾಮರ್ಥ್ಯವನ್ನು ಹೊಂದಿರುತ್ತದೆ. ಆದುದರಿಂದಲೇ ಆತ್ಮವಸ್ತುವನ್ನು ಸ್ವಯಂ ಪ್ರಕಾಶ ಸ್ವರೂಪವೆಂದು ಹೇಳುತ್ತಾರೆ.) ಅಂಥ ಸಚ್ಚಿದಾನಂದ ಸ್ವರೂಪವಾದ ಆತ್ಮವಸ್ತುವು ಯಾವ ಅವಸ್ಥೆಯಲ್ಲಿ ಸ್ಫುರಿಸುವುದೋ ಆ ಅವಸ್ಥೆಗೆ ಮಹಾ ಯೋಗವೆಂದು ಹೆಸರು. ಆತ್ಮನು ಕಾಲತ್ರಯದಲ್ಲಿಯೂ, ಇರುವವನಾಗಿಯೂ, ಸ್ವಪ್ರಕಾಶ ಸ್ವರೂಪನೂ, ಕನ್ನಡಿಯಂತೆ ನಿರ್ಮಲವಾದ ಅಂತಃ ಕರಣದಲ್ಲಿ ಉಪಲಭ್ಯಮಾನನೂ, ನಿರ್ಮಲನೂ, ಅದ್ವಿತೀಯನೂ ಆಗಿರುವನು. ಈ ಆತ್ಮನೇ ಮಹಾ ಯೋಗವೆಂಬ ಶಬ್ದಕ್ಕೆ ವಾಚ್ಯನೂ ಆಗಿರುವನು. ಮಹಾಯೋಗ ಶಬ್ದದ ಅರ್ಥವೇ ಈ ಬ್ರಹ್ಮಾತ್ಮೈಕ್ಯ ಸಾಕ್ಷಾತ್ಕಾರವಾಗಿರುವುದು. ಈ ಅಪರೋಕ್ಷಾನುಭವವು ಎಲ್ಲರ ಚಿತ್ತಗಳಲ್ಲೂ ಮೇಲೆ ಹೇಳಿದ ಕ್ರಮದಿಂದ ಆಗುವುದು.

ನಿರ್ಮಲಃ ಕೇವಲೋ ಹ್ಯಾತ್ಮಾ ಮಹಾಯೋಗ ಇತಿ ಸ್ಮೃತಃ ।
ಅಣಿಮಾದಿ ಪ್ರದಾಃ ಸರ್ವೇ ಸರ್ವೇ ಜ್ಞಾನಸ್ಯ ದಾಯಕಾಃ ॥೧೭॥

ಉತ್ತರೋತ್ತರ ವೈಶಿಷ್ಟ್ಯ ಮೇಷು ಯೋಗೇಷ್ವನುಕ್ರಮಾತ್ ।
ಅಹಂ ಸಂಗವಿನಿರ್ಮುಕ್ತೋ ಮಹಾಕಾಶೋಪಮಃ ಪರಃ ॥೧೮॥

ಸರ್ವಾ ವರಣನಿರ್ಮುಕ್ತೋ ಹ್ಯಚಿಂತ್ಯಃ ಸ್ವರಸೇನ ತು ।
ಜ್ಞೇಯಮೇತ್ಸಮಾಖ್ಯಾತಂ ಅಗ್ರಾಹ್ಯಮಪಿ ದೈವತೈಃ ॥೧೯॥

---

೧೭. ಪೂರ್ವೋಕ್ತವಾದ ಐದು ವಿಧವಾದ ಯೋಗಗಳ ಮಹಿಮೆಯನ್ನು ಹೇಳುತ್ತಾನೆ:—ಈ ಹಿಂದೆ ಹೇಳಿರುವ ಮಂತ್ರಯೋಗವೇ ಮೊದಲಾದ ಐದು ಯೋಗಗಳೂ, ಅಣಿಮಾದಿ ಅಷ್ಟೈಶ್ವರ್ಯಗಳನ್ನೂ ಮತ್ತು ಮೋಕ್ಷಸಾಧನೀ ಭೂತವಾದ ಜ್ಞಾನವನ್ನೂ, ಕೊಡತಕ್ಕವುಗಳಾಗಿರುತ್ತವೆ. ಆದರೆ ಈ ಐದು ಯೋಗಗಳಲ್ಲಿ ಪ್ರತಿಯೊಂದು ಯೋಗವೂ ಉತ್ತರೋತ್ತರ ಶ್ರೇಷ್ಠವಾದುದಾಗಿರುತ್ತದೆ. ಎಂದರೆ ಮಂತ್ರಯೋಗಕ್ಕಿಂತ, ಸ್ಪರ್ಶಯೋಗವು ಶ್ರೇಷ್ಠವಾಗಿಯೂ, ಸ್ಪರ್ಶಯೋಗಕ್ಕಿಂತ ಭಾವಯೋಗವೂ, ಇದರಂತೆ ಉತ್ತರೋತ್ತರ ಪ್ರತಿಯೊಂದು ಯೋಗವೂ ತಮ್ಮ ತಮ್ಮ ಹಿಂದಿನ ಯೋಗಕ್ಕಿಂತಲೂ, ಶ್ರೇಷ್ಠವಾದುದಾಗಿರುತ್ತದೆ.

೧೮–೧೯. ಮೋಕ್ಷಕ್ಕೆ ಸಾಧನವಾದ ಜ್ಞಾನದ ಆಕಾರವನ್ನು (ಎಂದರೆ ಸ್ವರೂಪವನ್ನು) ಈ ಶ್ಲೋಕಗಳಲ್ಲಿ ಹೇಳುತ್ತಾರೆ:—ನಾನು ಸ್ಥಾವರ ಜಂಗಮಾತ್ಮಕವಾದ ಈ ನಶ್ವರವಾದ ಪ್ರಪಂಚದ ಸಂಸರ್ಗವಿಲ್ಲದೇ ಇರುವವನೂ, ಆಕಾಶವು ಹೇಗೆ ವ್ಯಾಪಕವೋ, ಮತ್ತೂ ಪದಾರ್ಥಗಳ ಸಂಸರ್ಗವೂ ಇಲ್ಲದೇ ನಿರ್ಲಿಪ್ತವಾಗಿರುವುದೋ ಅದರಂತೆ ನಾನು ನಿರ್ಲಿಪ್ತನೂ ಮತ್ತು ವ್ಯಾಪಕನೂ, ಕಾಲತ್ರಯದಲ್ಲಿಯೂ ಇರುವವನೂ, ಸಂಸಾರಸಾಗರದಲ್ಲಿ ಮುಳುಗಿಸಿರುವ ಅವಿದ್ಯೆಯೆಂಬ ಬಂಧನದಿಂದ ವಿಮುಕ್ತನೂ, ವಸ್ತುತಃ ಅಚಿಂತ್ಯನೂ ಆಗಿರುವೆನು. ಎಂಬ ಈ ಜ್ಞಾನವೇ ಮೋಕ್ಷಕ್ಕೆ ಸಾಧನವಾಗಿರುತ್ತದೆ. ಆದರೆ ಇದನ್ನು ಪಡೆಯಲು ದೇವತೆಗಳಿಂದಲೂ ಅಸಾಧ್ಯವಾಗಿರುವುದು. (ಸುಲಭಪ್ರಾಪ್ಯವಲ್ಲವೆಂದರ್ಥ.)

ಪ್ರವಿಲೀನೋ ಮಹಾನ್ ಸಂಮ್ಯಕ್ ಸ್ವಯಂವೇದ್ಯಃ ಸ್ವಸಾಕ್ಷಿಕಃ ।
ಚಕಾಸ್ತ್ಯಾನಂದ ವಪುಷಾ ತೇನ ಜ್ಞೇಯ ಮಿದಂ ಮತಂ ॥೨೦॥
ಪರೀಕ್ಷಿತಾಯ ಶಿಷ್ಯಾಯ ಬ್ರಾಹ್ಮಣಾಯಾಹಿತಾಗ್ನಯೇ ।
ಧಾರ್ಮಿಕಾಯ ಕೃತಜ್ಞಾಯ ದಾತವ್ಯಂ ಕ್ರಮ ಪೂರ್ವಕಂ ॥೨೧॥
ಗುರುದೈವತ ಭಕ್ತಾಯ ಅನ್ಯಥಾ ನೈವ ದಾಪಯೇತ್ ॥
ನಿಂದಿತೋ ವ್ಯಾಧಿತೋಽಲ್ಪಾಯುಃ ತಥಾ ಚೈವ ಪ್ರಜಾಯತೇ ।
ದಾತುರಪ್ಯೇವ ಮನಘೇ ತಸ್ಮಾತ್ ಜ್ಞಾತ್ವೈವ ದಾಪಯೇತ್ ॥೨೨॥

---

೨೦. ಜ್ಞಾನಸಂಪಾದನೆಯಲ್ಲಿ ಉತ್ತಮಾಧಿಕಾರಿಯನ್ನು ಹೇಳುತ್ತಾನೆ:—ಯಾವನು ಶಮದಮಾದಿ ಸಾಧನ ಷಟ್ಕಗಳಿಂದ ಯುಕ್ತನಾಗಿ ಬಾಹ್ಯವಿಷಯಗಳಿಂದ ಮನಸ್ಸನ್ನು ಉಪಸಂಹರಿಸಿ, ವಿಷಯಗಳನ್ನು ವಿಲಾಪನೆಮಾಡುವ ಸಾಮರ್ಥ್ಯವುಳ್ಳವನೋ, ಮತ್ತು ನಾನು ಸ್ವಯಂ ಪ್ರಕಾಶಸ್ವರೂಪನೂ, ಪರಮಾತ್ಮನಿಗಿಂತಲೂ ವ್ಯತಿರಿಕ್ತವಾದ ಯಾವ ವಸ್ತುವೂ ಇರುವುದಿಲ್ಲವೆಂದು ತಿಳಿದು ಅಹಂಕಾರಾದಿಗಳಿಂದ ಬಿಡಲ್ಪಟ್ಟವನಾಗಿರುತ್ತಾನೋ ಅವನೇ ಮೋಕ್ಷಸಾಧನವಾದ ಜ್ಞಾನದಲ್ಲಿ ಉತ್ತಮಾಧಿ ಕಾರಿಯಾಗಿರುವನು.

೨೧. ಪೂರ್ವೋಕ್ತವಾದ ಮೋಕ್ಷಸಾಧನೀ ಭೂತವಾದ ಜ್ಞಾನವನ್ನು ಬ್ರಾಹ್ಮಣನೂ, ಅಗ್ನ್ಯಾಧಾನವನ್ನುಮಾಡಿದವನೂ, ಧಾರ್ಮಿಕನೂ, ಕೃತಜ್ಞನೂ, ಕೃತಘ್ನನಲ್ಲದವನೂ, ಗುರುವಿನಲ್ಲಿಯೂ, ಮತ್ತು ದೇವರಲ್ಲಿಯೂ, ಭಕ್ತಿಯುಳ್ಳವನೂ ಆದ ಶಿಷ್ಯನಿಗೆ ಅವನ ಗುಣಗಳನ್ನು ಪರೀಕ್ಷಿಸಿ ಉಪದೇಶಮಾಡಬೇಕು. ಇತರರಿಗೆ ಉಪದೇಶಿಸಬಾರದು.

೨೨. ಅಶಾಸ್ತ್ರೀಯವಾದ ಪಾಪ ಕರ್ಮಗಳ ಆಚರಣೆಯಿಂದ ಪತಿತನಾದವನೂ, ವ್ಯಾಧಿಪೀಡಿತನೂ, ಅಲ್ಪಾಯುವಾದವನೂ, ಈ ಜ್ಞಾನದಲ್ಲಿ ಅಧಿಕಾರಿಯಾಗುವುದಿಲ್ಲ. ಅನಧಿಕಾರಿಯಾದ ಶಿಷ್ಯನಿಗೆ ಜ್ಞಾನೋಪದೇಶವನ್ನು ಮಾಡುವ ಗುರುವೂ ಸಹ ಮಹಾಪಾತಕಕ್ಕೆ ಗುರಿಯಾಗುತ್ತಾನೆ. ಆದುದರಿಂದ ಶಿಷ್ಯನನ್ನು ದೋಷಿಯಲ್ಲವೆಂದೂ, ಗುಣಿಯೆಂದೂ ಪರೀಕ್ಷಿಸಿಯೇ ಜ್ಞಾನೋಪದೇಶವನ್ನು ಮಾಡಬೇಕು.

**ಸರ್ವಸಂಗ ವಿನಿರ್ಮುಕ್ತೋ ಮದ್ಭಕ್ತೋ ಮತ್ಪರಾಯಣಃ ॥೨೩॥**
**ಸಾಧಕೋ ಜ್ಞಾನ ಸಂಯುಕ್ತಃ ಶ್ರೌತಸ್ಮಾರ್ತ ವಿಶಾರದಃ ।**
**ಗುರುಭಕ್ತಶ್ಚ ಪುಣ್ಯಾತ್ಮಾ ಯೋಗ್ಯೋ ಯೋಗರತಃ ಸದಾ ॥೨೪॥**

**ಏವಂ ದೇವಿ ಸಮಾಖ್ಯಾತೋ ಯೋಗಮಾರ್ಗಃ ಸನಾತನಃ ।**
**ಸರ್ವ ವೇದಾಗಮಾಂಭೋಜ ಮಕರಂದಃ ಸುಮಧ್ಯಮೇ ॥೨೫॥**

**ಪೀತ್ವಾ ಯೋಗಾಮೃತಂ ಯೋಗೀ ಮುಚ್ಯತೇ ಬ್ರಹ್ಮವಿತ್ತಮಃ ।**
**ಏವಂ ಪಾಶುಪತಂ ಯೋಗಂ ಯೋಗೈಶ್ವರ್ಯ ಮನುತ್ತಮಂ ॥೨೬॥**

**ಅತ್ಯಾಶ್ರಮ ಮಿದಂ ಜ್ಞೇಯಂ ಮುಕ್ತಯೇ ಕೇನ ಲಭ್ಯತೇ ।**
**ತಸ್ಮಾದಿಷ್ಟೈಃ ಸಮಾಚಾರೈಃ ಶಿವಾರ್ಚನ ರತೈಃ ಪ್ರಿಯೇ ॥೨೭॥**

---

೨೩–೨೪. ಹಿಂದೆ ಹೇಳಿದ ಜ್ಞಾನಾಧಿಕಾರಿಯ ಗುಣವನ್ನೇ ಪುನಃ ಹೇಳುತ್ತಾನೆ:–ಎಲೈ ಪಾರ್ವತಿಯೇ, ವಿಷಯಸಂಸರ್ಗಕ್ಕೆ ಬಾಹಿರನೂ, ನನ್ನ ಭಕ್ತನೂ, ನಿರಂತರವಾಗಿ ನನ್ನನ್ನೇ ಚಿಂತಿಸುವವನೂ, ಸಾಧಕನೂ, ಪರೋಕ್ಷ ಜ್ಞಾನವುಳ್ಳವನೂ, ಶೌತಸ್ಮಾರ್ತ ಕರ್ಮನಿರತನೂ, ಗುರು ಭಕ್ತನೂ, ಪುಣ್ಯಾತ್ಮನೂ, ಯೋಗಾಸಕ್ತನೂ ಆದವನೇ ಈ ಯೋಗದಲ್ಲಿ ಅಧಿಕಾರಿಯು.

೨೫. ಎಲೈ ದೇವಿಯೇ, ಗುರುಶಿಷ್ಯ ಪರಂಪರಾಕ್ರಮದಿಂದ ಬಂದಿರುವ ಅನಾದಿಯಾದ ಈ ಯೋಗವು ಪೂರ್ವೋಕ್ತ ಪ್ರಕಾರವಾಗಿರುವುದು. ಕಮಲಗಳಲ್ಲಿ ಮಕರಂದವು ಹೇಗೆ ಸಾರಭೂತವಾದ ವಸ್ತುವೋ ಆದರಂತೆ, ಸಕಲ ವೇದಗಳಲ್ಲಿಯೂ, ಮತ್ತು ಉಪನಿಷತ್ತುಗಳಲ್ಲಿಯೂ, ಈ ಯೋಗ ಮಾರ್ಗವೇ ಸಾರಭೂತವಾದ ಅಂಶವಾಗಿರುತ್ತದೆ.

೨೬. ಬ್ರಹ್ಮಜ್ಞಾನಿಯಾದ ಯೋಗಿಯು ಈ ಪಾಶುಪತ ಯೋಗವೆಂಬ ಅಮೃತವನ್ನು ಪಾನಮಾಡಿ ಈ ಸಂಸಾರಪಾಶದಿಂದ ಬಿಡುಗಡೆಯನ್ನು ಹೊಂದುತ್ತಾನೆ.

೨೭. ಎಲೌ ಪ್ರೇಯಸಿಯೇ, ಈ ಯೋಗಮಾರ್ಗದಲ್ಲಿ ಆಶ್ರಮಾಪೇಕ್ಷೆಯು ಇರುವುದಿಲ್ಲ. ಆದುದರಿಂದ ಈಶ್ವರಸಂತೃಪ್ತಿಕರವಾದ ಸದಾಚಾರಗಳನ್ನು ಮಾಡುವವರೂ, ಈಶ್ವರಾರ್ಚನೆಯನ್ನು ಮಾಡುವವರೂ, ಆದ ಮಹಾತ್ಮರಿಂದಲೇ ಈ ಯೋಗರಹಸ್ಯವನ್ನು ತಿಳಿಯಲು

ಇತ್ಯುಕ್ತ್ವಾ ಭಗವಾನ್ ದೇವೀಮನುಜ್ಞಾಪ್ಯ ವೃಷಧ್ವಜಃ ।
ಶಂಕುಕರ್ಣಂ ಸಮಾಸಾದ್ಯ ಯುಯೋಜಾತ್ಮಾನ ಮಾತ್ಮನಿ ॥೨೮॥

॥ ಶೈಲಾದಿರುವಾಚ ॥

ತಸ್ಮಾತ್ತ್ವಮಪಿ ಯೋಗೀಂದ್ರ ಯೋಗಾಭ್ಯಾಸ ರತೋ ಭವ ।
ಸ್ವಯಂಭುವಃ ಪರಾ ಮೂರ್ತಿರ್ನೂನಂ ಬ್ರಹ್ಮಮಯೀ ವರಾ ॥೨೯॥

ತಸ್ಮಾತ್ಸರ್ವ ಪ್ರಯತ್ನೇನ ಮೋಕ್ಷಾರ್ಥೀ ಪುರುಷೋತ್ತಮಃ ।
ಭಸ್ಮಸ್ನಾಯೀ ಭವೇನ್ನಿತ್ಯಂ ಯೋಗೇ ಪಾಶುಪತೇ ರತಃ ॥೩೦॥

ಧ್ಯೇಯಾ ಯಥಾ ಕ್ರಮೇಣೈವ ವೈಷ್ಣವೀ ಚ ತತಃ ಪರಾ ।
ಮಾಹೇಶ್ವರೀ ಪರಾ ಪಶ್ಚಾತ್ಸೈವ ಧ್ಯೇಯಾ ಯಥಾ ಕ್ರಮಂ ॥೩೧॥

---

ಸಾಧ್ಯವು. ಇತರ ಯಾವ ಮನುಷ್ಯನಾದರೂ ಹೇಗೆತಾನೇ ಇದನ್ನು ತಿಳಿದಾನು?

೨೮. ಭಗವಂತನಾದ ಶಿವನು ಪೂರ್ವೋಕ್ತರೀತಿಯಿಂದ ಪ್ರೇಯಸಿಯಾದ ಪಾರ್ವತಿಗೆ ಯೋಗಮಾರ್ಗದ ರಹಸ್ಯವನ್ನು ಉಪದೇಶಿಸಿ ಅನುಜ್ಞೆಯನ್ನುಕೊಟ್ಟು, ಶಂಕುಕರ್ಣನೆಂಬ ಸಂಜ್ಞೆಯುಳ್ಳ ಪ್ರಮಥಗಣಗಳಲ್ಲಿ ಒಬ್ಬನಾದಗಣನನ್ನು ದ್ವಾರದಲ್ಲಿ ನಿಲ್ಲಿಸಿ, ನಿರತಿಶಯವಾದ ಮತ್ತು ತನ್ನ ನೈಜಸ್ವರೂಪವಾದ ಸಚ್ಚಿದಾನಂದ ಸ್ವರೂಪದಲ್ಲಿ ತಲ್ಲೀನನಾದನು.

೨೯. ನಂದಿಕೇಶ್ವರನು ಹೇಳಿದನು:–ಆದುದರಿಂದ ಎಲೈ ಸನತ್ಕುಮಾರನೇ, ನೀನು ಯೋಗದ ಅಭ್ಯಾಸದಲ್ಲಿ ಉತ್ತಮನಾದ ಅಧಿಕಾರಿಯಾಗಿರುವುದರಿಂದ ಈ ಪಾಶುಪತ ಯೋಗಮಾರ್ಗದಲ್ಲಿಯೇ ನಿರತನಾಗು. ಇದರಲ್ಲಿ ಸ್ವಯಂಭುವಾದ ಬ್ರಹ್ಮನ ಆಕಾರವೇ ಧ್ಯೇಯವಾಗಿಯೂ ಪರಮ ಪವಿತ್ರವಾಗಿಯೂ ಇರುತ್ತದೆ.

೩೦. ಆ ಕಾರಣದಿಂದ ಯಾವನು ಮೋಕ್ಷವನ್ನು ಬಯಸುವವನಾಗಿ ಪಾಶುಪತಯೋಗದಲ್ಲಿ ನಿರತನಾಗಿರುವನೋ ಅವನು ಪ್ರತಿದಿನವೂ ಭಸ್ಮಸ್ನಾನವನ್ನು ಆಚರಿಸಬೇಕು.

೩೧. ಪೂರ್ವೋಕ್ತರೀತಿಯಂತೆ ಮೊಟ್ಟಮೊದಲು ಬ್ರಹ್ಮನ ಮೂರ್ತಿಯನ್ನೂ, ಕ್ರಮವಾಗಿ ವಿಷ್ಣುವಿನ ಮೂರ್ತಿಯನ್ನೂ ಧ್ಯಾನಿಸಬೇಕು. ಪರಮೇಶ್ವರನ ಮೂರ್ತಿಯಧ್ಯಾನವೇ ಧ್ಯಾನದ ಈ ಕ್ರಮದಲ್ಲಿ ಅಂತ್ಯಾವಸ್ಥೆಯಾಗಿರುವುದು.

ಯೋಗೇಶ್ವರಸ್ಯ ಯಾ ನಿಷ್ಠಾ ಸೈಷಾ ಸಂಹೃತ್ಯ ವರ್ಣಿತಾ ॥೩೨॥
॥ ಸೂತ ಉವಾಚ ॥
ಏವಂ ಶಿಲಾದ ಪುತ್ರೇಣ ನಂದಿನಾ ಕುಲನಂದಿನಾ ।
ಯೋಗಃ ಪಾಶುಪತಃ ಪ್ರೋಕ್ತೋ ಭಸ್ಮನಿಷ್ಠೇನ ಧೀಮತಾ ॥೩೩॥
ಸನತ್ಕುಮಾರೋ ಭಗವಾನ್ ವ್ಯಾಸಾಯಾ ಮಿತ ತೇಜಸೇ ।
ತಸ್ಮಾದಹಮಪಿ ಶ್ರುತ್ವಾ ನಿಯೋಗಾತ್ಸತ್ರಿಣಾಮಪಿ ॥೩೪॥
ಕೃತಕೃತ್ಯೋಽಸ್ಮಿ ವಿಪ್ರೇಭ್ಯೋ ನಮೋ ಯಜ್ಞೇಭ್ಯ ಏವಚ ।
ನಮಃ ಶಿವಾಯ ಶಾಂತಾಯ ವ್ಯಾಸಾಯ ಮುನಯೇ ನಮಃ ॥೩೫॥
ಗ್ರಂಥೈಕಾದಶ ಸಾಹಸ್ರಂ ಪುರಾಣಂ ಲೈಂಗ ಮುತ್ತಮಂ ।
ಅಷ್ಟೋತ್ತರ ಶತಾಧ್ಯಾಯ ಮಾದಿಮಾಂಶ ಮತಃ ಪರಂ ॥೩೬॥

---

೩೨. ಈ ರೀತಿಯಲ್ಲಿ ಯೋಗಾಭ್ಯಾಸಿಯ ಯೋಗನಿಷ್ಠೆಯ ಕ್ರಮವು ಸಂಕ್ಷೇಪವಾಗಿ ಹೇಳಲ್ಪಟ್ಟಿರುತ್ತದೆ. ಶೈಲಾದಿಯು ಈ ಪ್ರಕಾರ ವಾಗಿ ಸನತ್ಕುಮಾರನಿಗೆ ಹೇಳಿದನು.

೩೩. ಸೂತನು ಹೇಳಿದನು :—ಎಲೈ ಋಷಿಗಳೇ, ಹಿಂದೆ ಹೇಳಿದ ರೀತಿಯಲ್ಲಿ ಶಿಲಾದ ಪುತ್ರನಾದ ಸದಾ ಭಸ್ಮಧಾರಿಯಾದ ನಂದಿಯಿಂದ ಪಾಶುಪತಯೋಗವು ಸನತ್ಕುಮಾರನಿಗೆ ಹೇಳಲ್ಪಟ್ಟಿತು.

೩೪–೩೫. ಈ ಯೋಗವನ್ನು ಭಗವಂತನಾದ ಸನತ್ಕುಮಾರನು ಮಹಾತೇಜಸ್ವಿಯಾದ ವ್ಯಾಸ ಮಹರ್ಷಿಗೆ ಉಪದೇಶಿಸಿದನು. ವ್ಯಾಸ ಮಹರ್ಷಿಯಿಂದ ನಾನು ಆ ಯೋಗದ ರಹಸ್ಯವನ್ನು ತಿಳಿದು ನಿಮ್ಮ ಕೋರಿಕೆಯನ್ನನುಸರಿಸಿ ವಿಪ್ರಶ್ರೇಷ್ಠರಾದ ನಿಮಗೆ ಇದನ್ನು ಉಪದೇಶಿಸಿ ಕೃತಕೃತ್ಯನಾಗಿರುವೆನು. ಶಾಂತನಾದ ಶಿವನಿಗೂ, ವ್ಯಾಸಮಹರ್ಷಿಗೂ ನಮಸ್ಕಾರವು.

೩೬. ಈ ಲಿಂಗಮಹಾಪುರಾಣವು ಹನ್ನೊಂದು ಸಾವಿರ ಶ್ಲೋಕ ಗಳಿಂದ ಯುಕ್ತವಾದುದಾಗಿರುತ್ತದೆ. ಇದರಲ್ಲಿ ಪೂರ್ವಭಾಗದಲ್ಲಿ ನೂರೆಂಟು ಅಧ್ಯಾಯಗಳೂ, ಮತ್ತು ಉತ್ತರಭಾಗದಲ್ಲಿ ನಲವತ್ತಾರು? ವ್ಯಾಖ್ಯಾನದಲ್ಲಿ ನಲವತ್ತು, ಒಂಬತ್ತು, ಆರು, ಒಟ್ಟು ಐವತ್ತೈದು ಎಂದು ಹೇಳಿದೆ. ಅಧ್ಯಾಯಗಳೂ ಇರುವುವು. ಈ ಸರ್ವ ಅಧ್ಯಾಯಾರ್ಥ ಗಳೂ ಧರ್ಮಾದಿ ಪುರುಷಾರ್ಥ ಚತುಷ್ಟಯಗಳನ್ನೂ ಕೊಡುವು ವಾಗಿರುತ್ತವೆ.

ಷಷ್ಟತ್ವಾರಿಂ (ಪಂಚಪಂಚಾ) ಶದಧ್ಯಾಯಂ ಧರ್ಮಕಾಮಾರ್ಥ
ಮೋಕ್ಷದಂ ।

ಅಥ ತೇ ಮುನಯಃ ಸರ್ವೇ ನೈಮಿಷೇಯಾಃ ಸಮಾಹಿತಾಃ ।
ಪ್ರಣೇಮುರ್ದೇವ ಮೀಶಾನಂ ಪ್ರೀತಿಕಂಟಕಿತತ್ವಚಃ ॥೩೭॥
ಶಾಖಾಂ ಪೌರಾಣಿಕೀ ಮೇವಂ ಕೃತ್ವೈಕಾದಶಿಕಾಂ ಪ್ರಭುಃ ॥೩೮॥
ಬ್ರಹ್ಮಾ ಸ್ವಯಂಭೂರ್ಭಗವಾನಿದಂ ವಚನಮಬ್ರವೀತ್ ।
ಲೈಂಗಮಾದ್ಯಂತ ಮಖಿಲಂ ಯಃ ಪಠೇಚ್ಛೃಣುಯಾದಪಿ ॥೩೯॥
ದ್ವಿಜೇಭ್ಯಃ ಶ್ರಾವಯೇದ್ವಾಽಪಿ ಸ ಯಾತಿ ಪರಮಾಂ ಗತಿಂ ।
ತಪಸಾ ಚೈವ ಯಜ್ಞೇನ ದಾನೇನಾಧ್ಯಯನೇನ ಚ ॥೪೦॥

---

೩೭. ತರುವಾಯ ನೈಮಿಷಾರಣ್ಯದಲ್ಲಿ ಪುರಾಣ ಶ್ರವಣಕ್ಕೋಸ್ಕರ ಸಮಾಸೀನರಾಗಿದ್ದ ಆ ಸರ್ವಋಷಿಗಳೂ ಮನಸ್ಸಮಾಧಾನವುಳ್ಳವರಾಗಿ ಅಮೋಘವಾದ ಈ ಪುರಾಣಶ್ರವಣದಿಂದ ಸಂತೋಷದ ರೋಮಾಂಚವುಳ್ಳವರಾಗಿ ದೇವನಾದ ಶಿವನನ್ನು ನಮಸ್ಕರಿಸಿದರು.

೩೮. ಸ್ವಯಂಭುವನಾದ ಬ್ರಹ್ಮನು ಈ ರೀತಿಯಲ್ಲಿ ಪುರಾಣಗಳಲ್ಲಿ ಹನ್ನೊಂದನೆಯ ಶಾಖೆಯಾದ ಈ ಪುರಾಣವನ್ನು ತಿಳಿಸಿ, ಹೀಗೆ ಹೇಳಿದನು.

೩೯. ಲಿಂಗಮಹಾಪುರಾಣವನ್ನು ಆದಿಯಿಂದ ಅಂತ್ಯದವರೆವಿಗೂ ಯಾವನು ಶ್ರವಣಮಾಡುವನೋ ಮತ್ತು ಇತರದ್ವಿಜರಿಗೆ ಶ್ರವಣವನ್ನು ಮಾಡಿಸುವನೋ ಅವನು ಶ್ರೇಷ್ಠವಾದ ಮೋಕ್ಷಪದವಿಯನ್ನು ಹೊಂದುವನು.

೪೦–೪೧. ಯಾವ ಮನುಷ್ಯನು ಈ ಲಿಂಗಮಹಾಪುರಾಣವನ್ನು ಅಧ್ಯಯನಮಾಡುವನೋ ಅಥವಾ ಈ ಕಥಾಭಾಗವನ್ನು ಇನ್ನೊಬ್ಬರಿಗೆ ತಿಳಿಸುವನೋ ಅಥವಾ ಈ ಪುರಾಣದಲ್ಲಿ ಹೇಳಿರುವಂತೆ ಶಿವನ ಪೂಜಾದಿಗಳನ್ನು ಆಚರಿಸುವನೋ ಅವನಿಗೆ ಈ ಸದಾಚಾರಾದಿಗಳಿಂದ ವೇದಬೋಧಿತವಾದ ಕರ್ಮಾನುಷ್ಠಾನಕ್ಕೆ ಯಾವ ಫಲವಿರುವುದೋ ಅದೇ ಸದ್ಗತಿಯು ದೊರೆಯುತ್ತದೆ. ಪೂರ್ವೋಕ್ತ ರೀತಿಯಂತೆ ಆಚರಿಸುವವನು ತಪಸ್ಸು, ಯಜ್ಞ, ದಾನ, ಅಧ್ಯಯನ, ಇವುಗಳಿಂದ, ಅಥವಾ ಸರ್ವ ಕರ್ಮ

**ಯಾಗತಿ ಸ್ತಸ್ಯ ವಿಪುಲಾ ಶಾಸ್ತ್ರವಿದ್ಯಾ ಚ ವೈದಿಕೀ ।**
**ಕರ್ಮಣಾ ಚಾಪಿ ಮಿಶ್ರೇಣ ಕೇವಲಂ ವಿದ್ಯಯಾಽಪಿ ವಾ ॥೪೧॥**

**ನಿವೃತ್ತಿಶ್ಚಾಸ್ಯ ವಿಪ್ರಸ್ಯ ಭವೇದ್ಭಕ್ತಿಶ್ಚ ಶಾಶ್ವತೀ ।**
**ಮಯಿ ನಾರಾಯಣೇ ದೇವೇ ಶ್ರದ್ಧಾ ಚಾಸ್ತು ಮಹಾತ್ಮನಃ ॥೪೨॥**

**ವಂಶಸ್ಯ ಚಾಕ್ಷಯಾ ವಿದ್ಯಾ ಚಾಪ್ರಮಾದಶ್ಚ ಶಾಶ್ವತಃ ।**
**ಇತ್ಯಾಜ್ಞಾ ಬ್ರಹ್ಮಣ ಸ್ತಸ್ಮಾ ತ್ತಸ್ಯ ಸರ್ವಂ ಮಹಾತ್ಮನಃ ॥೪೩॥**

**॥ ಋಷಯಃ ಪ್ರೋಚುಃ ॥**

**ಋಷೇಃ ಸೂತಸ್ಯ ಚಾಸ್ಮಾಕಂ ವಿಶೇಷಾಮಪಿ ಚಾಸ್ಯ ಚ ।**
**ನಾರದಸ್ಯಚ ಯಾ ಸಿದ್ಧಿಸ್ತೀರ್ಥಯಾತ್ರಾ ರತಸ್ಯ ಚ ॥೪೪॥**

**ಪ್ರೀತಿಶ್ಚ ವಿಪುಲಾ ಯಸ್ಮಾದಸ್ಮಾಕಂ ರೋಮಹರ್ಷಣ ।**
**ಸಾ ಸದಾಽಸ್ತುವಿರೂಪಾಕ್ಷ ಪ್ರಸಾದಾತ್ತು ಸಮಂತತಃ ॥೪೫॥**

---

ಸನ್ಯಾಸ ಪೂರ್ವಕವಾದ ವೈದಿಕ ವಿದ್ಯೆಯಿಂದ, ಕರ್ಮಸಹಿತವಾದ ಜ್ಞಾನ ದಿಂದ ಯಾವ ಫಲವು ದೊರೆಯುತ್ತದೋ ಅದನ್ನೂ, ವೇದಾಂತ ಶಾಸ್ತ್ರಜ್ಞಾ ದಿಂದ ಕಡೆಗೆ ಉಂಟಾಗುವ ಶಾಶ್ವತವಾದ ಮೋಕ್ಷಪದವಿಯನ್ನೂ ಹೊಂದುವನು.

೪೨–೪೩. ಸದಾ ಈ ಪುರಾಣವನ್ನು ಪರಿಶೀಲಿಸುವ ಮಹಾತ್ಮನಿಗೆ ನನ್ನಲ್ಲಿಯೂ ಮತ್ತು ದೇವನಾದ ವಿಷ್ಣುವಿನಲ್ಲಿಯೂ, ಶ್ರದ್ಧೆಯು ವಿಶೇಷ ವಾಗಿರಲಿ. ಇದಲ್ಲದೇ ಅವನ ವಂಶ ಪರಂಪರೆಗೆ ಅಕ್ಷಯವಾದ ಜ್ಞಾನವು ಪ್ರಾಪ್ತವಾಗಿ ಸಂಸಾರದುಃಖದಿಂದ ಮೋಕ್ಷವೂ ದೊರಕಲಿ. ಈ ರೀತಿ ಯಲ್ಲಿ ಬ್ರಹ್ಮನೇ ಆಜ್ಞೆಯನ್ನು ಮಾಡಿರುವನು. ಆದುದರಿಂದ ಅಂಥವ ನಿಗೆ ಸಕಲ ಇಷ್ಟಾರ್ಥವೂ ದೊರೆಯುವುದು.

೪೪–೪೫. ಋಷಿಗಳು ಹೇಳಿದರು:–ಋಷಿಯಾದ ಸೂತನಿಗೂ, ನಮಗೂ, ಪುರೋವರ್ತಿಗಳಾದ ಋಷಿಗಳಿಗೂ, ತೀರ್ಥಯಾತ್ರಾಸಕ್ತನಾದ ನಾರದ ಮಹರ್ಷಿಗೂ, ಈ ಪುರಾಣಶ್ರವಣದಿಂದುಂಟಾಗುವ ಸಿದ್ಧಿಯು ಆಗಲಿ. ಮತ್ತು ಈಶ್ವರಾನುಗ್ರಹದಿಂದ ಸಕಲರಲ್ಲಿಯೂ ಈಶ್ವರನ ಪ್ರೀತಿಯುಂಟಾಗಲಿ.

ಏವಮುಕ್ತೇಷು ವಿಪ್ರೇಷು ನಾರದೋ ಭಗವಾನಪಿ ।
ಕರಾಭ್ಯಾಂ ಸುಶುಭಾಗ್ರಾಭ್ಯಾಂ ಸೂತಂ ಪಸ್ಪರ್ಶವಾಂಸ್ತ್ವಚಿ ॥೪೬॥
ಸ್ವಸ್ತ್ಯಸ್ತು ಸೂತ ಭದ್ರಂ ತೇ ಮಹಾದೇವೇ ವೃಷಧ್ವಜೇ ।
ಶ್ರದ್ಧಾ ತವಾಸ್ತು ಚಾಸ್ಮಾಕಂ ನಮಸ್ತಸ್ಮೈ ಶಿವಾಯ ಚ ॥೪೭॥

ಇತಿ ಶ್ರೀ ಲಿಂಗಮಹಾಪುರಾಣೇ ಉತ್ತರಭಾಗೇ ಪಂಚ
ಪಂಚಾಶತ್ತಮೋಽಧ್ಯಾಯಃ
ಸಮಾಪ್ತಂಚೈತಲ್ಲಿಂಗೋತ್ತರಾರ್ಧಂ
॥ ಸಮಾಪ್ತಂ ಚೇದಂ ಲಿಂಗಮಹಾಪುರಾಣಂ ॥

---

೪೬–೪೭. ಬ್ರಾಹ್ಮಣರೆಲ್ಲರೂ ಹೀಗೆಂದು ಹೇಳಲು ಭಗವಂತನಾದ ನಾರದನು ಸಮೀಚೀನವಾದ ತನ್ನ ಕರಾಗ್ರಗಳಿಂದ ಸೂತನನ್ನು ಸ್ಪರ್ಶಿಸಿ ಹೀಗೆಂದುಹೇಳಿದನು. ಎಲೈ ಸೂತಮಹರ್ಷಿಯೇ, ನಿನಗೆ ಮಂಗಳವಾಗಲಿ, ಮತ್ತು ನಿನಗೂ ನಮ್ಮಗಳಿಗೂ ಸಹ ವೃಷಭಾರೂಢನಾದ ಈಶ್ವರನಲ್ಲಿ ಗಾಢವಾದ ಭಕ್ತಿಯು ಆವಿರ್ಭವಿಸಿರಲಿ. ಆ ಶಿವನಿಗೆ ನಮಸ್ಕಾರವು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಐವತ್ತೈದನೆಯ
ಅಧ್ಯಾಯವು ಮುಗಿದುದು.

ಶ್ರೀ ಲಿಂಗಮಹಾಪುರಾಣದಲ್ಲಿ ಉತ್ತರಭಾಗವು ಸಮಾಪ್ತವಾಯಿತು

ಶ್ರೀ ಲಿಂಗಮಹಾಪುರಾಣವೂ ಮುಗಿದುದು.

॥ ಶ್ರೀರಸ್ತು ॥

॥ ಶ್ರೀ ಭವಾನೀ ಶಂಕರಾರ್ಪಣಮಸ್ತು ॥



೧. ವಾರ್ಧಕ್ಯೇ ಕ್ಲೇಶಹೇತಾ ವಧಿಕೃತಿವಿರತೌ ದೇಹಶಕ್ತೌ ಗತಾಯಾಂ
ಆದಾಯೇಽತ್ಯಂತಹೀನೇ ವ್ಯಯಪರಿಕಲನೇ ಪೂರ್ವವದ್ವಾಽಧಿಕೇಽಪಿ ।
ಅಜ್ಞಾನಾಲಸ್ಯರೋಗೈಃ ಮನಸಿ ಪರವಶೇ ಧರ್ಮಸಂಕೋಚಕಾಲೇ
ಸ್ವಾಮಿನ್ ಶಂಭೋ ತ್ವದೀಯಾ ನಿರುಪಧಿಕರುಣಾ ಕೇವಲಂ ಮೇಽವಲಂಬಃ ॥

೨. ಶಿವೇ ತವ ಕೃಪಾ ದದೌ ಗೃಹಕಳತ್ರ ವಿತ್ತಾದಿಕಂ
ಸುತಾನ್ ದುಹಿತೃ ತತ್ಸುತಾನ್ ಸುಕೃತಯಶ್ಚ ಕಾಶ್ಚಿತ್ ಕೃತಾಃ ।
ಅಲಂಮತಿ ರಿಹಾರ್ಥಯೋ ರ್ಮಮಕದಾಽಂತವಾಶಾ ವ್ರಜೇತ್
ಪ್ರಬೋಧ ಸುಖಮಸ್ತು ಮೇ ಪರವಿರಕ್ತಿ ಮುಕ್ತೀ ಸದಾ ॥

---

೧. ಓ ಪರಮೇಶ್ವರನೇ, ಕೇವಲ ಕ್ಲೇಶಗಳಿಗೇಕಾರಣವಾಗಿರುವ ಮುಪ್ಪಿನ ಕಾಲವು ಈಗನನಗೂ ಬಂದಿದೆ ನನಗಿದ್ದ ಅಧಿಕಾರದಿಂದ ವಿಶ್ರಾಂತಿಯೂ ಬಂದಿದೆ. ದೇಹದಲ್ಲಿ ಸಾಮರ್ಥ್ಯವು ತುಂಬ ಕುಗ್ಗಿಹೋಗಿದೆ. ನನಗಿರುವ ವರಮಾನವು ಅತ್ಯಂತವಾಗಿ ಕಡಿಮೆಯಾಗಿಯೇ ಇದೆ. ಗೃಹಕೃತ್ಯನಿರ್ವಾಹಕ್ಕೆ ಬೇಕಾದ ವೆಚ್ಚವಾದರೋ ಮೊದಲಿನಂತೆಯೇ ಹೆಚ್ಚಾಗಿಯೇ ಇದೆ. ಅಥವಾ ಆದಾಯಕ್ಕಿಂತ ವ್ಯಯವೂ ತುಂಬ ಹೆಚ್ಚಾಗಿಯೇ ಇದೆ. ತಿಳಿವಳಿಕೆಯು ಇಲ್ಲದಿರುವುದರಿಂದಲೂ, ದುಡಿಯಲಾರದ ಸೋಮಾರಿತನದಿಂದಲೂ, ನಾನಾಬಗೆಯ ರೋಗ ರುಜಿನಗಳಿಂದಲೂ, ನನ್ನಮನಸ್ಸೂ ಪರವಶವಾಗಿ ಸ್ವಾಧೀನದಲ್ಲಿಲ್ಲವು. ಧರ್ಮಾಚರಣೆಯೂ ಈ ಮೇಲಿನ ಎಲ್ಲ ಕಾರಣಗಳಿಂದ ಬಹುಮಟ್ಟಿಗೆ ಕಡಿಮೆಯಾಗಿಯೇ ಇರಬೇಕಾಗಿದೆ. ಆದುದರಿಂದ ಎಲ್ಲರಿಗೂ ಸುಖವನ್ನುಂಟುಮಾಡುವ, ದುಃಖವನ್ನು ನಿವಾರಿಸುವ, ಓ ಶಂಕರನೇ, ನಿನ್ನ ಅವ್ಯಾಜಕರುಣೆ ಯೊಂದೇ ನನಗೆ ಈಗ ಊರುಗೋಲಿನಂತೆ ಆಶ್ರಯವನ್ನು ಕೊಡಬಲ್ಲದ್ದಾಗಿದೆ. ನಿನ್ನ ದಯೆಯನ್ನು ನಾನು ಪಡೆಯುವಂತಾಗಲಿ ಎಂದು ಪ್ರಾರ್ಥಿಸುತ್ತಿದೇನೆ.

೨. ಮಂಗಳಕರಳಾದ ಓ ತಾಯಿಯೇ, ನಿನ್ನ ಕರುಣೆಯು ನನಗೆ ಮನೆ, ಹೆಂಡಿತಿ, ಐಶ್ವರ್ಯ, ಅಧಿಕಾರ, ಮಕ್ಕಳು, ಮೊಮ್ಮಕ್ಕಳು,

**ಕರ್ಣಾಟಾಧಿಪತಿ ಶ್ರೀಮಜ್ಜಯಚಾಮೇಂದ್ರ ಶಾಸನಾತ್ ।**
**ಮಹಾಪುರಾಣಂ ಲೈಂಗಾಖ್ಯಂ ವರಕನ್ನಡ ಭಾಷಯಾ ॥**

**ಸುಬ್ಬಮ್ಮಾಂಬಾ ದೇವಯಜ್ವ ತನಯಃ ಚಂದ್ರಶೇಖರಃ ।**
**ಜಾಮದಗ್ನ್ಯವತ್ಸ ಗೋತ್ರ ಜಾತೋ ಋಗ್ವೇದ ಪಾಠಕಃ ॥**

---

ಆಯುಸ್ಸು, ದೇಹಾರೋಗ್ಯ, ಈ ಮುಂತಾದ ಐಹಿಕವಾದ ಸುಖಸಾಧನಗಳನ್ನು ನನ್ನ ಯೋಗ್ಯತೆ ಅರ್ಹತೆಗಳಿಗೆ ತಕ್ಕಮಟ್ಟಿಗೆ ಅನುಗ್ರಹಿಸಿರುತ್ತದೆ. ಯಶಸ್ಕರವಾದ ಧಾರ್ಮಿಕ ಗ್ರಂಥಗಳ ವ್ಯಾಸಂಗ ಪರಿವರ್ತನೆಯ ಕಾರ್ಯಗಳಿಂದ ಪ್ರಭುಸೇವೆ, ಜನಸೇವೆ, ಭಾಷಾ ಸೇವೆ, ಇವುಗಳನ್ನೂ ನನ್ನ ಬುದ್ಧಿಶಕ್ತಿ ಸನ್ನಿವೇಶಗಳಿಗೆ ತಕ್ಕಂತೆ ನೆರವೇರಿಸುತ್ತಾ ಈ ಜನ್ಮವನ್ನು ಅಲ್ಪವಾಗಿಯಾದರೂ ಸಾರ್ಥಕವನ್ನಾಗಿ ಮಾಡಿಕೊಂಡಿರುವುದೂ ಆಗಿದೆ. ಇಂತಹ ಸುಖಾಭಾಸಗಳ ಸಾಧನ ಸೌಕರ್ಯಗಳು ಎಷ್ಟು ಹೆಚ್ಚಿನವಾಗಿದ್ದರೂ ಅವೆಲ್ಲವೂ, ಅವಿಶುದ್ಧಿ, ಕ್ಷಯ, ತಾರತಮ್ಯಗಳೆಂಬ ಸಾರ್ವತ್ರಿಕವೂ ಅನಿವಾರ್ಯವೂ ಆಗಿರುವ ದೋಷಗಳಿಂದ ಕೂಡಿಯೇ ಇರುತ್ತಾ, ನಿತ್ಯಾನಂದಕ್ಕಾಗಲಿ, ಈ ಸಾಂಸಾರಿಕವಾದ ನಿರ್ಬಂಧದ ದುಃಖದ ಆತ್ಯಂತಿಕವಾದ ನಾಶಕ್ಕಾಗಲಿ ಕಾರಣವಾಗಲಾರವು. ಎಂಬ ನಿಜಾಂಶವನ್ನು ಮನಗಂಡುದೂ ಆಗಿದೆ. ಆದುದರಿಂದ ಇಂಥ ವಿಷಯಗಳಲ್ಲಿ ನನಗೆ ಆಶೆಯು ಇನ್ನೂ ಹೆಚ್ಚುತ್ತಾ ಮುಂದುವರಿಯದೆ, ಅಲಂಬುದ್ಧಿಯು ಎಂದರೆ, ಇಷ್ಟು ಸಾಕು, ಇನ್ನೂ ಹೆಚ್ಚಾಗಿ ಬೇಡ. ಎಂಬ ತೃಪ್ತಿ ಮನೋಭಾವವು ನನ್ನ ಹೃದಯದಲ್ಲಿ ಬಲಗೊಳ್ಳುವಂತಾಗಲಿ, ಎಂದು ಪ್ರಾರ್ಥಿಸುತ್ತಿದೇನೆ. ಏಕೆಂದರೆ ಈ ಆಶೆಗಳಿಗೆ ಪರ್ಯವಸಾನವೇ ಉಂಟಾಗದೆ, ಶಾಂತಿ ಸುಖಗಳು ಎಂದಿಗೂ ದೊರೆಯದೇ ಹೋಗಿ, ನಿಶ್ಶ್ರೇಯಸಪ್ರಾಪ್ತಿಗೆ ಇವು ಅಡ್ಡಿಗಳಾಗಿಯೇ ಪರಿಣಮಿಸುತ್ತಿರುತ್ತವೆ. ಆದುದರಿಂದ ನಾನು ಯಾವಾಗಲೂ ಮೇಲಾದ ವೈರಾಗ್ಯವನ್ನೂ, ಪರತತ್ವಜ್ಞಾನದ, ಬ್ರಹ್ಮಾತ್ಮೈಕ್ಯ ಸಾಕ್ಷಾತ್ಕಾರದ, ಮೋಕ್ಷದ, ನಿತ್ಯಾನಂದದ ಅಪರೋಕ್ಷಾನುಭವವನ್ನೂ ಸಂತೋಷದಿಂದ ಪಡೆಯುವಂತಾಗಲೆಂದು ಜಗನ್ಮಾತೆಯಾದ ನಿನ್ನ ಅಡಿ

ಆವರ್ತ್ತ ಪುರ್ಯಭಿಜನಃ ಮಹಾವಿದ್ವಾನಿತಿ ಶ್ರುತಃ ।
ಜನಾನಾ ಮು ಪಕಾರಾಯ ಪರ್ಯವರ್ತ್ತಯ ದಾದರಾತ್ ॥

ವಾಣೀಸೇವಾಂ ರಾಜಸೇವಾಂ ಜನಸೇವಾಂ ಮುದಾ ಕೃತಾಂ ।
ಸ್ವೀಕೃತ್ಯ ತುಷ್ಯತು ಗುರುಃ ದೇವೋ ರಾಜಾ ಚ ಭಾರತೀ ॥

॥ ಓಂತತ್ಸತ್ ಶ್ರೀ ಸಾಂಬ ಸದಾಶಿವಾರ್ಪಣ ಮಸ್ತು.॥

---

ದಾವರೆಗಳಲ್ಲಿ ಕೃತಜ್ಞತೆ ಭಕ್ತಿಗಳೊಡನೆ ವಿಜ್ಞಾಪಿಸುತ್ತಾ ಪ್ರಾರ್ಥಿಸುತ್ತಿರುತ್ತೇನೆ.

ಅಷ್ಟಾವಕ್ರಗೀತೆ, ದೇವೀ ಮಾಹಾತ್ಮ್ಯ (ದುರ್ಗಾಸಪ್ತಶತೀ,) ಪಂಚೋಪನಿಷತ್ತುಗಳು, ದೇವೀಭಾಗವತ ಮಹಾಪುರಾಣ, ಲಿಂಗಮಹಾಪುರಾಣ, ಸೂತ ಸಂಹಿತಾ, ತ್ರಿಪುರಾ ರಹಸ್ಯ, ಕಲ್ಕಿಪುರಾಣ, ಆದಿಪುರಾಣ, ಶ್ರೀವಿದ್ಯಾಮಂತ್ರಭಾಷ್ಯ, ಅರ್ಕೇಶ್ವರ ಕ್ಷೇತ್ರಮಹಿಮೆ, ಇತ್ಯಾದಿ ಸಂಸ್ಕೃತ ಗ್ರಂಥಗಳ ಅರ್ಥಾನುವಾದಗಳನ್ನು ಕನ್ನಡದಲ್ಲಿ ಬರೆದು ಪ್ರಕಟಿಸಿರುವ ಚಂದ್ರಶೇಖರ ಶಾಸ್ತ್ರಿಯ ಗ್ರಂಥಗಳಲ್ಲಿ ಲಿಂಗಮಹಾಪುರಾಣದ ಉತ್ತರಭಾಗದಲ್ಲಿ ಎರಡನೆಯ ಮತ್ತು ಕಡೆಯದಾದ ಈ ಸಂಪುಟವು ಇಲ್ಲಿಗೆ ಮುಗಿಯಿತು.

ಶ್ರೀ ಲಿಂಗಮಹಾಪುರಾಣವೂ ಮುಗಿದುದು.

---

